"ಅಮ್ಮಾ, ತುಂಬಾ ಉರೀತಾಯಿದೆ, ತುರಿಸ್ತಾಯಿದೆ, ನೋಡಬಾರಮ್ಮ."







2 ಬಗೆಯ ಡಬ್ಬಿಗಳಲ್ಲಿ ಲಭ್ಯ 'ನೀಲಿ' ಮತ್ತು 'ಚಂದನ್'.

ನೈಸಿಲ್ ತನ್ನಿರಿ ತ್ವಚೆ ಉರಿತವನ್ನು ಮರೆಯಿರಿ.



ಔಷಧಿಯುಕ್ತ ನೈಸಿಲ್!

1. ಹೆಚ್ಚಿನ ಬೆವರನ್ನು ತಡೆಯುತ್ತದೆ.
2. ಬೆವರನ್ನು ಹೀರಿಕೊಳ್ಳುತ್ತದೆ.
3. ದುರ್ವಾಸನೆ ಕೊಡುವ ಕ್ರಿಮಿಗಳನ್ನು ನಾಶಮಾಡುತ್ತದೆ.
4. ತ್ವಚೆಯನ್ನು ಸಂತವಿಸುತ್ತದೆ.

CASGLN-4 152 KAN

# 'ಕಸ್ತೂರಿ'ಯ ಅರ್ಧವಾರ್ಷಿಕ ಪರಿವಿಡಿ

## ಮಾರ್ಚ್ ೧೯೮೨ ರಿಂದ ಅಗಸ್ಟ್ ೧೯೮೨ ರ ವರೆಗೆ

**ಕ್ರಮ : ಲೇಖನದ ಹೆಸರು, ತಿಂಗಳು, ಪುಟಸಂಖ್ಯೆ**

ಮಾ = ಮಾರ್ಚ್, ಎ = ಎಪ್ರಿಲ್, ಮೆ = ಮೇ, ಜೂ = ಜೂನ್,
ಜು = ಜುಲೈ, ಅ = ಅಗಸ್ಟ್

---

**ಅನುಭವ**



**ಆರೋಗ್ಯ-ವೈದ್ಯಕೀಯ**



**ಇತಿಹಾಸ**



**ಇದುವೆ ಜೀವ ಇದು ಜೀವನ**



**ಕವನ-ಉವಾಚ**

### ದೇಶ-ನಗರ



### ನಿಮ್ಮ ಶಬ್ದಭಾಂಡಾರ ಬೆಳೆಯಲಿ



### ನೀತಿಕಥೆ



### ಪದಾರ್ಥ ಚಿಂತಾಮಣಿ



### ಪುಸ್ತಕ-ವಿಭಾಗ



### ಪ್ರಾಣಿ ಜೀವನ



### ರಹಸ್ಯ-ಸಾಹಸ-ಸೋಜಿಗ

## ವಿಜ್ಞಾನ



## ಸಾಮಾನ್ಯ



## ಹರಟೆ-ನಗೆಬರಹ

# ಕಸ್ತೂರಿ

ಕನ್ನಡ ಡೈಜೆಸ್ಟ್



ಸಂಪಾದಕ :

ಬಿ. ಎಸ್. ಗೋಪಾಲಕೃಷ್ಣ

ಸಹಾಯಕ ಸಂಪಾದಕ :

ಮಾಧವ ನಾ. ಮಹಿಷಿ

ಆಡಳಿತ :

ಕೆ. ಬಿ. ಕುಲಕರ್ಣಿ

ಮುಖಪುಟ :

ಲಾಜವಂತಿ

ಚಿತ್ರ :

ಗೋಪಾಲ ಸುಬೇದಾರ

ಜನವರಿ ೧೯೮೨ರಿಂದ ಜಾರಿಯಲ್ಲಿ ಬಂದಿರುವ ಚಂದಾ ದರಗಳು :

| | | |
|---|---|---|
| ಬಿಡಿ ಸಂಚಿಕೆ | ... | ೨-೫೦ |
| ೧ ವರ್ಷಕ್ಕೆ | ಅಂಚೆ ಸೇರಿ | ೨೯-೦೦ |
| ೨ ವರ್ಷಕ್ಕೆ | ,, | ೫೫-೦೦ |
| ೩ ವರ್ಷಕ್ಕೆ | ,, | ೮೨-೦೦ |

KASTURI August 1982

# ಬೆಳಕಿಂಡಿ

"ಹಿಂದಿನದರ ಬಗ್ಗೆ ಮಾತನಾಡುವಾಗ ಗಂಡಸರು ಬರಿ ಕೊಚ್ಚಿಕೊಳ್ಳುತ್ತಾರೆ."

"ಹೆಂಗಸರು?"

"ಅವರು ಮಾತನಾಡುವುದೇ ಇಲ್ಲ."

— ಜಾನ್ ನ್ಯೂಟನ್ ಬೇಕರ್

*

ನೀವು ಉಪದೇಶಗಳನ್ನು ಕೊಡಲೇ ಬೇಕಿದ್ದರೆ ಅದನ್ನು ಧಾರಾಳವಾಗಿ ಮಾತ್ರ ಕೊಡಲು ಹೋಗಬೇಡಿ.

ಡಾಕ್ಟರನೋ, ವಕೀಲನೋ ಆಗಿ-ಉಪದೇಶವನ್ನೂ ಕೊಡಬಹುದು-ಉದರಂಭರಣವನ್ನೂ ಮಾಡಬಹುದು.

— ಜಾಂಬೋರಿ

*

ಗಂಡಸರಲ್ಲಿ ಎರಡು ವಿಧಗಳು;

ತಮಗೆ ಹೇಳಿದ್ದನ್ನು ಮಾಡಲಿಕ್ಕಾಗದೆ ಪೇಚಾಡುವವರು ಮತ್ತು ಅದರ ಬಗ್ಗೆಯೇ ಪೇಚಾಡಿಯೂ ಅದನ್ನು ಮಾಡಲಿಕ್ಕಾಗದವರು.

— ಸೈರಸ್ ಕರ್ಟಿಸ್

✡

## ಚಂದಾದಾರರಿಗೆ ಸೂಚನೆ

'ಕಸ್ತೂರಿ' ತಿಂಗಳ ಒಂದನೇ ದಿನಾಂಕ-ದೊಳಗೇ ಪ್ರಕಟವಾಗುವುದು. ತಿಂಗಳ ೫ ನೇ ದಿನಾಂಕದೊಳಗೆ ತಲಪದೇ ಹೋದರೆ ಚಂದಾದಾರರು ತಮ್ಮ ಟಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಪತ್ರವ್ಯವಹಾರ ಮಾಡುವಾಗ ಚಂದಾ ನಂಬರು ಹಾಕಿರಬೇಕು.

# ಈ ಸಂಚಿಕೆಯಲ್ಲಿ



**ಪುಸ್ತಕ ವಿಭಾಗ**

**ಡಾ. ಕೌಲಗುಡ್ಡರು**

ಜುಲೈ ೧೯೮೭ ರ 'ಕಸ್ತೂರಿ' ಸಂಚಿಕೆಯಲ್ಲಿ ಡಾ. ಶ್ರೀನಿವಾಸ ಕೌಲಗುಡ್ಡರ ಕುರಿತು ಲೇಖನ ಓದಿದೆ. ಲೇಖಕಿಗೆ ಧನ್ಯವಾದಗಳು. ಆದರೆ ಡಾ. ಎಸ್. ಎನ್. ಕೌಲಗುಡ್ಡರ ವೈದ್ಯಕೀಯ ಕ್ಷೇತ್ರದ ಸಾಧನೆಗಳ ಬಗೆಗಿನ ಮಾಹಿತಿಯನ್ನು ಒಳಗೊಂಡಿದ್ದರೆ ಲೇಖನ ಪೂರ್ಣವಾಗುತ್ತಿತ್ತು. ಆದರ್ಶ ಗುರು–ನಿರಪೇಕ್ಷವೈದ್ಯ ಡಾ. ಕೌಲಗುಡ್ಡರ ಶಿಷ್ಯ ಬಳಗದಲ್ಲಿ ನಾನೂ ಒಬ್ಬ. ಅವರು ಗುರುಗಳಾಗಿ ಮತ್ತು ಆಸ್ಪತ್ರೆಯ ನಿಷ್ಠಾವಂತ ವೈದ್ಯರಾಗಿ 'ಸ್ತ್ರೀರೋಗ' ಹಾಗೂ 'ಪ್ರಸವ ಲೋಕ'ಕ್ಕೆ ಅನೇಕ ಲೇಖನಗಳನ್ನು ಬರೆದಿದ್ದಾರೆ. ಇರಲಿ.

ಮೊನ್ನೆ ರಾಜ್ಯ ಆರೋಗ್ಯ ಸಚಿವ ಶ್ರೀ ಅಬ್ದುಲ್‌ಸಮದ್ ಅಥಣಿಗೆ ಬಂದಾಗ ನಮಗೆ ಹೇಳಿದ್ದು, "ಸೇವಾಸಮರ್ಪಿತ (Dedicated) ಇದರ ಗ್ರಂಥಸ್ಥ ಅರ್ಥ ಶಬ್ದಕೋಶದಲ್ಲಿ ಕಾಗದದ ಮೇಲೆ ಮಾತ್ರ ದೊರೆಯಬಹುದು. ಆದರೆ ಅದನ್ನು ಜೀವಂತವಾಗಿ ಕಾಣಬೇಕಾದರೆ ಕೆ. ಎಂ. ಸಿ. ಯಲ್ಲಿ ಡಾ. ಕೌಲಗುಡ್ಡರನ್ನು ನೋಡಿ ತಿಳಿದುಕೊಳ್ಳಿ. ತಮ್ಮ ಮಗಳ ಮದುವೆಯ ನಿಶ್ಚಿತಾರ್ಥದ ವೇಳೆಯಲ್ಲಿ ಕೌಲಗುಡ್ಡರು ಬೇರೆ ಊರಲ್ಲಿ ಶಸ್ತ್ರಚಿಕಿತ್ಸೆಯಲ್ಲಿ ತೊಡಗಿದ್ದರು…"

ಅಥಣಿ —ಡಾ. ವಸಂತ ಕುಲಕರ್ಣಿ

ಈ ತಿಂಗಳ 'ಕಸ್ತೂರಿ'ಯಲ್ಲಿ ಡಾ. ಎಸ್.ಎನ್. ಕೌಲಗುಡ್ಡರವರ ಬಗ್ಗೆ ಬರೆದ ಲೇಖನ ಓದಿದೆ. ತುಂಬಾ ಸಂತೋಷವಾಯಿತು. ಅವರು ಬರೀ ವೈದ್ಯರಲ್ಲ; ಭವರೋಗ ವೈದ್ಯರೂ ಭವಸಾಗರ ವೈದ್ಯರೂ ಆಗಿದ್ದಾರೆ. ಒಮ್ಮೆ ಹೆರಿಗೆಯಾದ ಮಹಿಳೆಯ ಮಗು ತೀರಿಹೋಗಿ, ಆಕೆ ೯ ತಿಂಗಳ ಕಾಲ ಹೊತ್ತು, ಪತ್ತಾದ ಮೇಲೆ ಕೈಗೊಂದು ಕೂಸನ್ನು ಕೊಡಲಾರದ ಪರಿಸ್ಥಿತಿಯುಂಟಾದಾಗ, "ನಾವು ವೈದ್ಯರು ಇದ್ದೂ ಸತ್ತಂತೆಯೇ" ಎಂದು ಕಣ್ಣೀರು ಹಾಕಿ ಅತ್ತಿದ್ದರು. ಅವರು ಸ್ತ್ರೀರೋಗ ವಿಭಾಗದ ಮುಖ್ಯಸ್ಥರಾಗಿ ಮೈಸೂರಿಗೆ ಬಂದಾಗ ನಮಗಾದ ಆನಂದ ಅಷ್ಟಿಷ್ಟಲ್ಲ. ಆಗ ನಾವು

'ನೀನು ಚಾಲಕ ಶಕ್ತಿ, ನಾನೊಂದು ಯಂತ್ರ
ನಾನೊಂದು ಬರಿಯ ಮನೆ ನೀನದರ ಮಂತ್ರ
ನಾನೊಂದು ರಥವಾಗೆ ನೀನದರ ರಥಿಕ
ನೀ ನಡೆಸೆ ನಾ ನಡೆವೆ ನಿನ್ನದೀ ಲೋಕ.'

ಸಾಸ್ತಾನ (ದ.ಕ.) -ಡಾ. ಎ. ಚಂದ್ರಶೇಖರ ಉಡುಪ

**ವಿಳಂಬ ಗಣಿತ?**

ಪ್ರಕಾಶ ಎ. ಟಿ. ಯವರು 'ವರ್ಗಕ್ಕೊಂದು ಸುಲಭ ಸೂತ್ರ' ಎಂಬ ಲೇಖನದಲ್ಲಿ (ಜುಲೈ ಸಂಚಿಕೆ) ೧೦ ರಿಂದ ೯೯ ರ ವರೆಗೆ ವರ್ಗ ಕಂಡು ಹಿಡಿಯಲು ಸೂಚಿಸಿರುವ ಮಾರ್ಗ ಗುಡ್ಡ ಸುತ್ತಿ ಮೈಲಾರಕ್ಕೆ ಬಂದಂತಿದೆ. ಅಲ್ಲದೆ ಅವರು ಅದಕ್ಕೆ ೧ ರಿಂದ ೯ ರ ವರೆಗಿನ ವರ್ಗವನ್ನು ತಿಳಿದಿರಬೇಕೆಂದು ಸೂಚಿಸಿದ್ದಾರೆ (ಇದಂತೂ ಸುಲಭವೆ).

೧ ರಿಂದ ೧೦೦ ರ ವರೆಗಿನ ಏಕೆ ಎಷ್ಟು ಬೇಕಾದರೂ ಸಂಖ್ಯೆಯ ವರ್ಗವನ್ನು ಪಡೆಯಲು ಆ ಸಂಖ್ಯೆಯನ್ನು ಎರಡು ಸಾರೆ ಇಟ್ಟು ಗುಣಿಸಿದರೆ ಮುಗಿಯಿತಲ್ಲವೆ? ಪ್ರಕಾಶ ಅವರು ಸೂಚಿಸಿರುವ ಮೂರು ಹಂತಗಳು ಯಾಕೆ ಬೇಕು? ೧ ರಿಂದ ೯೯ ರ ವರೆಗಿನ ಸಂಖ್ಯೆಯ ವರ್ಗವನ್ನು ಕಂಡುಹಿಡಿಯುವುದಂತೂ ಅತಿ ಸುಲಭ.

| ಉದಾ: ೨೯ × ೨೯ | ೯೯ × ೯೯ |
|---|---|
| ೨೬೧ | ೮೯೧ |
| ೫೮ | ೮೯೧ |
| ೮೪೧ | ೯೮೦೧ |

ಹುಬ್ಬಳ್ಳಿ —ಜೀವಂಧರಕುಮಾರ ಹೋತಪೇಟಿ

(ಈ ಬಗ್ಗೆ ಭೈರಿದೇವರಕೊಪ್ಪದ ಎಂ. ಎಂ. ಕರೇಗೌಡ್ರ, ಹಿಡಕಲ್ಲಿನ ಮ. ಪು. ಸದಾಶಿವಯ್ಯ ಹಾಗೂ ವಿಜಾಪುರದ ನಿಂಬೂರ ಲಕ್ಷ್ಮಣರಾಯರೂ ಇದೇ ರೀತಿ ಬರೆದಿದ್ದಾರೆ. —ಸಂ.)

•

ನನ್ನ ಲೇಖನ 'ವರ್ಗಕ್ಕೊಂದು ಸುಲಭ ಸೂತ್ರ'ವನ್ನು ನೋಡಿ (ಜುಲೈ ಸಂಚಿಕೆ) ಕೆಲವರಿಗೆ ಅದು ಶೀಘ್ರ ಗಣಿತವೆ ಎಂದು ಕಣ್ಬಿಡುವಂತಾಗಿದೆ. ಅದಕ್ಕೆ ಕಾರಣ ಮುದ್ರಾರಾಕ್ಷಸನೇ ಹೊರತು ನಾನಲ್ಲ.

ಪ್ರಕಟಿತ ಲೇಖನದಲ್ಲಿ ೨೯ರ ವರ್ಗವನ್ನು

೮೧
೩೬
೪
——
೮೪೧ ಎಂದು ಮುದ್ರಿಸಲಾಗಿದೆ.
ಆದರೆ ಅದು ಹಾಗಿರದೆ ಈ ಕೆಳಗಿನಂತಿರಬೇಕಿತ್ತು.
೮೧
೩೬
೪
——
೮೪೧ .

ದಾವಣಗೆರೆ —ಪ್ರಕಾಶ ಏ. ಟಿ.

**ಸೌಜನ್ಯ ಬೇಡವೆ?**

'ಕಸ್ತೂರಿ' ಜುಲೈ ೮೨ರ ಸಂಚಿಕೆಯಲ್ಲಿ ಪ್ರಕಟವಾದ "'ತ್ಸುನಾಮಿ'ಗಳ ಬಗ್ಗೆ ಜಾಗೃತರಾಗಿರಿ" ಲೇಖನವು 'ಸ್ಪುಟ್ನಿಕ್ ಡೈಜೆಸ್ಟ್' ಫೆಬ್ರುವರಿ ೮೨ರ ಸಂಚಿಕೆಯಲ್ಲಿ ಪ್ರಕಟವಾದ ಮೂಲ ಲೇಖನದ ಭಾಗಶಃ ಕನ್ನಡ ಅನುವಾದವಾಗಿದೆ. ಲೇಖಕ ಅರುಣ ನಾರಾಯಣರು ಮೂಲವನ್ನು ಸ್ಮರಿಸುವ ಸೌಜನ್ಯವನ್ನಾದರೂ ತೋರಿಸಬಾರದೆ ?

ಸಂಕೇಶ್ವರ —ಬಸಗೌಡಾ ನಿಂಗನೂರಿ

**ನಾಲ್ವತ್ತೇಳು ಗಂಟೆಗಳು**

ಜುಲೈ ಸಂಚಿಕೆಯಲ್ಲಿ ಪ್ರಕಟವಾದ "ನಾಲ್ವತ್ತೇಳು ಗಂಟೆಗಳು" ಕಥೆಯಲ್ಲಿ, ಕಥಾನಾಯಕನ ಮಾನವೀಯ ಮೌಲ್ಯಗಳ ನಿರೂಪಣೆ ಸೊಗಸಾಗಿದೆ. ಆ ಮಟ್ಟಿಗೆ ಕತೆಗಾರರು ಅಭಿನಂದನಾರ್ಹರು.

ಆದರೆ, ರಕ್ತದಾನದ ಯಾವುದೇ ಸಂದರ್ಭದಲ್ಲಿಯೂ, 'ದಾನಿ'ಯ ರಕ್ತದ ಪರಿಶುದ್ಧತೆಯನ್ನು ಪರೀಕ್ಷಿಸದೇ ರೋಗಿಯ ದೇಹಕ್ಕೆ ನೀಡುವುದಿಲ್ಲ. ದಾನಿಯ ರಕ್ತವನ್ನು ಪರೀಕ್ಷಿಸುವುದಷ್ಟೇ ಅಲ್ಲದೆ, ರೋಗಿಯ ರಕ್ತದ ಸ್ಯಾಂಪಲ್ ಜೊತೆಗೆ 'ಕ್ರಾಸ್ ಮ್ಯಾಚ್' ಮಾಡಿಯೇ, ನಂತರ ಉಪಯೋಗಿಸಲಾಗುತ್ತದೆ. ದಾನಿಯ ರಕ್ತ ಶುದ್ಧವಾಗಿದ್ದರೂ, 'ಕ್ರಾಸ್‌ಮ್ಯಾಚ್' ಆಗಿದ್ದರೂ, ಕೆಲವು ಸಾರಿ ರೋಗಿಯ ದೇಹ, 'ಹೊರಗಿನ ರಕ್ತ'ವನ್ನು ತಿರಸ್ಕರಿಸುವುದೂ ಉಂಟು; ರೋಗಿಗೆ ನಡುಕ ಇತ್ಯಾದಿ ಆರಂಭವಾಗಿ, 'ಪ್ರತಿಕ್ರಿಯೆ' ಉಂಟಾಗುವುದೂ ಇದೆ. ಆದುದರಿಂದ, ಒಂದು ವೇಳೆ, ಡಾ. ರಾವ್ ಬಂದು ಕಥಾನಾಯಕನಿಗೆ ಅವರಿಗೆ ಆಗಿದ್ದ ಜಾಂಡೀಸ್ ಬಗೆಗೆ ನೆನಪಿಸದೇ ಇದ್ದಿದ್ದರೂ, ರಾತ್ರಿಯೆಲ್ಲಾ ಕಥಾನಾಯಕ ಬೇರೆಯವರ ರಕ್ತಕ್ಕಾಗಿ ಹುಡುಕಾಡದಿದ್ದರೂ, ಶಸ್ತ್ರಕ್ರಿಯೆಗೆ ಮುಂಚೆ ರಕ್ತದಾನಿಯ ರಕ್ತದ ಪರಿಶುದ್ಧತೆ, ಸೂಕ್ತತೆಗಳನ್ನು ಆಸ್ಪತ್ರೆಯ ತಜ್ಞರು ಪರೀಕ್ಷಿಸದೇ ಇರುತ್ತಿರಲಿಲ್ಲ. ಈ ಪ್ರಮುಖ ಅಂಶವನ್ನು ಮರೆತು ಕತೆ ಸೋಲುತ್ತದೆ.

ಬೆಂಗಳೂರು —ಆರೆನ್ನೆವರ್

**ಭಗಿನೀ**

ಸಭೆಗಳಲ್ಲಿ 'ಸಭಿಕ. ಭಗಿನಿ' ಮುಂತಾದವುಗಳ ಪ್ರಯೋಗವು ಅಭಾಸಕರ ಎನ್ನುತ್ತಾರೆ ಕೇಶವ ಐತಾಳರು (ಕಸ್ತೂರಿ ಜುಲೈ ೮೨). 'ಸಭಿಕ' ಪದವು ಒಂದು ಕಾಲದಲ್ಲಿ ದ್ಯೂತಕಾರಾರ್ಥದಲ್ಲಿ ಇದ್ದುದು ನಿಜವಾದರೂ ಇಂದು ರೂಢಿಯಲ್ಲಿರುವುದು 'ಸಭಾಸದ' ಎಂಬರ್ಥದಲ್ಲಿಯೇ. ಕೋಶದಲ್ಲಿ ಹೇಳಿದ ಮಾತ್ರಕ್ಕೆ ಅಥವಾ ಶಬ್ದದಲ್ಲಿ 'ಶಕ್ತಿ'ಯಿದ್ದ ಮಾತ್ರಕ್ಕೆ ಆ ಅರ್ಥವೆಲ್ಲ ತೋರಬೇಕೆಂದೇನೂ ಇಲ್ಲ. ರೂಢಿಯಲ್ಲಿ ಯಾವ ಅರ್ಥವಿದೆಯೋ ಅದೇ ಅರ್ಥ ಆ ಶಬ್ದಕ್ಕೆ. "ಸಹ ಭಾಂತಿ ಅಭೀಷ್ಟನಿಶ್ಚಯಾರ್ಥಂ ಯತ್ರ ಇತಿ ಸಭಾ, ಸಭಾಯಾಂ ಸಾಧು ತ ಸಭಿಕಃ" ಎಂದು ವ್ಯುತ್ಪತ್ತಿ, ಆದ್ದರಿಂದ ಸಭಿಕಃ ಸಭಾಸದರೆಲ್ಲರೂ ಸಮಾನರೇ. 'ಸಭೆ'ಗೆ ದ್ಯೂ. ವೆನ್ನುವ ಅರ್ಥವೂ ಇರುವುದರಿಂದ 'ಸಭಿಕ'ದಿಂದ ದ್ಯೂತಕಾರಾರ್ಥವು ಬರಲು ಸಾಧ್ಯವಾದರೂ ಇಂದು ಆ ಅರ್ಥ ರೂಢಿಯಲ್ಲಿಲ್ಲ.

ಇದೇ ರೀತಿ 'ಭಗಿನಿ' ಕೂಡ. 'ಭಗಿನೀ ಸ್ವಸಾ' ಎಂದು ಕೋಶದಲ್ಲಿಯೇ ಹೇಳಿದೆ. 'ಭಗ' ಶಬ್ದಕ್ಕೆ ಶ್ರೀ, ಕಾಯ, ಮಾಹಾತ್ಮ್ಯ, ಯತ್ನ ...ಮುಂತಾದ ಅನೇಕ ಅರ್ಥಗಳಿವೆ. ಅದರಿಂದಾಗಿಯೇ 'ಭಗವಾನ್' ಮುಂತಾದ ಶಬ್ದಗಳೂ ಹುಟ್ಟಿಕೊಂಡಿವೆ. ಅಲ್ಲದೇ ವ್ಯುತ್ಪತ್ತಿ ಕೂಡ "ಭಗಂ ಯತ್ನಃ ಅಂಶೋ ವಾ ಪಿತ್ರಾದೀನಾಂ ದ್ರವ್ಯದಾನೇ ಅಸ್ತಿ ಅಸ್ಯಾಃ ಇತಿ ಭಗಿನೀ" ಎಂದು. ಹೀಗಿರುವಾಗ 'ಭಗಿನಿ'ಯಿಂದ ಅಪಾರ್ಥ ಹೇಗೆ ಬರಲು ಸಾಧ್ಯ?

ಬೆಂಗಳೂರು —ಜನಾರ್ದನ ದೇವದಕೇರಿ

ಕಸ್ತೂರಿ

ವರ್ಷ: ೨೬ ಆಗಸ್ಟ್ ೧೯೮೨ ಸಂಚಿಕೆ: ೧೨

# ಗುರು-ಗೋಡೆ ಇತ್ಯಾದಿ

ದಾದಾ ಧರ್ಮಾಧಿಕಾರಿ

ರಾಜನೊಬ್ಬ ಡಂಗುರ ಸಾರಿಸಿದ–'ನನಗೊಬ್ಬ ಗುರು ಬೇಕು. ಅತಿ ದೊಡ್ಡ ಅಪಾರ ಗೋಡೆ ಕಟ್ಟಿಕೊಂಡಿರುವಂಥವರು ಮಾತ್ರ ನನಗೆ ಗುರುವಾಗಬಲ್ಲ ಯೋಗ್ಯತೆಯುಳ್ಳವರು. ಇಚ್ಛೆಯುಳ್ಳ ಜ್ಞಾನಿಗಳು ಬಂದು ನನ್ನನ್ನು ಭೆಟ್ಟಿಯಾಗ–ಬಹುದು...' ಎಂದು.

ಮಾರುದಿನ ಅರಮನೆಯ ಆವಾರದಲ್ಲಿ ಬರಿ ಜಟಾಧಾರಿ ಸಂನ್ಯಾಸಿಗಳು, ಕಾವಿಯುಟ್ಟ ಸಿದ್ಧರು–ಸಾಧುಗಳು, ದಂಡ ಕಮಂಡಲು ಧಾರಿಗಳು, ದೊಡ್ಡ ನಾಮದವರು, ಅಡ್ಡ ವಿಭೂತಿಯವರೇ ತುಂಬಿಕೊಂಡರು – ಮಹಾರಾಜನ ಗುರುವಾಗುವ ಇಚ್ಛೆಯಿಂದ.

ರಾಜ ಅವರ ಪರೀಕ್ಷೆ ನಡೆಸಲಿದ್ದ. ಸಂದರ್ಶನಕ್ಕೆ ಸಿದ್ಧರಾಗಿದ್ದರು ಈ ಸಿದ್ಧ–ಸಾಧು–ಸಂತ ಅಭ್ಯರ್ಥಿಗಳು.

ಒಬ್ಬೊಬ್ಬರನ್ನೇ ಕರೆದು ಸೂಕ್ಷ್ಮವಾಗಿ ಮುಖಾವಲೋಕನ ಮಾಡಿದ ರಾಜ.

ಪ್ರತಿಯೊಬ್ಬನೂ 'ನಾನು, ನಾನೇ ಯೋಗ್ಯ ಇವನ ಗುರುವಾಗಲು,' ಎಂದುಕೊಂಡರು.

ಆದರೆ ಆ ನೂರಾರು ಮಂದಿಯಲ್ಲಿ ಕೇವಲ ಐವರನ್ನು ಆಯ್ಕೆ ಮಾಡಿದ ರಾಜ ಅವರನ್ನು ಕರೆದು, "ಊರ ಹೊರಗೆ ಇರುವ ಬಯಲು ನಿಮ್ಮದು. ನೀವು ಅಲ್ಲಿ ನಿಮಗೆ ಬೇಕಾದಷ್ಟು ದೊಡ್ಡ ಅಪಾರ ಗೋಡೆಯನ್ನು ಕಟ್ಟಿಕೊಂಡು ಅಲ್ಲಿ ನಿಮ್ಮ ಗುರುಕುಲ ಆರಂಭಿಸಿಕೊಳ್ಳಬಹುದು. ಇದಕ್ಕೆ ಬೇಕಾದ ಕಲ್ಲು, ಮಣ್ಣು ಇಟ್ಟಿಗೆ, ಆಳುಗಳನ್ನೆಲ್ಲ ನಾನು ಒದಗಿಸುತ್ತೇನೆ. ಒಂದು ವಾರದೊಳಗೆ ಈ ಕೆಲಸ ಆಗಬೇಕು. ನಂತರ ಯಾರು ಅತಿ ದೊಡ್ಡ ಅಪಾರಗೋಡೆಯನ್ನು ಕಟ್ಟಿಕೊಂಡಿರುತ್ತಾನೋ ಅವನನ್ನೇ ನನ್ನ ಗುರುವನ್ನಾಗಿ ಆಯ್ದುಕೊಳ್ಳುತ್ತೇನೆ," ಎಂದು ಹೇಳಿದ.

ಆ ಐವರೂ ಆಗಲೆಂದರು.

ವಾರ ಕಳೆಯಿತು. ದೊಡ್ಡ ದೊಡ್ಡ ಗೋಡೆ

ಗಳು ಏಳತೊಡಗಿದ್ದವು. ಒಬ್ಬ ಎತ್ತರದಲ್ಲಿ ದೊಡ್ಡದೆಂದುಕೊಂಡು ಅತಿ ಎತ್ತರವಾದ ಗೋಡೆಗಳನ್ನು ಕಟ್ಟಿಸಿದರೆ ಇನ್ನೊಬ್ಬ ವಿಸ್ತಾರದಲ್ಲಿ ದೊಡ್ಡದಾಗಿರಬೇಕೆಂದುಕೊಂಡು ಬಹಳಷ್ಟು ಜಾಗ ಆಕ್ರಮಿಸಿ ಗೋಡೆಗಳನ್ನು ಕಟ್ಟಿಸಿದ. ಮತ್ತೊಬ್ಬ ಇವೆರಡೂ ರೀತಿಯಲ್ಲಿ ಯೋಚಿಸಿ ವಿಸ್ತಾರದಲ್ಲೂ, ಎತ್ತರದಲ್ಲೂ ದೊಡ್ಡದಾದ ಗೋಡೆಗಳನ್ನು ಕಟ್ಟಿಸಿದ. ಮತ್ತೊಬ್ಬನಿಗೆ ಇನ್ನೂ ಎಷ್ಟು ದೊಡ್ಡ ಗೋಡೆ ಕಟ್ಟಿಸುವುದೆಂದು ತಿಳಿಯದೇ ಕಟ್ಟಿಸಿ ಕೆಡವಿಸಿ ಮಾಡುತ್ತಲೇ ಇದ್ದ.

ಆದರೆ ಐದನೆಯವ ಮಾತ್ರ ಇದಾವುದರ ಗೊಡವೆಗೂ ಹೋಗದೆ ಒಂದು ದೊಡ್ಡ ಮರದ ಬುಡದಲ್ಲಿ ಕುಳಿತು ಯಾವದೋ ಗ್ರಂಥವನ್ನು ಓದುತ್ತಿದ್ದ.

ಅವನನ್ನು ಕಂಡು ರಾಜನಿಗೆ ಆಶ್ಚರ್ಯವಾಯಿತು. "ಯಾಕೆ ಸ್ವಾಮಿ, ನೀವು ಗೋಡೆ ಕಟ್ಟಿಕೊಳ್ಳುವುದಿಲ್ಲವೆ?" ಪ್ರಶ್ನಿಸಿದ ರಾಜ.

ಆಗ ಆತ ಉತ್ತರಿಸಿದ, "ನನ್ನ ಆವಾರದ ಗೋಡೆ ಬಹು ವಿಸ್ತಾರವಾದ ಪ್ರದೇಶದಲ್ಲಿ ರಚಿಸಲ್ಪಟ್ಟಿದೆ. ಅದೊ ನೋಡಿ ಅಲ್ಲಿ ಆಕಾಶ-ಭೂಮಿಗಳೆರಡೂ ಕೂಡುವಲ್ಲಿ," ಎಂದವನೇ ಮತ್ತೆ ಗ್ರಂಥದಲ್ಲಿ ದೃಷ್ಟಿ ಹರಿಸಿದ.

ರಾಜ ಆತನಿಗೆ ಸಾಷ್ಟಾಂಗ ಪ್ರಣಾಮಮಾಡಿ, "ಗುರುವೆ, ನನ್ನನ್ನು ನಿಮ್ಮ ಶಿಷ್ಯನನ್ನಾಗಿ ಸ್ವೀಕರಿಸಿ," ಎಂದು ಅಂಗಲಾಚಿದ. ★

# ಮೃತ್ಯು – ಭಯ

ಒಂದು ದಿನ ಸಂತ ಏಕನಾಥರ ಭಕ್ತನೊಬ್ಬ, "ಮಹಾರಾಜ, ನಿಮ್ಮ ಜೀವನ ಇಷ್ಟು ಶಾಂತ ಇಷ್ಟು ಮಧುರವಾಗಿದೆ. ಆದರೆ ನನ್ನ ಜೀವನದಲ್ಲಿ ನಿತ್ಯವೂ ಅಶಾಂತಿಯ ಮೋಡಗಳು ಆವರಿಸಿಯೇ ಇರುತ್ತವಲ್ಲಾ. ಕಾರಣವೇನು?" ಎಂದು ಕೇಳಿದ.

"ತಮ್ಮಾ, ಇದೆಲ್ಲ ಬಿಟ್ಟುಬಿಡು. ಇವತ್ತಿಗೆ ಸರಿಯಾಗಿ ಎಂಟನೆಯ ದಿನಕ್ಕೆ ನೀನು ಸಾಯುತ್ತಿ. ಅದನ್ನು ಕುರಿತು ಯೋಚಿಸು." ಎಂದರು ಏಕನಾಥರು.

ಭಕ್ತ ಗಾಬರಿಗೊಂಡ. ನೇರ ಮನೆಗೆ ಹೋದ. ಸಂಬಂಧಿಕರನ್ನೆಲ್ಲ ಕರೆದು ಕೂಡಿಸಿಕೊಂಡು, "ಇಂದಿಗೆ ಎಂಟನೆ ದಿನಕ್ಕೆ ನಾನು ಸಾಯುತ್ತೇನೆ; ಏಕನಾಥ ಮಹಾರಾಜರು ಹೇಳಿದ್ದಾರೆ. ಆದ್ದರಿಂದ ಇಷ್ಟು ದಿನದಲ್ಲಿ ನನ್ನಿಂದೇನಾದರೂ ತಪ್ಪಾಗಿದ್ದರೆ ಕ್ಷಮಿಸಿ," ಎಂದ.

ನಂತರದ ದಿನಗಳನ್ನೆಲ್ಲ ಆತ ಧರ್ಮ ಕಾರ್ಯಗಳಲ್ಲಿಯೇ ಕಳೆದ.

ಎಂಟನೆಯ ದಿನ ಆತ ಏಕನಾಥರ ಬಳಿಹೆ ಹೋದ. "ಮಹಾರಾಜ, ಹೇಳಿ ನನ್ನ ಮೃತ್ಯು ಯಾವಾಗ ಬರುತ್ತದೆ?"

"ತಮ್ಮಾ, ಮೃತ್ಯು ಯಾವಾಗ ಬರುತ್ತದೆನ್ನುವುದು ಪರಮೇಶ್ವರನಿಗೆ ಮಾತ್ರ ಗೊತ್ತಾಗುತ್ತದೆ. ಅದಿರಲಿ, ಈ ಒಂದು ವಾರ ಹೇಗೆ ಕಳೆದೆ ಹೇಳು," ಎಂದರು ಏಕನಾಥರು.

"ನನ್ನೆದುರು ಮೃತ್ಯುವೇ ಕುಣಿಯುತ್ತಿತ್ತು ಮಹಾರಾಜ! ಈ ವಾರವಿಡೀ ನಾನು ಯಾವ ಕೆಟ್ಟ ಕೆಲಸವನ್ನೂ ಮಾಡಲಿಲ್ಲ, ಯಾರಿಗೂ ಕಟುವಾಗಿ ಮಾತನಾಡಿಲ್ಲ," ಎಂದ ಆತ.

ಆಗ ಏಕನಾಥ ಮಹಾರಾಜರು, "ತಮ್ಮಾ, ನಿನ್ನೆದುರು ಒಂದು ವಾರ ಕುಣಿದ ಮೃತ್ಯುವಿನಿಂದಾಗಿಯೇ ನೀನು ಕೆಟ್ಟ ಕೆಲಸ ಮಾಡಿಲ್ಲ- ಕೆಟ್ಟ ಮಾತು ಆಡಿಲ್ಲ. ಅಂದ ಮೇಲೆ ನಿತ್ಯವೂ ಮೃತ್ಯು ಕಣ್ಣೆದುರು ಕುಣಿಯುತ್ತಿರುವ ನಮ್ಮಂಥವರ ಪಾಡೇನು? ಹೀಗಾಗಿಯೇ ನಾವು ಸದಾ ಶಾಂತರಾಗಿರುತ್ತೇವೆ. ಮರಣವೆಂಬುದು ಗಾಬರಿಪಡಿಸುವ [illegible]ದಲ್ಲಿ. ಅದನ್ನು ಲಕ್ಷ್ಯದಲ್ಲಿಟ್ಟುಕೊಂಡರೆ ಸದಾ ಶಾಂತ ಜೀವನ ಸಾಗಿಸಬಹುದು," ಎಂದರು. ★

## ಜ್ಞಾನಸಾಗರವಾಗಿದ್ದ ಮಹಾಮಾನವ

# ರೋಹಿತಶಾಸ್ತ್ರಜ್ಞ ಅಸುಂಡಿಯವರು

ಡಾ. ವಿ. ಎಂ. ಕೋರವಾರ

ಮುಂಬೈಯ ಭಾಭಾ ಪರಮಾಣು ಸಂಶೋಧನಾ ಕೇಂದ್ರದಲ್ಲಿ (BARC) ಪಿ.ಎಚ್.ಡಿ. ಪದವಿಯನ್ನು ಪಡೆಯಲಿಚ್ಛಿಸುವ ಅಭ್ಯರ್ಥಿಯೋರ್ವನು ಮೌಖಿಕ ಪರೀಕ್ಷೆಯಲ್ಲಿ ತನ್ನ ಪರೀಕ್ಷಕರನ್ನು ಎದುರಿಸುತ್ತಿದ್ದಾನೆ. ಪರೀಕ್ಷಕರಲ್ಲಿ ಮುಖ್ಯಸ್ಥರು ಒಬ್ಬ ಇಳಿ ವಯಸ್ಸಿನ, ಅಚ್ಚುಕಟ್ಟಾಗಿ ವೇಷ ಧರಿಸಿದ, ಕನ್ನಡಕಗಳನ್ನು ಹಾಕಿಕೊಂಡ ಪ್ರಾಧ್ಯಾಪಕರೊಬ್ಬರು ಆ ಅಭ್ಯರ್ಥಿಯನ್ನು ಕೇಳುತ್ತಾರೆ, "ಸರಿ, . ಪಿ.ಎಚ್.ಡಿ. ಬಂದ ನಂತರ ಮುಂದೆ ಏನು ಮಾಡುವಿರಿ? ಯಾವ ಸಂಶೋಧನೆಯಲ್ಲಿ ತೊಡಗುವಿರಿ?" ಆ ಅಭ್ಯರ್ಥಿ ಇಂಥ ಪ್ರಶ್ನೆಯನ್ನು ನಿರೀಕ್ಷಿಸಿರಲಿಲ್ಲವೋ ಏನೋ, ಅಥವಾ ಪಿ.ಎಚ್.ಡಿ. ನಂತರ ಅವನಿಗೆ ಸಂಶೋಧನೆಯಲ್ಲಿ ನಿರತನಾಗುವ ಮನಸ್ಸಿದ್ದಿಲ್ಲವೋ, ಅಂತೂ ಅವನಿಂದ ಸಮರ್ಪಕ ಉತ್ತರ ಬರಲಿಲ್ಲ. ಆ ವೃದ್ಧ ಪರೀಕ್ಷಕರು ಸ್ವಲ್ಪ ನೊಂದುಕೊಂಡು ಆ ಅಭ್ಯರ್ಥಿಯನ್ನು ನೇರವಾಗಿ BARCಯ ಗ್ರಂಥಾಲಯಕ್ಕೆ ಕರೆದುಕೊಂಡು ಹೋದರು. ಅವರು ಅಲ್ಲಿ ಹಲವಾರು ಸಂಶೋಧನಾ ಪತ್ರಿಕೆಗಳನ್ನು ತಿರುವಿ ಹಾಕಿ ೨ ಗಂಟೆಗಳ ಕಾಲ ಅವನೊಡನೆ ಚರ್ಚಿಸಿ, ಆ ವಿದ್ಯಾರ್ಥಿ ಮುಂದೆ ಯಾವ ಸಂಶೋಧನೆಯನ್ನು ಕೈಕೊಳ್ಳಬಹುದೆಂಬುದನ್ನು ತೋರಿಸಿಕೊಟ್ಟರು. ಈ ಘಟನೆ ನಡೆದು ೪ ದಿನಗಳ ನಂತರ (೨-೨-೮೨) ಆ ವೃದ್ಧ ಪರೀಕ್ಷಕರು ತಮ್ಮ ೮೬ನೆಯ ವಯಸ್ಸಿನಲ್ಲಿ ನಿಧನ ಹೊಂದಿದರು. ಆ ವೃದ್ಧರೇ ವಿಶ್ವವಿಖ್ಯಾತ ರೋಹಿತ ಶಾಸ್ತ್ರಜ್ಞ (Spectroscopist) ಡಾ. ಆರ್. ಕೆ. ಅಸುಂಡಿ.

೮೬ರಂಥ ಇಳಿ ವಯಸ್ಸಿನಲ್ಲಿ ಕೂಡ ಸಂಶೋಧನೆಯಲ್ಲಿ ಇಷ್ಟೊಂದು ಆಸ್ಥೆ ವಹಿಸುವ ಶಾಸ್ತ್ರಜ್ಞರು ಜಗತ್ತಿನಲ್ಲಿಯೇ ತೀರ ವಿರಳ. ತಮ್ಮ ಇಡೀ ಜೀವನವನ್ನೇ ಭೌತಶಾಸ್ತ್ರ ಸಂಶೋಧನೆಗೆಂದು ಮುಡಿಪಿಟ್ಟಿದ್ದರು ಡಾ.



ಅಸುಂಡಿ. ರೋಹಿತಶಾಸ್ತ್ರದಲ್ಲಿ ಡಾ. ಅಸುಂಡಿ ಯವರ ಹೆಸರನ್ನು ಕೇಳದ ರೋಹಿತಜ್ಞರು, ನಿಜವಾದ ರೋಹಿತಶಾಸ್ತ್ರಜ್ಞರೇ ಅಲ್ಲವೆಂದು ಹೇಳಬೇಕಾಗುತ್ತದೆ. ಡಾ. ಅಸುಂಡಿಯವರ ಜೀವನ ವನ್ನು ವಿವರಿಸಲು ಹೊರಟರೆ ಈ ಶತಮಾನದ ರೋಹಿತಶಾಸ್ತ್ರದ ಅಭಿವೃದ್ಧಿಯ ಇತಿಹಾಸವೇ ಆದೀತು!

ಅಸುಂಡಿಯವರ ಜನನವಾದುದು ಧಾರವಾಡ ಜಿಲ್ಲೆಯ ಗದಗ ತಾಲೂಕಿನ ಅಸುಂಡಿ ಗ್ರಾಮ ದಲ್ಲಿ ೧೪–೮–೧೮೯೫ರಂದು ಒಂದು ಬಡ ಕುಟುಂಬದಲ್ಲಿ. ೧೮೯೫ ಈ ವರ್ಷ ವಿಜ್ಞಾನ ಪ್ರಪಂಚದಲ್ಲಿ ಅತ್ಯಂತ ಮಹತ್ವಪೂರ್ಣ ವರ್ಷವೆನಿಸಿಕೊಳ್ಳುತ್ತದೆ, ಏಕೆಂದರೆ, ಆ ವರ್ಷ ರಾಂಟ್ಗೆನ್ನನು ಕ್ಷ–ಕಿರಣಗಳನ್ನು ಶೋಧ ಮಾಡಿ ನವೀನ ಭೌತಶಾಸ್ತ್ರದ ನಾಂದಿಯನ್ನಿಟ್ಟನು.

ಅಸುಂಡಿಯವರ ಪ್ರಾಥಮಿಕ ಶಾಲಾ ಶಿಕ್ಷಣ ಮೊದಲ ೨ ವರ್ಷಗಳ ಕಾಲ ಸ್ವಗ್ರಾಮವಾದ ಅಸುಂಡಿಯಲ್ಲಿಯೇ ನಡೆಯಿತು. ಆನಂತರ ಉಳಿದ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣ ಗದಗ ಮತ್ತು ಧಾರವಾಡಗಳಲ್ಲಿ ನಡೆ ದವು. ೧೯೦೨ರಲ್ಲಿ ಅಸುಂಡಿಯವರ ಕುಟುಂಬ ಅಸುಂಡಿಯಿಂದ ಗದಗಿಗೆ ಸ್ಥಳಾಂತರಿಸಿತು. ೧೯೦೯ರಲ್ಲಿ ಧಾರವಾಡಕ್ಕೆ ಬಂದು ನೆಲೆಸಿದರು,

ಧಾರವಾಡದ ಸರಕಾರಿ ಮಾಧ್ಯಮಿಕ ಶಾಲೆ (ಈಗಿನ ಕರ್ನಾಟಕ ವಿಶ್ವವಿದ್ಯಾಲಯದ ಪಬ್ಲಿಕ್ ಸ್ಕೂಲ್)ಯಿಂದ ಯುವಕ ರಂಗ(ಅಸುಂಡಿಯ ವರ ಪೂರ್ಣ ಹೆಸರು ರಂಗ ಕೃಷ್ಣರಾವ್ ಅಸುಂಡಿ)ನು ೧೯೧೨ರಲ್ಲಿ ಮ್ಯಾಟ್ರಿಕ್ ಪರೀಕ್ಷೆ ಯಲ್ಲಿ ಜಿಲ್ಲೆಗೆ ಪ್ರಥಮಸ್ಥಾನ ಗಳಿಸಿ ಪಾಸಾದನು. (ಆಗಿನ ಕಾಲದಲ್ಲಿ ಉತ್ತರ ಕರ್ನಾಟಕದ ೪ ಜಿಲ್ಲೆಗಳು ಮುಂಬೈ ಪ್ರಾಂತದಲ್ಲಿದ್ದವು ಮತ್ತು ಮ್ಯಾಟ್ರಿಕ್ ಪರೀಕ್ಷೆಯನ್ನು ಮುಂಬೈ ವಿಶ್ವ ವಿದ್ಯಾಲಯವೇ ನಡೆಸುತ್ತಿತ್ತು). ಈ ಯಶಸ್ಸಿ ನಿಂದಾಗಿ ರಂಗನಿಗೆ ಧಾರವಾಡ ಶಿಷ್ಯವೇತನ ದೊರೆಯಿತು.

ಆಗಿನ ಕಾಲದಲ್ಲಿ ಹೆಚ್ಚಿನ ವ್ಯಾಸಂಗದ ಸೌಕರ್ಯ ಗಳು ಧಾರವಾಡದಲ್ಲಿರಲಿಲ್ಲ. ಆದುದರಿಂದ, ಇಂಥ ವ್ಯಾಸಂಗಕ್ಕಾಗಿ ವಿದ್ಯಾರ್ಥಿಗಳು ಪುಣೆ, ಮುಂಬೈಗಳಂಥ ದೊಡ್ಡ ಶಹರಗಳಿಗೆ ಹೋಗಬೇಕಾಗುತ್ತಿತ್ತು. ರಂಗ ಕೂಡ ಹೆಚ್ಚಿನ ಅಧ್ಯಯನಕ್ಕೋಸ್ಕರ ಪುಣೆ ಶಹರವನ್ನು ಆಯ್ದು ಕೊಂಡು, ಅಲ್ಲಿಯ ಸುಪ್ರಸಿದ್ಧ ಡೆಕ್ಕನ್ ಕಾಲೇ ಜಿನಲ್ಲಿ ೧೯೧೩ರಿಂದ ೧೯೧೪ರವರೆಗೆ ಅಭ್ಯಾಸ ವೃತ್ತಿಯನ್ನು ಕೈಕೊಂಡನು. ಮುಂದಿನ ೨ ವರ್ಷ ಗಳವರೆಗೆ ಅಲ್ಲಿಯ ಫರ್ಗ್ಯುಸನ್ ಕಾಲೇಜಿನಲ್ಲಿ ಓದಿದನು. ಭೌತಶಾಸ್ತ್ರ ಮತ್ತು ರಸಾಯನ ಶಾಸ್ತ್ರಗಳನ್ನು ಅಭ್ಯಸಿಸಿ ೧೯೧೬ರಲ್ಲಿ ರಂಗನು ತನ್ನ ಮೊದಲ ಡಿಗ್ರಿಯಾದ ಬಿ. ಎ. (ಆನರ್ಸ್) ಯನ್ನು ಪಡೆದನು. ಕೂಡಲೇ ಅದೇ ಕಾಲೇಜಿ ನಲ್ಲಿ ಡೆಮಾನ್‌ಸ್ಟ್ರೇಟರ್ ಎಂದು ನೇಮಕ ಗೊಂಡನು. ಅಲ್ಲಿರುವ ಕಾಲದಲ್ಲಿಯೇ (೧೯೧೬ ರಿಂದ ೧೯೧೯) ಬಿ.ಎಸ್‌ಸಿ. ಗೆಂದು ಭೌತ ಶಾಸ್ತ್ರವನ್ನು ಮುಖ್ಯ ವಿಷಯವನ್ನಾಗಿ ಆಯ್ದು ಕೊಂಡು ೧೯೧೯ರಲ್ಲಿ ಆ ಡಿಗ್ರಿಯನ್ನು ಸಂಪಾದಿ ಸಿದನು.

ಪುಣೆಯಲ್ಲಿರುವಾಗ ಅಸುಂಡಿಯವರು ಕೇವಲ ಭೌತಶಾಸ್ತ್ರದ ಅಧ್ಯಯನದಲ್ಲಿ ನಿರತರಾಗದೆ ತಮ್ಮ ಮಿತ್ರರೊಡನೆ ಕನ್ನಡ ಸಂಘವೊಂದನ್ನು ಕಟ್ಟಿ ಕನ್ನಡ ಚಟುವಟಿಕೆಗಳನ್ನು ನಡೆಸುತ್ತಿದ್ದರು, ಈ ಸಂದರ್ಭದಲ್ಲಿ ೯ ಜನ ಸದಸ್ಯರಿದ್ದುದರಿಂದ (ಸಾಲಿ ರಾಮಚಂದ್ರರಾಯರು, ದೇಶಪಾಂಡೆ ರುಕ್ಮಾಂಗದರಾಯರು, ದೇಶಪಾಂಡೆ ಹನುಮಂತ ರಾಯರು, ಬೆಳವಿ ವೆಂಕಟರಾಯರು, ಮೊಹರೆ ಹನುಮಂತರಾಯರು, ಸಿದ್ಧಾಂತಿ ವಕೀಲರು, ದಾತಾರ ಬಳವಂತರಾಯರು, ಆಲಬಾಳ ವಕೀ ಲರು, ಕಣಮಾಡಿಯವರು) ಸಂಘಕ್ಕೆ '೯ ಬಿಂದು ಗಳ ವೃತ್ತ' (Nine Point Circle) ಎಂಬ ಹೆಸರು ಬಿದ್ದಿತ್ತು. ಒಮ್ಮೆ ಆಲೂರ ವೆಂಕಟ ರಾಯರು ಪುಣೆಯಲ್ಲಿ ಭಾಷಣ ಮಾಡಿದಾಗ ಈ ಸಂಘದ ಸದಸ್ಯರು ತಮ್ಮ ಮಿತ್ರರಿಂದ ಹಣ ಸಂಗ್ರಹಿಸಿ ೧೦೦ ರೂಪಾಯಿಗಳನ್ನು ವೆಂಕಟ ರಾಯರಿಗೆ ಕೊಟ್ಟರಂತೆ. ವೆಂಕಟರಾಯರು ಹಣವನ್ನು ತಮ್ಮ ವೈಯಕ್ತಿಕ ಖರ್ಚಿಗಾಗಿ ವಿನಿ ಯೋಗಿಸದೆ, ಅದನ್ನು ಕರ್ನಾಟಕ ಇತಿಹಾಸ

ಸಂಶೋಧನಾ ಕೇಂದ್ರವನ್ನು ಸ್ಥಾಪಿಸುವದಕ್ಕೋಸ್ಕರ ಉಪಯೋಗಿಸಿದರಂತೆ.

ಅಸುಂಡಿಯವರ ಕನ್ನಡಾಭಿಮಾನ ಅವರನ್ನು ಪುನಃ ಧಾರವಾಡಕ್ಕೆ ಕರೆತಂದಿತು. ೧೯೧೯ರಲ್ಲಿ ಅಲ್ಲಿಯ ಕರ್ನಾಟಕ ಎಜ್ಯುಕೇಶನ್ ಸೊಸೈಟಿಯ ಸದಸ್ಯರಾದರು. ಅಲ್ಲದೆ, ವ್ಹಿಕ್ಟೋರಿಯಾ ಹೈಸ್ಕೂಲಿನಲ್ಲಿ ಅತಿ ಕಡಿಮೆ ಸಂಬಳದ ಮೇಲೆ ಅಧ್ಯಾಪಕರಾಗಿ ಕೆಲಸ ಪ್ರಾರಂಭಿಸಿದರು.

ರ್‍ಯಾಂಗ್ಲರ್ ಪಿ. ಎಸ್. ಕಟ್ಟಿಯವರ ನೇತೃತ್ವದಲ್ಲಿ ಕರ್ನಾಟಕ ಎಜ್ಯುಕೇಶನ್ ಸೊಸೈಟಿ ೧೯೨೧ರಲ್ಲಿ ಧಾರವಾಡದಲ್ಲಿ ಕಾಲೇಜೊಂದನ್ನು ಸ್ಥಾಪಿಸಿತು. ಈ ಕಾಲೇಜಿನಲ್ಲಿ ರಂಗರಾವ ದಿವಾಕರ, ರುಕ್ಮಾಂಗದರಾವ ದೇಶಪಾಂಡೆ, ಬಳವಂತರಾವ ದಾತಾರ, ಬಿ. ಬಿ. ಬಾಗಿ, ರಾಮರಾವ ಮುಕ್ಕೇರಿಕರ ಮೊದಲಾದವರು ಪ್ರಾಧ್ಯಾಪಕರಾಗಿ ಕೆಲಸಮಾಡಲು ಮುಂದಾದರು. ಅಸುಂಡಿಯವರು ಸಹ ಅಲ್ಲಿ ಭೌತಶಾಸ್ತ್ರದ ಪ್ರಾಧ್ಯಾಪಕರಾದರು. ಆ ಕಾಲೇಜು 'ಕಟ್ಟಿ ಕಾಲೇಜ' ಎಂದೇ ಪ್ರಸಿದ್ಧವಿದ್ದಿತು. ಆದರೆ ದುರ್ದೈವವಶಾತ್ ಅದು ಬಹಳ ದಿನಗಳವರೆಗೆ ಬದುಕಲಿಲ್ಲ. ಧಾರವಾಡದಲ್ಲಿಯೇ ಇದ್ದ ಇನ್ನೊಂದು ಕಾಲೇಜಿನ ರಾಜಕೀಯದಿಂದಾಗಿ ಕಟ್ಟಿ ಕಾಲೇಜು ಮುಚ್ಚಬೇಕಾಗಿ ಬಂದಿತು. ಅದೇ ವರ್ಷ (೧೯೨೧) ಗಾಂಧೀಜಿಯವರು ವಿದ್ಯಾರ್ಥಿಗಳಿಗೆಲ್ಲ ಶಾಲೆ ಕಾಲೇಜುಗಳನ್ನು ಬಹಿಷ್ಕರಿಸಲು ಕರೆಕೊಟ್ಟಿದ್ದರು. ಹೀಗಾಗಿ ಕಟ್ಟಿ ಕಾಲೇಜು ಹುಟ್ಟಿದ ಕೆಲವು ದಿನಗಳಲ್ಲಿಯೇ ಮುಚ್ಚಬೇಕಾಯಿತು. ಅಸುಂಡಿಯವರು ಈ ರಾಜಕೀಯಕ್ಕೆ ಬಹುವಾಗಿ ನೊಂದುಕೊಂಡರು.

ಧಾರವಾಡದಲ್ಲಿ ಇದ್ದ ಸಮಯದಲ್ಲಿಯೇ ಅಸುಂಡಿಯವರು ಕರ್ನಾಟಕ ಇತಿಹಾಸ ಮಂಡಳದ ಸದಸ್ಯರಾಗಿ ಆ ಮಂಡಳದ ಅಭಿವೃದ್ಧಿಗೆ ಶ್ರಮಿಸಿದರು. ಅದೇ ಕಾಲಕ್ಕೆ ಅವರು 'ಕರ್ನಾಟಕ ಇತಿಹಾಸದಲ್ಲಿಯ ಸ್ತ್ರೀ ರತ್ನಗಳು' ಎಂಬ ಐತಿಹಾಸಿಕ ಲೇಖನವನ್ನು 'ವಾಗ್ಭೂಷಣ' ಪತ್ರಿಕೆಯಲ್ಲಿ ಪ್ರಕಟಿಸಿದರು.

ಅಸುಂಡಿಯವರು ವಿಜ್ಞಾನದ ವಿದ್ಯಾರ್ಥಿಯಾದರೂ ಅವರಿಗೆ ಸಂಸ್ಕೃತ ಭಾಷೆಯ ಮೇಲೆ ಅಪಾರ ಪ್ರೇಮವಿದ್ದಿತು. ಅವರು ಮಾಧ್ವ ತತ್ವಜ್ಞಾನವನ್ನು ಆಳವಾಗಿ ಅಧ್ಯಯನಮಾಡಿದ್ದರು. 'ಹರಿಕಥಾಮೃತ ಸಾರ' ದಂತಹ ಕಠಿಣ ಹೊತ್ತಿಗೆಯನ್ನು ಅಭ್ಯಸಿಸಿ ಅದರಲ್ಲಿಯ ತತ್ವಗಳನ್ನು ಕೂಲಂಕಷವಾಗಿ ವಿಶ್ಲೇಷಿಸಿ ಅದರ ಸಾರವನ್ನು ತಿಳಿದವರಾಗಿದ್ದರು. ಸಾಮಾನ್ಯವಾಗಿ ವೈಷ್ಣವ ಪಂಡಿತರೆಲ್ಲ ಹರಿಯೇ 'ಸರ್ವೋತ್ತಮನು' ಎಂಬುದನ್ನು ಗ್ರಹಿಸಿಯೇ ಮುಂದಿನ ವಾದವನ್ನು ಮಾಡುತ್ತಾರೆ. ಆದರೆ ಅಸುಂಡಿಯವರು ಹಾಗಲ್ಲ. ತಮ್ಮ ವೈಜ್ಞಾನಿಕ ಮನೋಭಾವಕ್ಕೆ ಸರಿ ಹೋಗುವಂತೆ ಹರಿಕಥಾಮೃತ ಸಾರವನ್ನು ಚೆನ್ನಾಗಿ ವಿಶ್ಲೇಷಿಸಿ, ಅದರಲ್ಲಿ ಬರುವ ವಿಚಾರಗಳ ಆಧಾರದ ಮೇಲಿಂದಲೇ ಹರಿಯೇ ಸರ್ವೋತ್ತಮನೆಂದು ಸಿದ್ಧಮಾಡಿ ತೋರಿಸುತ್ತಿದ್ದರು.

೧೯೨೧ರಲ್ಲಿ 'ಕಟ್ಟಿ ಕಾಲೇಜು' ಹಠಾತ್ತನೆ ಮುಚ್ಚಿದ ನಂತರ, ಶಿಕ್ಷಣದಲ್ಲಿಯ ರಾಜಕೀಯದ ಬಗೆಗೆ ಮನನೊಂದು ಭ್ರಮನಿರಸನಗೊಂಡ ಅಸುಂಡಿಯವರು ಮುಂಬೈಗೆ ನೌಕರಿಯನ್ನರಸಿ ಹೊರಟರು. ಅವರು ಮುಂಬೈಯ ವಿಲ್ಸನ್ ಕಾಲೇಜಿನಲ್ಲಿ ಡೆಮಾನ್‌ಸ್ಟ್ರೇಟರ್ ಹುದ್ದೆಗೂ ಒಂದು ಅರ್ಜಿ ಹಾಕಿದ್ದರು. ಆ ಕಾಲೇಜಿನ ಭೌತಶಾಸ್ತ್ರದ ಪ್ರಾಧ್ಯಾಪಕ ಸಾಮಂಡ್ ಅವರು ಅಸುಂಡಿಯವರ ಅರ್ಜಿಯನ್ನು ನೋಡಿದೊಡನೆಯೇ ಕೆಲಸಕ್ಕೆ ಹಾಜರಾಗಲು ಅವರಿಗೆ ಒಂದು ತಂತಿ ಸಂದೇಶವನ್ನು ಕಳಿಸಿದರು. ಅವರು ಹೀಗೆ ಕೂಡಲೇ ನಿರ್ಧಾರಕ್ಕೆ ಬರಲು ಒಂದು ಬಲವಾದ ಕಾರಣವಿದ್ದಿತು. ಬಿ.ಎಸ್‌ಸಿ. (ಆನರ್ಸ್)ನಲ್ಲಿ ಅಸುಂಡಿಯವರು ಎಲ್ಲರಿಗಿಂತಲೂ ಹೆಚ್ಚು ಗುಣಗಳನ್ನು ಪಡೆದಿದ್ದರಲ್ಲದೆ, ಯಾರೂ ಬಿಡಿಸದಂತಹ ಒಂದು ಜಟಿಲ ಪ್ರಶ್ನೆಯನ್ನು ಸುಲಭವಾಗಿ ಬಿಡಿಸಿದ್ದರಂತೆ. ಇದು, ಉತ್ತರವನ್ನು ಪರೀಕ್ಷಿಸಿದ ಸಾಮಂಡ್ ಅವರಿಗೆ ಅಚ್ಚಳಿಯದೇ ನೆನಪಿದ್ದಿತು.

## ಪಾಶ್ಚಿಮಾತ್ಯ ವಿಜ್ಞಾನಿ ಮಿತ್ರರೊಂದಿಗೆ



ಶ್ರೀ ಆರ್. ಕೆ. ಅಸುಂದಿ, ಜಿ. ಹರ್ಝ್‌ಬರ್ಗ್, ೧೯೭೧ರಲ್ಲಿ ನೋಬೆಲ್ ಬಹುಮಾನ ವಿಜೇತರು, ಜೀನ್ ಗಾಯ್ ಪ್ಯಾಕೆ (Paquet), ರಿಕ್ಟರ್, ರಾಬರ್ಟ್ ಎಸ್. ಮುಲ್ಲಿಕೆನ್, ನೋಬೆಲ್ ಬಹುಮಾನ ವಿಜೇತರು, ರಾಬರ್ಟ್ ಡ್ರಾಯಿವ್.

ಮೂರನೆಯ ವರ್ಷವೇ (೧೯೨೨) ಅಸುಂಡಿಯವರು ವಿಲ್ಸನ್ ಕಾಲೇಜಿನಲ್ಲಿಯೇ ಲೆಕ್ಚರರ್ ಎಂದು ಬಡತಿಹೊಂದಿದರು. ವಿಲ್ಸನ್ ಕಾಲೇಜಿನಲ್ಲಿ ನೌಕರಿಯ ಜೊತೆ ಸಂಶೋಧನೆಯನ್ನೂ ನಡೆಸಿ ಎಂ. ಎಸ್‌ಸಿ. ಪದವಿಯನ್ನು ೧೯೨೪ರಲ್ಲಿ ಗಳಿಸಿದರು. ಆಗಿನ ಕಾಲದಲ್ಲಿ ಎಂ. ಎಸ್‌ಸಿ. ಪದವಿಯನ್ನು ಪ್ರಬಂಧ ಬರೆದು ಕೂಡ ದೊರಕಿಸಬಹುದಾಗಿತ್ತು. ಇಂಥ ಪದವಿಗೆ ಕೂಡ ವರ್ಗಗಳನ್ನು ಕೊಡಲಾಗುತ್ತಿತ್ತು. ಪ್ರಬಂಧ ಸಾಧಾರಣ ಮಟ್ಟದ್ದಾಗಿದ್ದರೆ ಕೇವಲ ಎಂ.ಎಸ್‌ಸಿ. ಪದವಿಯನ್ನು (ಅಂದರೆ ಯಾವ ವರ್ಗವಿಲ್ಲದೆ) ಹಾಗೂ ಪ್ರಬಂಧ ಉಚ್ಚಮಟ್ಟದ್ದಿದ್ದರೆ ಪ್ರಶಸ್ತಿ-ಸಹಿತ ಎಂ.ಎಸ್‌ಸಿ. (M.Sc. with distinction) ಪದವಿಯನ್ನೂ ಕೊಡುತ್ತಿದ್ದರು. ಕಡಿಮೆ ಒತ್ತಡಗಳಲ್ಲಿ ಮಿಥೈಲ್ ಅಲ್ಕೊಹಾಲಿನಲ್ಲಿಯ ದ್ರಾವಣಗಳ ಕುದಿಯುವ ಬಿಂದು (boiling point of solutions in methyl alchohol in reduced pressure) ಎಂಬ ಅಸುಂಡಿಯವರ ಪ್ರಬಂಧ ಉತ್ತಮ ಮಟ್ಟದ್ದಿದ್ದುದರಿಂದ ಅವರಿಗೆ ಪ್ರಶಸ್ತಿಸಹಿತ ಎಂ. ಎಸ್‌ಸಿ.ಯನ್ನು ದಯಪಾಲಿಸಲಾಯಿತು. ಆ ಕಾಲದ ಪ್ರಮುಖ ವಿಷಯಗಳಲ್ಲೊಂದಾದ 'ತೀವ್ರಪ್ರವಾಹೀ ವಿದ್ಯುದ್ವಾಹಕಗಳ ವಾದ' (theory of strong electrolytes) ಎಂಬ ವಿಷಯವನ್ನು ಆಯ್ದುಕೊಂಡು ಸೂಕ್ತ







"ನೀವೇ ಹೇಳಿದ್ರಲ್ಲಾ ತಾತಾ, ನಿನ್ನ ಕಾಲ ಮೇಲೆ ನೀನು ನಿಂತ್ಕೊಳ್ಳೋದನ್ನ ಕಲಿ ಅಂತ... ಅಭ್ಯಾಸ ಮಾಡ್ತಿದೀನಿ."

ಪ್ರಯೋಗಗಳನ್ನು ಕಲ್ಪಿಸಿ, ಅವುಗಳನ್ನು ಯಶಸ್ವಿಯಾಗಿ ಪೂರ್ತಿಗೊಳಿಸಿ ಅಸುಂಡಿಯವರು ತಮ್ಮ ಎಂಎಸ್‌ಸಿ. ಪ್ರಬಂಧವನ್ನು ಬರೆದಿದ್ದರು.

ಅದೇ ಕಾಲೇಜಿನಲ್ಲಿ ಅಸುಂಡಿಯವರು ೧೯೨೪ರಲ್ಲಿ ಅಸಿಸ್ಟಂಟ್ ಪ್ರೊಫೆಸರ್ ಎಂದು ನೇಮಕಗೊಂಡರು. ಆದರೆ ಅವರು ಒಂದೆರಡು ವರ್ಷಗಳಲ್ಲಿ ಆ ಕಾಲೇಜನ್ನು ಬಿಟ್ಟು ಹೋಗಬೇಕಾಗಿ ಬಂದಿತು; ಏಕೆಂದರೆ ಅಸುಂಡಿಯವರ ಎಂ.ಎಸ್‌ಸಿ. ಪ್ರಬಂಧವನ್ನು ಮೆಚ್ಚಿ ಮುಂಬೈ ವಿಶ್ವವಿದ್ಯಾಲಯದವರು ಹೆಚ್ಚಿನ ಸಂಶೋಧನೆಗೆಂದೇ ಮೀಸಲಾಗಿರಿಸಿದ ಬಿ. ಆರ್. ಅಕಬರನವೀಸ ಶಿಷ್ಯವೇತನವನ್ನು ಅಸುಂಡಿಯವರಿಗೆ ಕೊಡಮಾಡಿದರು. ಈ ಉನ್ನತ ಅಧ್ಯಯನಕ್ಕಾಗಿ ಪರದೇಶಗಳಿಗೆ ಹೋಗಲು ಅನುಕೂಲ ಮಾಡಿಕೊಡುವುದೇ ಈ ಶಿಷ್ಯವೇತನದ ಮೂಲ ಉದ್ದೇಶವಾಗಿತ್ತು. ಹೈಸ್ಕೂಲಿನಲ್ಲಿರುವಾಗಲೇ ಅಸುಂಡಿಯವರು ಪರದೇಶಕ್ಕೆ ಹೋಗುವ ಕನಸು ಕಂಡಿದ್ದರು. ಸಾಠೆ ಎಂಬ ಅವರ ಓರ್ವ ಮಿತ್ರ ಈ ವಿಚಾರವನ್ನು ಅವರ ತಲೆಯಲ್ಲಿ ತುಂಬಿದ್ದನು. ಮಧ್ಯೆ ಕೆಲವು ವರ್ಷಗಳವರೆಗೆ ಈ ವಿಚಾರ ಮರೆತಂತಾಗಿತ್ತು. ಈಗ ಪುನಃ ಸುಸಂಧಿ ಒದಗಿ ಬಂದಿತ್ತು.

ಲಂಡನ್ ಶಹರದ ಕಿಂಗ್ಸ್ ಕಾಲೇಜಿನಲ್ಲಿ ರಿಚರ್ಡ್‌ಸನ್ ಪ್ರಯೋಗಾಲಯದಲ್ಲಿ ಸಂಶೋಧನೆ ನಡೆಸಲು ೧೯೨೭ ರಲ್ಲಿ ಅಸುಂಡಿಯವರು ವಿದೇಶ ಪ್ರಯಾಣ ಕೈಕೊಂಡರು. ಈ ಪ್ರಯಾಣವನ್ನು ಅವರು ಸಮುದ್ರ ಮಾರ್ಗದಿಂದಲೇ ಕೈಕೊಂಡರು. ಅವರ ಈ ಪ್ರವಾಸವನ್ನು ಅವರೇ ಬರೆದ 'ವಿಲಾಯತಿಯ ಪ್ರವಾಸವು' ಎಂಬ ಅವರ ಸುದೀರ್ಘ (ಪತ್ರಸಾಲಿ ರಾಮಚಂದ್ರರಾಯರಿಗೆ ಬರೆದುದು)ವನ್ನು ಓದಿ ಆನಂದಿಸಬೇಕು.* ಆ ಪತ್ರ ಕನ್ನಡ ಗದ್ಯ ಸಾಹಿತ್ಯದ ಒಂದು ಶ್ರೇಷ್ಠ ಮಾದರಿಯೇ ಆಗಿದೆ !

ಪರದೇಶಗಳಿಗೆ ಹೋಗುವವರಿಗೆ ಮಠಗಳು ಬಹಿಷ್ಕಾರ ಹಾಕುವ ವಿಷಯ ಮೊದಲಿನಿಂದಲೂ ಬಂದುದು. ಹೀಗಾಗಿ ಅಸುಂಡಿಯವರಿಗೂ ಈ ಬಹಿಷ್ಕಾರ ತಗಲುವಂತಾಯಿತು. ಅಸುಂಡಿಯವರು ನಿಜವಾಗಿಯೂ ಧರ್ಮಿಷ್ಠರೆಂದೇ ಹೇಳಬೇಕು; ಸಾಂಪ್ರದಾಯಿಕ ಕಠಾರು ಕಟ್ಟಳೆಗಳನ್ನು ಪಾಲಿಸುವುದರಲ್ಲಿ ಅಲ್ಲವಿದ್ದರೂ ತತ್ವಜ್ಞಾನ, ದೇವರ ಬಗೆಗೆ, ಧರ್ಮದ ಬಗೆಗೆ ತಿಳಿದುಕೊಳ್ಳಲು ಪುಸ್ತಕಗಳನ್ನು ಓದಿ ಪ್ರಯತ್ನ ಮಾಡಿದರು. ಬಹಿಷ್ಕಾರ ಹಾಕಿಸಿಕೊಳ್ಳುವುದು ಅವರಿಗೆ ಬೇಡವಾಗಿತ್ತು. ಕಾರಣ, ಆಗಿನ ಕಾಲದ ಅವರ ಮಠಾಧಿಪತಿಗಳಾದ ಶ್ರೀ ಸತ್ಯಧ್ಯಾನತೀರ್ಥರ ಬಳಿಗೆ ಹೋಗಿ ಅವರೊಡನೆ ಬಹಿಷ್ಕಾರ ಹಾಕುವ ಸಂಪ್ರದಾಯದ ಬಗೆಗೆ ವಾದ ಹಾಕಿದರು. ತಾವು ಪರದೇಶಕ್ಕೆ ಹೋದರೂ ಅಲ್ಲಿ ಯಾವುದೇ ರೀತಿಯಲ್ಲಿ ಭ್ರಷ್ಟರಾಗುವುದಿಲ್ಲವೆಂಬ ಖಾತ್ರಿ ತಮಗೆ ಇದೆ ಎಂದು ಹೇಳಿದರು. ಕೇವಲ ಹೆಚ್ಚಿನ ಸಂಶೋಧನೆಯೇ ತಮ್ಮ ಗುರಿ ಎಂದು ಮೊದಲಾಗಿ ವಾದಿಸಿದರು. ಆದರೆ ಸ್ವಾಮಿಗಳು ಜಗ್ಗಲಿಲ್ಲ. ಮಠದ ನಿಯಮಗಳನ್ವಯ ಅವರಿಗೆ ಬಹಿಷ್ಕಾರ ಹಾಕಲೇಬೇಕಾಗುತ್ತದೆಂದು ಹೇಳಿದರು. ಅಸುಂಡಿಯವರು ಸ್ವಾಮಿಗಳಿಗೆ ನಮಸ್ಕರಿಸಿ ಹೊರಟು ಬಂದರು. ಉತ್ಕಟ ಸಂಶೋಧನಾ ಪ್ರೇಮಿಗಳಾದ ಅಸುಂಡಿಯವರು ಬಹಿಷ್ಕಾರವನ್ನು ಲೆಕ್ಕಿಸದೆ, ೧೯೨೭ ರಲ್ಲಿ ಇಂಗ್ಲಂಡಿಗೆ ಹೊರಟರು. ಆದರೆ, ತಮಗೆ ಬಹಿಷ್ಕಾರ ಹಾಕಿದರೆಂದು ಸ್ವಾಮಿಗಳ ಬಗೆಗಾಗಲಿ ಧರ್ಮದ ಬಗೆಗಾಗಲಿ ದ್ವೇಷವನ್ನೆಂದೂ ತಳೆಯಲಿಲ್ಲ. ತಾವು ಮಾತ್ರ ಈ ಸಾಂಪ್ರದಾಯಿಕ ಧರ್ಮದಿಂದ ದೂರ ಇದ್ದರು, ಅಷ್ಟೆ.

ಇದೇ ರೀತಿ, ಮುಂದೆ ಅಸುಂಡಿಯವರು ಅತಿ ಧರ್ಮಿಷ್ಠರೆಂದು ಪ್ರಸಿದ್ಧರಾದ ತಮ್ಮ ಅಣ್ಣಂದಿರಾದ ಅನಂತರಾಯರೊಡನೆಯೂ ಭಿನ್ನಾಭಿಪ್ರಾಯ ತಾಳಬೇಕಾಗಿ ಬಂದಿತು. ಆದರೆ, ತಮ್ಮ ತಂದೆಯವರು ತೀರಿಹೋದಮೇಲೆ ಮನೆಗೆ ಅಣ್ಣಂದಿರೇ ಹಿರಿಯರೆಂದು ತಿಳಿದು ಅವರಿಗೆ ತಕ್ಕ ಮರ್ಯಾದೆ ನೀಡುತ್ತಿದ್ದರು. ತಮ್ಮ ಊರಿಗೆ ಹೋದಾಗಲೆಲ್ಲ ಅಣ್ಣಂದಿರಿಗೆ ನಮಸ್ಕಾರ

* 'ಕಸ್ತೂರಿ' ಜುಲೈ ೧೯೮೩ರ ಪುಸ್ತಕ ವಿಭಾಗ ನೋಡಿರಿ.

ಮಹಾಮನೀ ಇರುತ್ತಿರಲಿಲ್ಲ. ಇದು ಅಸುಂಡಿಯವರ, ಕಾನೂನು–ಕಟ್ಟಳೆ, ಹಿರಿಯರು, ಮಾನ–ಮರ್ಯಾದೆ ಮುಂತಾದ ಸಮಾಜದ ಶಿಸ್ತಿನ ವಿಷಯಗಳ ಬಗೆಗೆ ಇದ್ದ ಗೌರವವನ್ನು ಸೂಚಿಸುತ್ತದೆ.

ಅಸುಂಡಿಯವರಂತಹ ಪ್ರಖ್ಯಾತ ರೋಹಿತ ಶಾಸ್ತ್ರಜ್ಞರ ಕಾರ್ಯಕ್ಷೇತ್ರವನ್ನು ತಿಳಿದುಕೊಳ್ಳಲು ರೋಹಿತಶಾಸ್ತ್ರದ ಕೆಲವು ಮೂಲಭೂತ ಸಂಗತಿಗಳನ್ನು ತಿಳಿದುಕೊಳ್ಳುವುದು ಯೋಗ್ಯವೆನಿಸುತ್ತದೆ.

ರೋಹಿತವೆಂದರೇನು ? ಸೂರ್ಯನ ಪ್ರಕಾಶ ಬೆಳ್ಳಗೆ ಎಂದು ಹೇಳುತ್ತೇವೆ. ಇಲ್ಲಿ "ಬೆಳ್ಳಗೆ" ಎಂದರೇನು? ಅದನ್ನು ನಾವು ಹೇಗೆ ತಿಳಿಯುತ್ತೇವೆ? ಕಾಗದ, ಗೋಡೆ, ಮುಂತಾದ ಪದಾರ್ಥಗಳ ಮೇಲೆ ಸೂರ್ಯನ ಬೆಳಕು ಬಿದ್ದು ಅದು ಪ್ರತಿಫಲಿಸಲ್ಪಟ್ಟು ನಮ್ಮ ಕಣ್ಣನ್ನು ತಲುಪುತ್ತದೆ; ಆಗ ನಾವು ಆ ಪದಾರ್ಥಗಳು ಬೆಳ್ಳಗೆ ಎಂದು ಹೇಳುತ್ತೇವೆ. ಆದರೆ, ಸೂರ್ಯನ ಬೆಳಕು ತುಂತುರ ಹನಿ ಬರುವಾಗ ಏಳು ಬಣ್ಣಗಳ ಕಾಮನ ಬಿಲ್ಲನ್ನು ಮೂಡಿಸುತ್ತದೆ. ಹಾಗಾದರೆ ಸೂರ್ಯನ ಪ್ರಕಾಶ ಯಾವ ಬಣ್ಣದ್ದು? ಕಾಮನ ಬಿಲ್ಲಿನಲ್ಲಿ ಕಂಡುಬರುವ ಏಳು ಬಣ್ಣಗಳ ಮಿಶ್ರಣವೇ ಬಿಳಿಯ ಬಣ್ಣವಾಗಿರಬೇಕಲ್ಲವೆ? ಸೂರ್ಯನ ಬೆಳಕು ಮಳೆ ಹನಿಗಳ ಮೂಲಕ ಹಾಯ್ದು ಹೋದಾಗ ಕಾಮನ ಬಿಲ್ಲು ಮೂಡುತ್ತದೆ. ನೀರಿನ ಹನಿಗಳು ಸೂರ್ಯನ 'ಬಿಳಿಯ' ಬೆಳಕನ್ನು ಪೃಥಕ್ಕರಿಸಿ ಕಾಮನ ಬಿಲ್ಲಿನ ಬಣ್ಣಗಳನ್ನು ಕೊಡುತ್ತವೆ. ಕಾಮನ ಬಿಲ್ಲೇ ಸೂರ್ಯಪ್ರಕಾಶದ 'ರೋಹಿತ' (spectrum) ಎಂದು ಹೇಳುತ್ತೇವೆ.

ಇದೇ ರೀತಿ ಸೂರ್ಯ ಪ್ರಕಾಶವನ್ನು ಸ್ಪೆಕ್ಟ್ರೋಗ್ರಾಫಿನ ಮೂಲಕ ನೋಡಿದಾಗ ಅಲ್ಲಿ ನಮಗೆ ಕಾಣುವುದು ವರ್ಣಮಾಲೆಯೊಂದು. ಅದರಲ್ಲಿ ಕಾಮನ ಬಿಲ್ಲಿನಲ್ಲಿಯಂತೆಯೆ ಕೆಂಪು, ಹಳದಿ, ನೀಲಿ ಮುಂತಾದ ಏಳು ಬಣ್ಣಗಳು ಒಂದಕ್ಕೊಂದು ಹೊಂದಿಕೊಂಡು ಒಂದು ವರ್ಣ ಪಟಲವನ್ನು ನಿರ್ಮಿಸಿದುದು ಕಂಡುಬರುತ್ತದೆ. ಇದೇ ಪ್ರಕಾರ, ಆರ್ಕ್, ಸ್ಪಾರ್ಕ್ ಮುಂತಾದ ಯಾವುದೇ ಪ್ರಕಾರದ ಆಕರವನ್ನು ಸ್ಪೆಕ್ಟ್ರೋಗ್ರಾಫಿನ ಮೂಲಕ ವೀಕ್ಷಿಸಿದಾಗ ಆಯಾ ಆಕರದ ಪ್ರಕಾಶ (ವಿಕಿರಣ) ತನ್ನ ವಿಶಿಷ್ಟ ರೋಹಿತವನ್ನು ಪ್ರದರ್ಶಿಸುತ್ತದೆ. ಸೂರ್ಯನ ರೋಹಿತದಲ್ಲಿದ್ದಂತೆ ವರ್ಣ ಪಟ್ಟಿ ಕಂಡುಬರಬಹುದು, ಇಲ್ಲವೆ ವಿವಿಧ ಬಣ್ಣಗಳ ರೇಖೆಗಳು ಕಂಡುಬರಬಹುದು, ಅಥವಾ ಪಟಲ ಮತ್ತು ರೇಖೆಗಳ ಮಿಶ್ರಣ ಕೂಡ ಕಂಡುಬರಬಹುದು. ಇವೆಲ್ಲ ವಿವಿಧ ರೋಹಿತಗಳೇ.

ಈ ಎಲ್ಲ ರೋಹಿತ ರೇಖೆಗಳು ಉತ್ಸರ್ಜನಾ ರೇಖೆಗಳು (emission lines) ಅಂದರೆ, ಆಕರಗಳು ಉತ್ಸರ್ಜಿಸುವ ಶಕ್ತಿ ರೇಖೆಗಳು. ಇವು ಹೊಳೆಯುವ (bright) ರೇಖೆಗಳಾಗಿರುತ್ತವೆ. ವಿವಿಧ ವರ್ಣಗಳನ್ನು ಹೊಂದಿರುತ್ತವೆ. ಆದರೆ, ಕೆಲವೊಂದು ಪ್ರಸಂಗಗಳಲ್ಲಿ 'ಕರಿ' ರೇಖೆಗಳನ್ನು ಕೂಡ ನಾವು ರೋಹಿತಗಳಲ್ಲಿ ನೋಡುವದುಂಟು. ಉದಾಹರಣೆಗೆ, ಸೂರ್ಯನ ರೋಹಿತವನ್ನೇ ಸೂಕ್ಷ್ಮವಾಗಿ ವೀಕ್ಷಿಸಿದರೆ ಅದರಲ್ಲಿ ಮಧ್ಯಮಧ್ಯದಲ್ಲಿ ಕೆಲವಷ್ಟು ಕರಿ ರೇಖೆಗಳು ಕಾಣುತ್ತವೆ. ಸೂರ್ಯನ ರೋಹಿತದಲ್ಲಿಯ ಈ ರೇಖೆಗಳಿಗೆ ಫ್ರಾನ್‌ಹಾಫರ್ ರೇಖೆಗಳು ಎಂದು ಹೆಸರು. ಸೂರ್ಯನಂಥ ಅವಿಚ್ಛಿನ್ನ ರೋಹಿತವನ್ನು ಕೊಡಬಲ್ಲ ಆಕರವೊಂದರಿಂದ ವಿಕಿರಣವು ಕೆಲವೊಂದು ಅನಿಲಗಳನ್ನಾಗಲಿ ಪ್ರವಾಹಿಗಳನ್ನಾಗಲಿ ದಾಟುವಾಗ ಆ ವಿಕಿರಣದಿಂದ ಕೆಲವಷ್ಟು ತರಂಗದೂರದ ವಿಕಿರಣ ಹೀರಲ್ಪಡುತ್ತದೆ. ಕಾರಣ, ಈ ತರಂಗ ದೂರದ ವಿಕಿರಣ ಆ ಅವಿಚ್ಛಿನ್ನ ಆಕರದ ರೋಹಿತದಲ್ಲಿ ಕಂಡುಬರುವುದಿಲ್ಲ. ಇಂಥ ಶೂನ್ಯ ಶಕ್ತಿ ಸ್ಥಳಗಳೇ 'ಕರಿ' ರೇಖೆಗಳಾಗಿ ಕಾಣುತ್ತವೆ. ಇವುಗಳಿಗೆ ಶೋಷಣಾ–ರೇಖೆಗಳು (absorption lines) ಅನ್ನುತ್ತಾರೆ.

ಹೈಡ್ರೋಜನ್ ಪರಮಾಣು ಎಲ್ಲಕ್ಕೂ ಸರಳ ಪರಮಾಣುವಾದುದರಿಂದ ಅದರ ರೋಹಿತವನ್ನೇ ಮೊದಲು ಅಭ್ಯಸಿಸಲಾಯಿತು. ಈ ರೋಹಿತದಲ್ಲಿ ಕೆಲವೊಂದು ನಿರ್ದಿಷ್ಟ ತರಂಗ ದೂರಗಳನ್ನು ಹೊಂದಿದ ಬಾಮರ್–ಶ್ರೇಣಿ (Balmer Series) ರೇಖೆಗಳು ಸುವಿದಿತವಾಗಿವೆ. ಇವಲ್ಲದೆ, ಹೈಡ್ರೋಜನ್ ರೋಹಿತ

ದಲ್ಲಿಯೋ, ಸ್ಪಷ್ಟ ಪಸರಿಸಿದ ರೇಖೆಗಳಂಥ ವಿನ್ಯಾಸ ಕೂಡ ಕಂಡುಬರುತ್ತದೆ. ಈ ವಿನ್ಯಾಸ ವನ್ನು ಸೂಕ್ಷ್ಮವಾಗಿ ನೋಡಿದರೆ, ಅದರಲ್ಲಿ ಪಸರಿಸಿದ ರೇಖೆಗಳ ತೀವ್ರತೆ (intensity) ಒಂದೆಡೆ ಹೆಚ್ಚು ಇದ್ದು, ಇನ್ನೊಂದು ದಿಶೆಯಲ್ಲಿ ಕ್ರಮೇಣ ಕಡಿಮೆಯಾಗುತ್ತ ಹೋದುದು ಕಂಡುಬರುತ್ತದೆ. ಇದು ಒಂದು ನಿಶಾನೆಯಂತೆ ತೋರುತ್ತದೆ. ಈ ರಚನೆಗೆ ರೋಹಿತ ಪಟ್ಟಿ (band) ಎಂದು. ಹೆಸರು ಇಂಥ ಅನೇಕ ಪಟ್ಟಿಗಳನ್ನು ಒಳಗೊಂಡ ರೋಹಿತಕ್ಕೆ ಪಟ್ಟಿ-ರೋಹಿತ (band spectrum) ಎನ್ನುತ್ತೇವೆ.

ರೇಖಾ-ರೋಹಿತ (line spectrum) ಪರಮಾಣುವಿನಿಂದ ಉದ್ಭವಿಸಿದುದು. ರಚನೆಯಲ್ಲಿ ಅಣು, ಪರಮಾಣುವಿಗಿಂತ ಕ್ಲಿಷ್ಟವಾದುದರಿಂದ, ಅಣುವಿನಿಂದ ಬರುವ ರೋಹಿತ ಕೂಡ ಪರಮಾಣುವಿನ ರೋಹಿತಕ್ಕಿಂತ ಬಹಳ ಕ್ಲಿಷ್ಟವಾಗಿರುತ್ತದೆ.

ಅಣುವಿನ ಶಕ್ತಿ-ಸ್ಥಿತಿಗಳನ್ನು Σ, π, △, φ ಎಂಬ ಗ್ರೀಕ್ ಸಂಜ್ಞೆಗಳಿಂದ ಸೂಚಿಸುತ್ತಾರೆ. ಅಣು-ರೋಹಿತವು ಅಣು ಒಂದು ಸ್ಥಿತಿಯಿಂದ ಇನ್ನೊಂದು ಸ್ಥಿತಿಗೆ ಸಂಕ್ರಮಿಸಿದಾಗ ಉದ್ಭವಿಸುತ್ತದೆ. ಇದನ್ನು Σ←→π, π←→△ ಮುಂತಾದ ಸಂಜ್ಞೆಗಳಿಂದ ಬರೆಯುತ್ತಾರೆ. ಇಂಥ ಒಂದು ಸಂಕ್ರಮ ಒಂದು ಪಟ್ಟಿ ರೋಹಿತ ವ್ಯವಸ್ಥೆ (band system) ಯನ್ನು ಕೊಡುತ್ತದೆ. ಒಂದೇ ಅಣುವು ಎಷ್ಟೋ ರೋಹಿತ ವ್ಯವಸ್ಥೆಗಳನ್ನು ಪಡೆದಿರುವುದು ಸಾಧ್ಯ.

ಪಟ್ಟಿ ರೋಹಿತಗಳ ವಿಶ್ಲೇಷಣೆ ಮಾಡಿ ಯಾವುದೊಂದು ಅಣುವಿನ ರಚನೆಯ ಬಗೆಗೆ ಹೇಳುವುದು ಸಾಧ್ಯ, ಅಣು ತ್ರಿಕೋಣಾಕೃತಿಯನ್ನು ಹೊಂದಿದೆಯೋ, ಪಿರ್ಯಾಮಿಡ್ ಆಕೃತಿಯದಾಗಿದೆಯೋ ಎಂದು ಮುಂತಾಗಿ ಈ ಅಧ್ಯಯನದಿಂದ ನಿರ್ಧರಿಸುವುದು ಸಾಧ್ಯ.

ಎಲ್ಲಕ್ಕೂ ಸರಳವಾದ ಅಣು ಎರಡು ಪರಮಾಣುಗಳನ್ನು ಹೊಂದಿರುತ್ತದೆ. ಉದಾಹರಣೆಗೆ, $H_2$, $C_2$, NO, CO. ಇಂಥ ಅಣುಗಳಿಗೆ ದ್ವಿ-ಪರಮಾಣು ಅಣು (diatomic molecules) ಎನ್ನುತ್ತೇವೆ. ಮೂರು ಪರಮಾಣು ಹೊಂದಿದ $NO_2$, $CO_2$, HCO ಮುಂತಾದ ಅಣುಗಳೂ, ಇನ್ನೂ ಹೆಚ್ಚು ಪರಮಾಣುಗಳನ್ನು ಹೊಂದಿದ ಬೆಂಝೀನಿನಂತಹ ($C_6H_6$) ಅಣುಗಳೂ ಎಲ್ಲವೂ ಸೇರಿದಂತೆ, ಬಹು-ಪರಮಾಣು ಅಣುಗಳ (polyatomic molecules) ವರ್ಗಕ್ಕೆ ಸೇರಿದಂತಹವು. ಸ್ವಾಭಾವಿಕವಾಗಿಯೇ ದ್ವಿ-ಪರಮಾಣು ಅಣುವಿನ ರೋಹಿತ, ಬಹು ಪರಮಾಣು ಅಣುವಿನ ರೋಹಿತಕ್ಕಿಂತ ಸುಲಭವಾಗಿರುತ್ತದೆ. ಆದುದರಿಂದ ಸಾಮಾನ್ಯವಾಗಿ, ದ್ವಿ-ಪರಮಾಣು ಅಣುವನ್ನೇ ರೋಹಿತಜ್ಞರು ಅಭ್ಯಾಸಮಾಡುವುದುಂಟು.

ಇಂಗ್ಲಂಡಿಗೆ ಅನೇಕಾನೇಕ ಆಕಾಂಕ್ಷೆಗಳನ್ನು ಇಟ್ಟುಕೊಂಡು ಹೋದ ಅಸುಂಡಿಯವರಿಗೆ ಒಂದು ವಿಚಿತ್ರ ರೀತಿಯ ಸ್ವಾಗತವು ಕಾಯ್ದಿತ್ತು. ಲಂಡನ್ನಿನ ರಿಚರ್ಡ್ಸನ್ ಪ್ರಯೋಗಾಲಯದಲ್ಲಿ ಅಸುಂಡಿಯವರಿಗಿಂತ ಮೊದಲು ಕೆಲಸ ಮಾಡಲು ಹೋದ ಕೆಲ ಹಿರಿಯ ಸಹೋದ್ಯೋಗಿಗಳು ತಮ್ಮ ಪ್ರಯೋಗಾಲಯದ ಬಗೆಗೆ, ಪ್ರೊಫೆಸರುಗಳ ಬಗೆಗೆ ಏನೇನೋ ಇಲ್ಲ-ಸಲ್ಲದ ಸಂಗತಿಗಳನ್ನು ಅಸುಂಡಿಯವರಿಗೆ ಹೇಳಿದರು. ಆ ಪ್ರಯೋಗಾಲಯದ ಗಾಜಿನ ಕೆಲಸಗಾರ (glass blower) ವಿಚಿತ್ರ ಮನುಷ್ಯನಿದ್ದನೆಂದೂ, ಅವನಿಂದ ಸುಲಭವಾಗಿ ಕಾಜಿನ ಉಪಕರಣಗಳನ್ನು ಮಾಡಿಸಿಕೊಳ್ಳಬೇಕಾದರೆ ಅವನನ್ನು ತಿಂಡಿ-ತೀರ್ಥಗಳಿಂದ ಸಂತೃಪ್ತಗೊಳಿಸಬೇಕೆಂದೂ ಉಪದೇಶಿಸಿದರು. ಇದೆಲ್ಲವೂ ಅಸುಂಡಿಯವರಿಗೆ ಹೊಸದಾಗಿಯೂ, ವಿಚಿತ್ರವಾಗಿಯೂ ತೋರಿತು. ಅವರು ತಮ್ಮ ಸಹೋದ್ಯೋಗಿಗಳಿಗೆ ಏನೂ ಉತ್ತರ ಕೊಡದೆ ಸುಮ್ಮನಿದ್ದರು. ಆದರೆ ಮುಂದೆ ೨-೩ ದಿನಗಳಲ್ಲಿಯೇ ಅವರ ಮಿತ್ರರೆಲ್ಲ ಅಸುಂಡಿಯವರನ್ನು ಕಾಜಿನ ಉಪಕರಣಗಳನ್ನು ತಯಾರಿಸುವ ಕಮ್ಮಟದಲ್ಲಿ ಕಂಡು ಅಚ್ಚರಿಪಟ್ಟರು. ತಮಗೆ ಬೇಕಾಗುವ ಕಾಜಿನ ಉಪಕರಣಗಳನ್ನು ಸ್ವತಃ ತಾವೇ ಮಾಡಿಕೊಳ್ಳತೊಡಗಿದ್ದರು ಅಸುಂಡಿಯವರು. ಹೀಗಿದ್ದರೂ, ಅವರಿಗೆ ಈ ರೀತಿಯ ಅಭ್ಯಾಸ ಇದೇ

ಇದ್ದಿತು, ಏಕೆಂದರೆ ಅವರು ವಿಲ್ಸನ್ ಕಾಲೇಜಿನಲ್ಲಿ ಎಂ. ಎಸ್ಸಿ.ಗೆ ಕೆಲಸ ಮಾಡುತ್ತಿದ್ದಾಗ ರಮನೆ ಅವಶ್ಯವಾದ ಕಾಜಿನ ಉಪಕರಣಗಳನ್ನು ತಾವೇ ಮಾಡಿಕೊಳ್ಳುತ್ತಿದ್ದರು.

ಅಸುಂಡಿಯವರು ಲಂಡನ್ನಿನಲ್ಲಿ ಡಾ. ಆರ್. ಸಿ. ಜಾನ್ಸನ್ ಎಂಬ ಪ್ರಸಿದ್ಧ ರೋಹಿತಶಾಸ್ತ್ರಜ್ಞರೊಡನೆ ಸಂಶೋಧನೆಯನ್ನು ಪ್ರಾರಂಭಿಸಿದರು. (ಜಾನ್ಸನ್ನರೇ ಹಿಂದುಸ್ತಾನದ ಇನ್ನೊಬ್ಬ ಪ್ರಖ್ಯಾತ ರೋಹಿತಶಾಸ್ತ್ರಜ್ಞರಾದ ಡಾ. ಎನ್. ಆರ್. ತಾವಡೆಯವರಿಗೂ ಮಾರ್ಗದರ್ಶನ ಮಾಡಿದರು.) ಪಿಎಚ್. ಡಿ. ಪದವಿ ಬರುವ ಮುನ್ನವೇ ಅಸುಂಡಿಯವರು ಹಲವಾರು ಸಂಶೋಧನಾತ್ಮಕ ಪ್ರಬಂಧಗಳನ್ನು ಬರೆದು ಅತ್ಯುನ್ನತ ಮಟ್ಟದ ರೋಹಿತಜ್ಞರಾಗುವ ಲಕ್ಷಣಗಳನ್ನು ಪ್ರದರ್ಶಿಸಿದ್ದರು. ಇದೇ ಸಮಯದಲ್ಲಿ ಅವರು CO ಅಣುವಿನ $(C'\Sigma - \lambda'\pi)$ ಸಂಕ್ರಮದಿಂದ ಉದ್ಭವಿಸುವ ಹೊಸ ಪಟ್ಟಿ ರೋಹಿತ ವ್ಯವಸ್ಥೆಯೊಂದನ್ನು ಕಂಡುಹಿಡಿದರು. ಈ ವ್ಯವಸ್ಥೆಯನ್ನೇ ಈಗ ನೋಬೆಲ್ ಬಹುಮಾನ ವಿಜೇತರಾದ ಡಾ. ಜಿ. ಹರ್ಝ್‌ಬರ್ಗ್ ಅವರೂ ಸ್ವತಂತ್ರವಾಗಿ ಕಂಡುಹಿಡಿದಿದ್ದರು. ಆದುದರಿಂದ ಈ ಪಟ್ಟಿ–ರೋಹಿತ ವ್ಯವಸ್ಥೆಗೆ ಮೊದಲು ಜಾನ್ಸನ್, ಅಸುಂಡಿ, ಹರ್ಝ್‌ಬರ್ಗ್ ಸಂಕ್ರಮವೆಂದೂ, ಅನಂತರ ಹರ್ಝ್‌ಬರ್ಗ್–ಅಸುಂಡಿ ಸಂಕ್ರಮವೆಂದೂ ಕರೆಯಲ್ಪಡುತ್ತಿತ್ತು. ಈಗ ಮಾತ್ರ ಅದು ಕೇವಲ ಹರ್ಝ್‌ಬರ್ಗ್ ವ್ಯವಸ್ಥೆ ಎಂದು ಕರೆಯಲ್ಪಡುತ್ತದೆ. ಅಸುಂಡಿಯವರು ಈ ವ್ಯವಸ್ಥೆಯ ಹಲವಾರು ಪಟ್ಟಿಗಳ ಸೂಕ್ಷ್ಮ ರಚನೆಯನ್ನು ವಿಶ್ಲೇಷಿಸಿ ಆ ವ್ಯವಸ್ಥೆ $'\Sigma - '\pi$ ಸಂಕ್ರಮದಿಂದಲೇ ಉದ್ಭವಿಸಿದುದು ಎಂದು ಮೊಟ್ಟಮೊದಲ ಬಾರಿಗೆ ತೋರಿಸಿಕೊಟ್ಟರು. ಇದೇ ಸಮಯದಲ್ಲಿ ಅಸುಂಡಿಯವರು ಇನ್ನೊಂದು ಮಹತ್ವದ ಸಂಶೋಧನೆಯನ್ನು ಮಾಡಿದರು. CO ಅಣುವಿನ ಇನ್ನೊಂದು ಸಂಕ್ರಮ $(\alpha'^3\Sigma - \alpha^3\pi r)$ ಕೊಡುವ ಪಟ್ಟಿ-ರೋಹಿತ ವ್ಯವಸ್ಥೆಯನ್ನು ಅವರು ಕಂಡುಹಿಡಿದರು. ಈ ವ್ಯವಸ್ಥೆಗೆ ಅಸುಂಡಿ ರೋಹಿತವೆಂದೇ ಹೆಸರು ಪ್ರಾಪ್ತವಾಯಿತು.

ಲಂಡನ್ನಿನಲ್ಲಿರುವಾಗಲೇ ಅಸುಂಡಿಯವರು ಇನ್ನೂ ಒಂದು ಮುಖ್ಯ ಸಂಶೋಧನೆಯನ್ನು ಮಾಡಿದರು. ಹೆಚ್ಚು ಒತ್ತಡಗಳಲ್ಲಿ $C_2$ ಅಣು ಒಂದು ವಿಶಿಷ್ಟ ಪಟ್ಟಿ ರೋಹಿತವನ್ನು ಕೊಡುತ್ತದೆ. ಆದರೆ ಆಗಿನ ಕಾಲದಲ್ಲಿ, ಈ ಪಟ್ಟಿ ರೋಹಿತ ನಿಜವಾಗಿಯೂ $C_2$ ಅಣುವಿನಿಂದ ಉದ್ಭವಿಸಿದುದೋ ಅಥವಾ COದಿಂದಲೋ, ಇಲ್ಲವೆ $CO^+$(CO ಅಣುವಿನ ಅಯಾನು) ದಿಂದಲೋ ಅಥವಾ CH CHನಿಂದಲೋ ಎಂಬುದು ಖಚಿತವಾಗಿ ಸಿದ್ಧವಾಗಿದ್ದಿಲ್ಲ. ಅಸುಂಡಿಯವರು ಈ ರೋಹಿತವನ್ನು ಆಳವಾಗಿ ಅಭ್ಯಸಿಸಿ ಅದು $C_2$ಅಣುವಿನಿಂದಲೇ ಆದುದು ಎಂದು ಖಂಡಿತವಾಗಿ ತೋರಿಸಿಕೊಟ್ಟರು. ಅನಂತರದ ಈ ರೋಹಿತದ ಅಧ್ಯಯನ ಕೂಡ ಈ ಸಂಗತಿಯನ್ನು ಖಚಿತಪಡಿಸಿದೆ.

ಸಂಶೋಧನೆಯನ್ನು ಪ್ರಾರಂಭಿಸಿದ ಎರಡು ವರ್ಷಗಳಲ್ಲಿ ಅಸುಂಡಿಯವರು ಪಿಎಚ್.ಡಿ ಪದವಿಯನ್ನು ಗಳಿಸಿದರು. ಇದು, ಅವರ ಸಂಶೋಧನಾ ಪ್ರೇಮ, ಸತತ ದುಡಿತ ಇವೆಲ್ಲ ಪಕ್ಕಾ ಸಾಕ್ಷಿ. ೧೯೨೯ರಲ್ಲಿ, ಅವರು ಬರೆದು





ಸಲ್ಲಿಸಿದ 'ಕಾರ್ಬನ್ ಮೊನ್‌ಕ್ಸಾಯಿಡಿನ ಅಣು ರೋಹಿತಗಳು' (Molecular spectra of carbon monoxide) ಎಂಬ ಪ್ರಬಂಧಕ್ಕೆ ಪಿ.ಎಚ್.ಡಿ. ಪದವಿಯನ್ನು ದಯಪಾಲಿಸಲಾಯಿತು.

೧೯೩೦ರಲ್ಲಿ ಡಾ. ಅಸುಂಡಿಯವರು ಸ್ವದೇಶಕ್ಕೆ ಮರಳಿ ಬಂದರು. ಬರುವ ಮುನ್ನ ಯುಟ್ರೆಕ್ಟ್, ಐಂಡ್‌ಹಾವೆನ್, ಆ್ಯಮ್‌ಸ್ಟರ್‌ಡ್ಯಾಮ್, ಲೇಡನ್, ಬಾನ್ ಮತ್ತು ಬರ್ಲಿನ್ ನಗರಗಳಲ್ಲಿಯ ಪ್ರಯೋಗಾಲಯಗಳಿಗೆ ಭೇಟ್ಟಿಯಿತ್ತರು. ಸ್ವದೇಶಕ್ಕೆ ಬಂದನಂತರ ಅಲಿಗಡ ಮುಸ್ಲಿಂ ವಿಶ್ವವಿದ್ಯಾಲಯದಲ್ಲಿ ೧೯೩೧ ರಲ್ಲಿ ರೀಡರ್ ಆಗಿ ಸೇರಿಕೊಂಡರು. ಅಲ್ಲದೆ, ಭೌತಶಾಸ್ತ್ರ ವಿಭಾಗದ ಚೇರಮನ್ ಕೂಡ ಆಗಿ ಅಲಿಗಢ ವಿಶ್ವವಿದ್ಯಾಲಯದಲ್ಲಿ ೧೯೪೮ರ ವರೆಗೆ ಕೆಲಸ ಮಾಡಿದರು. ಅಲ್ಲಿರುವಾಗ, ಡಾ. ಸ್ಯಾಮುಯೆಲ್ ಅವರ ಜೊತೆಗೂಡಿ ರೋಹಿತಶಾಸ್ತ್ರದ ಪ್ರಯೋಗಾಲಯವನ್ನು ಅಭಿವೃದ್ಧಿಪಡಿಸಿದರು. ಸ್ವಲ್ಪ ದಿನಗಳಲ್ಲಿಯೇ ಈ ಪ್ರಯೋಗಾಲಯ ಇಡೀ ದೇಶದಲ್ಲಿಯೇ ಅತಿ ಮುಂದುವರೆದ ರೋಹಿತೀಯ ಪ್ರಯೋಗಾಲಯ ಎಂದು ಖ್ಯಾತಿ ಪಡೆಯಿತು. ಅಲಿಗಢ ವಿಶ್ವವಿದ್ಯಾಲಯದಲ್ಲಿ ಇತ್ತ ಬಿ. ಎಸ್ಸಿ. ಎಂ. ಎಸ್ಸಿ. ವರ್ಗಗಳಿಗೆ ಪಾಠ ಮಾಡುವುದಲ್ಲದೆ, ವಿದ್ಯಾರ್ಥಿಗಳಿಗೆ ಸಂಶೋಧನೆಯಲ್ಲಿ ಮಾರ್ಗದರ್ಶನ ಮಾಡಿ, ಎಂ. ಎಸ್ಸಿ. ಮತ್ತು ಪಿ. ಎಚ್. ಡಿ. ಪದವಿಗಳನ್ನು ಗಳಿಸುವಲ್ಲಿ ಸಹಾಯಮಾಡಿದರು. ಅಲ್ಲಿರುವ ಸಮಯದಲ್ಲಿ ಅಸುಂಡಿಯವರು ಮಾಡಿದ ಕೆಲವು ಮಹತ್ವದ ಸಂಶೋಧನೆಗಳು ಇಂತಿವೆ.

ಡಾ. ಕರೀಮ್ ಎಂಬ ತಮ್ಮ ವಿದ್ಯಾರ್ಥಿ ಜೊತೆ CCL ಅಣುವಿನ, ಈಗ ಗೊತ್ತಿರುವ ಬೇರೆ ಬಂದು ಸ್ಪೆಕ್ಟ್ರಮವನ್ನು ಕಂಡುಹಿಡಿದರು.

ಪಾರ್ಥ ಎಂಬ ತಮ್ಮ ಇನ್ನೊಬ್ಬ ವಿದ್ಯಾರ್ಥಿಯೊಂದಿಗೆ $Sc_2$ ಅಣುವಿನ ಪಟ್ಟಿ-ರೋಹಿತ ವ್ಯವಸ್ಥೆಗಳ ಅಂದೋಲೀಯ ವಿಶ್ಲೇಷಣೆ ಮಾಡಿ ಆ ಅಣುವನ್ನು ಆಳವಾಗಿ ಅಭ್ಯಸಿಸಿದರು.

ಆದಿಸ್ಥಾನದಲ್ಲಿ ಬಹು-ಪರಮಾಣು ಅಣು (Poly atomic molecules)ಗಳ ರೋಹಿತಗಳನ್ನು ಅಧ್ಯಯನ ಮಾಡಿದವರು ತೀರ ವಿರಳ. ಸಾಮಾನ್ಯವಾಗಿ ಎಲ್ಲ ರೋಹಿತಜ್ಞರೂ, ಈಗಿನ ದಿನಗಳಲ್ಲಿ ಕೂಡ, ದ್ವಿ-ಪರಮಾಣು ಅಣು (diatomic molecules)ಗಳನ್ನೇ ಅಭ್ಯಸಿಸುತ್ತಾರೆ. ಆದರೆ, ಅಸುಂಡಿಯವರು ಸುಮಾರು ೫೦ ವರ್ಷಗಳ ಪೂರ್ವದಲ್ಲಿಯೇ ಬಹು-ಪರಮಾಣು ಅಣುಗಳ ರೋಹಿತಗಳನ್ನು ಅಧ್ಯಯನ ಮಾಡಿದರು. ಅವರು ಅಧ್ಯಯನ ಮಾಡಿದ ಇಂಥ ಅಣುಗಳೆಂದರೆ $SO_2$, $ScO_2$ ಮುಂತಾದವು.

ಪಂಡಿತ ಮದನ ಮೋಹನ ಮಾಲವೀಯ ಎಂಥ ದೊಡ್ಡ ಶಿಕ್ಷಣ ತಜ್ಞರು ಎಂಬುದು ಎಲ್ಲರಿಗೂ ತಿಳಿದ ವಿಷಯ. ಅವರೇ ಬನಾರಸ್ ಹಿಂದೂ ವಿಶ್ವವಿದ್ಯಾಲಯವನ್ನು ಸ್ಥಾಪಿಸಿ ಅದರ ಪ್ರಪ್ರಥಮ ಉಪಕುಲಪತಿಗಳಾಗಿದ್ದವರು. ಡಾ. ಅಸುಂಡಿಯವರ ಸಂಶೋಧನಾ ಕಾರ್ಯ, ವಿದ್ವತ್ತು ಪಂಡಿತ ಮದನಮೋಹನರ ಗಮನ ಸೆಳೆಯಿತು: ಅವರು ಅಸುಂಡಿಯವರಿಗೆ ಆ ವಿಶ್ವವಿದ್ಯಾಲಯವನ್ನು ಸೇರಲು ಆಮಂತ್ರಣವಿತ್ತರು. ೧೯೪೯ ರಲ್ಲಿ ಅಸುಂಡಿಯವರು ಆ ವಿಶ್ವವಿದ್ಯಾಲಯವನ್ನು ಸೇರಿ ೧೯೬೬ರಲ್ಲಿ ನಿವೃತ್ತಿಹೊಂದುವ ವರೆಗೆ ಅಲ್ಲಿಯೇ ಸೇವೆಯನ್ನು ಸಲ್ಲಿಸಿದರು.

ಬನಾರಸ್ ಹಿಂದೂ ವಿಶ್ವವಿದ್ಯಾಲಯದಲ್ಲಿ ಅಸುಂಡಿಯವರು ಸೇವೆಗೆ ಸೇರಿದಾಗ ಅಲ್ಲಿ ರೋಹಿತಶಾಸ್ತ್ರವು ಭೌತಶಾಸ್ತ್ರದ ಒಂದು ಭಾಗವಾಗಿತ್ತು. ಸ್ವತಂತ್ರ ವಿಭಾಗವನ್ನಾಗಿ ಮಾಡಿದರೆ ಅದನ್ನು ವಿಶಿಷ್ಟ ರೀತಿಯಲ್ಲಿ ಅಭಿವೃದ್ಧಿಗೊಳಿಸಬಹುದೆಂದು ಅಸುಂಡಿಯವರು ಭಾವಿಸಿದರು. ಅದುದರಿಂದ ಈ ದಿಶೆಯಲ್ಲಿ ಪ್ರಯತ್ನ ನಡೆಸಿದರು. ಆದರೆ ಅವರಿಗೆ ಕೂಡಲೇ ಯಶಸ್ಸು ದೊರೆಯಲಿಲ್ಲ. ಇದಕ್ಕೆ ಕಾರಣ ಇನ್ನೊಬ್ಬ ಕನ್ನಡಿಗ ಶಾಸ್ತ್ರಜ್ಞ! ಅಲ್ಲಿಯ ಪ್ರಾಧ್ಯಾಪಕರಾಗಿದ್ದ ಇನ್ನೋರ್ವ ಕನ್ನಡಿಗರು ಅಸೂಯೆಯಿಂದಲೋ ಅಥವಾ ಇನ್ನಾವ

ಭಾವನೆಯಿಂದಲೋ ಅಸುಂಡಿಯವರನ್ನು ವಿರೋಧಿಸಿದರು. ಆದರೆ ಕೊನೆಗೂ ಅಸುಂಡಿಯವರೇ ಜಯಪ್ರದರಾದರು. ಕೆಲವು ವರ್ಷಗಳ ನಂತರ ರೋಹಿತಶಾಸ್ತ್ರ ವಿಭಾಗ ಸ್ವತಂತ್ರ ವಿಭಾಗವಾಗಿ ಮಾರ್ಪಟ್ಟು ಅದಕ್ಕೆ ಅಸುಂಡಿಯವರೇ ಮುಖ್ಯಸ್ಥರಾದರು.

ಅನಂತರ ರೋಹಿತಶಾಸ್ತ್ರ ವಿಭಾಗದ ಬೆಳವಣಿಗೆ ತ್ವರಿತ ಗತಿಯಿಂದ ಸಾಗಿತು. ಕೆಲವೇ ವರ್ಷಗಳಲ್ಲಿ ಬನಾರಸ್ ಹಿಂದೂ ವಿಶ್ವವಿದ್ಯಾಲಯದ ರೋಹಿತಶಾಸ್ತ್ರ ವಿಭಾಗ ದೇಶದ ಪ್ರಮುಖ ಸಂಶೋಧನಾಬೋಧನಾ ಕೇಂದ್ರವೆಂದು ಪ್ರಸಿದ್ಧಿ ಪಡೆಯಿತು. ದೂರ ದೂರಗಳಿಂದ ವಿದ್ಯಾರ್ಥಿಗಳನ್ನು ಆಕರ್ಷಿಸತೊಡಗಿತು. ಅಲ್ಲಿಯ ಕೆಲವು ಮೊದ-ಮೊದಲಿನ ವಿದ್ಯಾರ್ಥಿಗಳು ಈಗ ನಮ್ಮ ದೇಶದಲ್ಲಿ ಮಹತ್ವದ ಸ್ಥಾನಗಳನ್ನು ಅಲಂಕರಿಸಿದ್ದಾರೆ, ಅಲ್ಲದೆ ಒಳ್ಳೇ ಸಂಶೋಧನೆಯನ್ನು ಮಾಡಿದ್ದಾರೆ. ಡಾ. ಪೂ. ಚಾ. ವೆಂಕಟೇಶ್ವರ್ಲು ಇವರಲ್ಲಿ ಒಬ್ಬರು, ಇವರು ಐ.ಐ.ಟಿ. ಕಾನಪುರದಲ್ಲಿ ಪ್ರಾಧ್ಯಾಪಕರಾಗಿದ್ದು ಇತ್ತೀಚೆಗೆ ನಿವೃತ್ತಿ ಹೊಂದಿದ್ದಾರೆ. ರೋಹಿತಶಾಸ್ತ್ರದಲ್ಲಿ, ವಿಶೇಷತಃ ಲೇಸರ್, ಸೂಕ್ಷ್ಮ ತರಂಗ ರೋಹಿತ ಶಾಸ್ತ್ರ (Micro wave Spectroscopy) ಮುಂತಾದ ವಿಭಾಗಗಳಲ್ಲಿ ವೆಂಕಟೇಶ್ವರ್ಲು ಅವರು ಉನ್ನತ ಮಟ್ಟದ ಸಂಶೋಧನೆ ಮಾಡಿದ್ದಾರೆ. ಈ ವಿಭಾಗಗಳಲ್ಲಿ ಜಗತ್ತಿನ ಇನ್ನಾವುದೇ ಶಾಸ್ತ್ರಜ್ಞರನ್ನು ಸರಿಗಟ್ಟುತ್ತಾರೆ ವೆಂಕಟೇಶ್ವರ್ಲು ಅವರು. ಅಸುಂಡಿಯವರ ಇನ್ನೊರ್ವ ಶಿಷ್ಯರಾದ ಡಾ. ಎನ್. ಎ. ನರಸಿಂಹನ್ ಅವರು BARCಯ ರೋಹಿತಶಾಸ್ತ್ರದ ಪ್ರಮುಖರು. ಅವರು ಕೂಡ ಉನ್ನತ ಮಟ್ಟದ ಸಂಶೋಧನೆ ಮಾಡಿದ್ದಾರೆ. ಹಲವಾರು ಪಿ ಎಚ್.ಡಿ. ವಿದ್ಯಾರ್ಥಿಗಳನ್ನು ತಯಾರಿಸಿದ್ದಾರೆ. ಕೆನಡಾ ದೇಶದ ಡಾ. ಹರ್ಝ್‌ಬರ್ಗ್ ಅವರ ಪ್ರಯೋಗಾಲಯದಲ್ಲಿ ಕೆಲಸ ಮಾಡಿದವರಾಗಿದ್ದಾರೆ. ಇದೇ ರೀತಿ, ಮುಂಬೈ ವಿಶ್ವವಿದ್ಯಾ ಡಾ. ಎಂ. ಆರ್. ಪಾಧ್ಯೆ ಅವರು ಖ್ಯಾತಿವೆತ್ತ ರೋಹಿತಜ್ಞರು, ಡಾ ಅಸುಂಡಿಯವರ ಶಿಷ್ಯಂದಿರು.

ಅಸುಂಡಿಯವರ ಸಂಶೋಧನಾ ಕಾರ್ಯತತ್ಪರತೆ, ಅಪಾರ ಪಾಂಡಿತ್ಯ, ನಿಷ್ಠೆ ಇವೆಲ್ಲ ಗುಣಗಳು ಅವರು ವಿದ್ಯಾರ್ಥಿಗಳಿಗೆ ಮೆಚ್ಚಿನ ಗುರುವಾಗುವಂತೆ ಮಾಡಿದ್ದವು. ಇವೆಲ್ಲವುಗಳಿಗಿಂತ ಹಿರಿದಾದ ಗುಣ ಅವರಲ್ಲಿತ್ತು. ಅದೆಂದರೆ, ವಿದ್ಯಾರ್ಥಿಗಳನ್ನು ಅವರು ತಂದೆಯಂತೆ, ಒಳ್ಳೇ ಪಾಲಕರಂತೆ ನೋಡಿಕೊಳ್ಳುತ್ತಿದ್ದರು. ಅವರು ಬನಾರಸಿನಲ್ಲಿದ್ದಾಗ, ಅವರ ಮನೆ ವಿದ್ಯಾರ್ಥಿಗಳಿಗೆಲ್ಲ ಒಂದು ತೆರೆದ ಗ್ರಂಥಾಲಯವಾಗಿತ್ತು. ಯಾವುದೇ ವೇಳೆಯಲ್ಲಿ, ಯಾವುದೇ ವಿದ್ಯಾರ್ಥಿ ಅವರ ಮನೆಯನ್ನು ಹೊಕ್ಕು ಅಸುಂಡಿಯವರ ವೈಯಕ್ತಿಕ ಗ್ರಂಥಾಲಯವನ್ನು ಉಪಯೋಗ ಮಾಡಿಕೊಳ್ಳಬಹುದಿತ್ತು.

ಬನಾರಸಿನಲ್ಲಿರುವ ವರೆಗೆ ಅಸುಂಡಿಯವರು ನಿತ್ಯ ಗಂಗಾ ಸ್ನಾನ ಗೈಯುತ್ತಿದ್ದರು. ಸಾಂಪ್ರದಾಯಿಕ ರೀತಿಯಲ್ಲಿ ಗಂಗಾಸ್ನಾನ ಅವರಿಗೆ ಪವಿತ್ರವಾಗಿದ್ದಿತೋ ಇಲ್ಲವೋ ಗೊತ್ತಿಲ್ಲ. ಆದರೆ ದಿನಾಲು ಬೆಳಿಗ್ಗೆ ಗಂಗಾ ಸ್ನಾನವೆಂದರೆ ಅವರಿಗೊಂದು ಶಿಸ್ತಿನ ವಿಷಯವಾಗಿತ್ತು. ಚಾಚೂ ತಪ್ಪದೆ ಮಾಡುತ್ತಿದ್ದರು.

ಬನಾರಸಿನಲ್ಲಿ ಅಸುಂಡಿಯವರು ಕೈಕೊಂಡು ಯಶಸ್ವಿಗೊಳಿಸಿದ ಸಂಶೋಧನಾ ಕಾರ್ಯಗಳಲ್ಲಿ ಪ್ರಮುಖವಾದಂಥವು ಈ ಕೆಲವು:

ಧೂಮಕೇತು(comet)ವಿನ ಬಾಲದಲ್ಲಿ ಕಂಡು ಬರುವ ಕೆಲವೊಂದು ಪಟ್ಟಿ ರೋಹಿತಗಳನ್ನು ಪ್ರಯೋಗಾಲಯದಲ್ಲಿ ಸಂಶೋಧಿಸಿದರು.

ಬಹು-ಪರಮಾಣು ಅಣುಗಳ ರೋಹಿತ ಪಟ್ಟಿಗಳು, ಸಾಮಾನ್ಯವಾಗಿ ಹೀರುವಿಕೆ-ಪಟ್ಟಿಗಳೇ (absorprtion bands)ಆಗಿರುತ್ತವೆ. ಆದರೆ, ಇವು ಉತ್ಸರ್ಜನೆಯಲ್ಲಿ ಕೂಡ ಕಂಡುಬರಬೇಕು ಅಸುಂಡಿಯವರು ಹೀಗೆ ಉತ್ಸರ್ಜನೆಯಲ್ಲಿ ರೋಹಿತಗಳು ಕಂಡುಬರುವಂತೆ ಅನೇಕ ಹೊಸ ಹೊಸ ವಿಧಾನಗಳನ್ನು ಯೋಜಿಸಿದರು.

ಬೆಂಝಾಲ್ಡಿಹೈಡ್ ಮುಂತಾದ ಅನೇಕ ಬಹು ಪರಮಾಣು ಅಣುಗಳ ಉತ್ಸರ್ಜನಾ ಪಟ್ಟಿಗಳನ್ನು ಮೂಡಿಸಿ ಅವುಗಳ ಅಧ್ಯಯನ ಮಾಡಿದರು.

ಅಸುಂಡಿಯವರು ತಮ್ಮ ಶಿಷ್ಯಂದಿರಾದ ಡಾ. ಪಾಧ್ಯೆಯವರೊಡನೆ ಕೆಲಸಮಾಡಿ ಬೆಂಝೀನ್ ರೋಹಿತವನ್ನು ಆಳವಾಗಿ ಅಭ್ಯಸಿಸಿದರು.

ಅವರ ಶಿಷ್ಯಂದಿರಾದ ವೆಂಕಟೇಶ್ವರ್ಲು ಅವರೊಡನೆ ಸಂಶೋಧನೆಯಲ್ಲಿ ತೊಡಗಿ ಅಯೋಡಿನ್ ($I_2$), ಬ್ರೋಮೀನ್ ($Br_2$), ಅಯೋಡೀನ್ ಕ್ಲೋರೈಡ್ (ICl) ಅಯೋಡಿನ್ ಬ್ರೊಮೈಡ್ (IBr) ಮುಂತಾದ ಅನೇಕ ಅಣುಗಳನ್ನು ಅವುಗಳ ಉತ್ಸರ್ಜನಾ ರೋಹಿತಗಳ ಮುಖಾಂತರ ಅನ್ವೇಷಿಸಿದರು.

ಜುಲೈ ೧೯೫೭ರಲ್ಲಿ ಅಸುಂಡಿಯವರು ಬನಾರಸ್ ಹಿಂದೂ ವಿಶ್ವವಿದ್ಯಾಲಯದಿಂದ ನಿವೃತ್ತಿ ಹೊಂದುವುದೊಂದೇ ತಡ, ದೇಶದ ನಾನಾ ಮೂಲೆಗಳಿಂದ 'ರತ್ನ'ಗಳನ್ನು ಕಲೆಹಾಕುವ ಸಾಹಸಿ ಹೋಮಿ ಭಾಭಾ ಅವರು ಅಸುಂಡಿಯವರಿಗೆ BARC ಯನ್ನು ಸೇರಲು ಕೇಳಿಕೊಂಡರು. ಆಗ ಕೆಲವೇ ವರ್ಷಗಳ ಪೂರ್ವದಲ್ಲಿ BARC ತನ್ನ ಕಾರ್ಯವನ್ನು ಪ್ರಾರಂಭಿಸಿದ್ದಿತು. ಅದು ಎಲ್ಲ ವಿಭಾಗಗಳಲ್ಲಿಯೂ ಅಭಿವೃದ್ಧಿ ಹೊಂದಬೇಕಾಗಿತ್ತು. ರೋಹಿತಶಾಸ್ತ್ರದ ಪ್ರಯೋಗಾಲಯಗಳ ಅಭಿವೃದ್ಧಿಗೆಂದು ಅಸುಂಡಿಯವರನ್ನು ಆಹ್ವಾನಿಸಿದರು ಭಾಭಾ ಅವರು. ಅವರ ಒತ್ತಾಯಕ್ಕೆ ಮಣಿದು ಅಸುಂಡಿಯವರು BARC ಯನ್ನು ಸೇರಿದರು.



"ನಾನೂ ಮೊದಲು ನಿರುದ್ಯೋಗಿಯಾಗಿದ್ದೆ ಸ್ವಾಮಿ... ಈಗ ನಿರುದ್ಯೋಗಿ ಸಂಘದ ಅಧ್ಯಕ್ಷನಾಗಿದ್ದೇನೆ... ಹ್ಹೆ ಹ್ಹೆ ..."

ನ್ಯೂಕ್ಲೀಯ ಶಕ್ತಿಯ ಆಗರಗಳಾದ ನ್ಯೂಕ್ಲೀಯ ರಿಯಾಕ್ಟರುಗಳಿಗೆ ಅತ್ಯಂತ ಪರಿಶುದ್ಧವಾದ ಯುರೇನಿಯಮ್ ಮತ್ತು ಥೋರಿಯಮ್‌ಗಳ ಅವಶ್ಯಕತೆ ಇರುತ್ತದೆ. ಅವುಗಳಲ್ಲಿ ಕಿಂಚಿತ್ತಾದರೂ ಅಶುದ್ಧತೆಗಳಿದ್ದರೆ ಅವು ರಿಯಾಕ್ಟರುಗಳ ಕೆಲಸವನ್ನೇ ಹಾಳುಮಾಡಬಲ್ಲವು. ಆದುದರಿಂದ, ಇಂಥ ಅಶುದ್ಧತೆಗಳನ್ನು ಗುರುತಿಸಿ ಅವುಗಳನ್ನು ಹೊರದೂಡುವ ಕಾರ್ಯ ಅತ್ಯಂತ ಮಹತ್ವದ್ದು. ಇಂಥ ಕೆಲಸವನ್ನು ಕೇವಲ ರೋಹಿತೀಯ ವಿಧಾನಗಳು ಅತಿ ನಿಖರತೆಯಿಂದ ಮಾಡಬಲ್ಲವು. ಅಶುದ್ಧತೆಗಳು ಎಷ್ಟೇ ಅಲ್ಪ ಪ್ರಮಾಣದಲ್ಲಿದ್ದರೂ ಅವುಗಳನ್ನು ಯೋಗ್ಯ ವಿಧಾನಗಳಿಂದ ಉದ್ರೇಕಿಸಿ ಅವುಗಳ ರೋಹಿತಗಳನ್ನು ಪಡೆದು, ಅಶುದ್ಧತೆಗಳ ಪ್ರಮಾಣವನ್ನು ಅತ್ಯಂತ ನಿಖರತೆಯಿಂದ ನಿರ್ಧರಿಸಬಹುದು. ಇಂಥ ಸೂಕ್ಷ್ಮ ಕಾರ್ಯ ನಡೆಯಬೇಕಾದ ಪ್ರಯೋಗಾಲಯಗಳನ್ನು ನಿರ್ಮಿಸುವುದು ತುಂಬ ಕಠಿಣ. ಅಸುಂಡಿಯವರು ಈ ಕಾರ್ಯವನ್ನು ಅತಿ ಯಶಸ್ವಿಯಾಗಿ ಪೂರ್ತಿಗೊಳಿಸಿದರು. ಇಂದು BARC ದೇಶದ ಒಂದು ಅಗ್ರಗಣ್ಯ ವಿಶ್ಲೇಷಣಾ ಕೇಂದ್ರವಾಗಿದ್ದರೆ, ಇದರ ಕೀರ್ತಿಯ ಸಿಂಹಪಾಲು ಅಸುಂಡಿಯವರಿಗೆ ಸಲ್ಲಬೇಕು. ಯಾವುದೇ ತರಹದ [illegible] ವಸ್ತುವಿನ ವಿಶ್ಲೇಷಣೆಯನ್ನು ಇಲ್ಲಿ ಮಾಡುವಂತಾಗಿದೆ. ಉದಾಹರಣೆಗೆ, ಇಲ್ಲಿ, ನ್ಯೂಟ್ರಾನ್ ಗಣಕಗಳಲ್ಲಿ ಬಳಕೆ ಮಾಡಲ್ಪಡುವ $BF_3$ ಯಲ್ಲಿಯ ಬೋರಾನ್ (B) ಎಷ್ಟಿದೆ

ಎಂಬುವನ್ನು ಕಂಡುಹಿಡಿಯುವ ಹೊಸ ವಿಧಾನಗಳನ್ನು ರೂಪಿಸಿದ್ದಾರೆ.

ಅಸುಂಡಿಯವರು ಸ್ವತಃ ಉತ್ತಮ ಮಟ್ಟದ ಸಂಶೋಧಕರಾಗಿದ್ದರಲ್ಲದೆ ಅವರು ನಮ್ಮ ದೇಶದ ರಾಷ್ಟ್ರೀಯ ಹಾಗೂ ವಿಶ್ವವಿದ್ಯಾಲಯಗಳ ಪ್ರಯೋಗಾಲಯಗಳು ಬೆಳೆಯುವಂತೆ ಅನೇಕ ತೆರನಾಗಿ ಸಹಾಯ ಮಾಡಿದರು. ರೋಹಿತಶಾಸ್ತ್ರಜ್ಞರ ಬಳಗ (Convension of Spectroscopists) ಎಂಬ ಸಂಸ್ಥೆಗೆ ೧೦ ವರ್ಷಗಳಿಗೂ ಮೇಲ್ಪಟ್ಟು ಚೇರ್ಮನ್ ಆಗಿದ್ದರು. ಈ ಸಂಸ್ಥೆಯ ಆಶ್ರಯದಲ್ಲಿ ಪ್ರತಿವರ್ಷವೂ ಚರ್ಚಾಕೂಟಗಳನ್ನು ಏರ್ಪಡಿಸಿ ದೇಶದಲ್ಲಿ ಎಲ್ಲೆಲ್ಲಿ, ಏನೇನು ರೋಹಿತೀಯ ಸಂಶೋಧನೆ ನಡೆದಿದೆ ಎಂಬುದರ ಅರಿವನ್ನು ಎಲ್ಲ ರೋಹಿತತಜ್ಞರಿಗೆ ಮಾಡಿಕೊಡುತ್ತಿದ್ದರು.

ಪರಮಾಣು ಶಕ್ತಿ ವಿಭಾಗದ ಭೌತಶಾಸ್ತ್ರ ಸಲಹಾ ಸಮಿತಿಯ ಪ್ರಥಮ ಚೇರಮನ್ನರಾಗಿ ೧೯೫೫ ರಿಂದ ೧೯೬೨ರ ವರೆಗೆ ಅಸುಂಡಿಯವರು ಭೌತಶಾಸ್ತ್ರದಲ್ಲಿಯ ಸಂಶೋಧನೆಯ, ವಿಶೇಷತಃ ಪರಮಾಣು ಮತ್ತು ನ್ಯೂಕ್ಲೀಯ ಭೌತಶಾಸ್ತ್ರಗಳ ಅಭಿವೃದ್ಧಿಗಾಗಿ ವಿಶೇಷ ಆಸ್ಥೆ ವಹಿಸಿ ದುಡಿದರು. ಪರಮಾಣು ಶಕ್ತಿ ವಿಭಾಗದ ಆಶ್ರಯದಲ್ಲಿ ಕಡಿಮೆ ಮಟ್ಟದ ಶಕ್ತಿಗೆ ಸಂಬಂಧಿಸಿದ ಭೌತಶಾಸ್ತ್ರದಲ್ಲಿ ಪ್ರತಿ ವರ್ಷ ಚರ್ಚಾಕೂಟಗಳನ್ನು ಏರ್ಪಡಿಸಿದರು. ಈಗ ಈ ವಿಭಾಗ ಸಾಕಷ್ಟು ಬೆಳೆದಿದ್ದು, ನ್ಯೂಕ್ಲೀಯ ಭೌತಶಾಸ್ತ್ರ ವಿಭಾಗ, ಘನವಸ್ತು ಭೌತಶಾಸ್ತ್ರ ವಿಭಾಗ ಎಂದು ಎರಡು ಭಾಗಗಳಾಗಿ ಪ್ರತಿ ವರ್ಷ ಸಮ್ಮೇಳನಗಳನ್ನು ನಡೆಸಲಾಗುತ್ತಿದೆ.

ಅಸುಂಡಿಯವರು ಭಾರತೀಯ ವಿಜ್ಞಾನ ಪರಿಷತ್ತಿ(Indian Science Congress)ನೊಡನೆ ನಿಕಟ ಸಂಬಂಧ ಹೊಂದಿದ್ದರು. ಈ ಸಂಸ್ಥೆಯ ೧೯೫೫ರ ಅಧಿವೇಶನದ ಭೌತಶಾಸ್ತ್ರ ವಿಭಾಗದ ಅಧ್ಯಕ್ಷರಾಗಿದ್ದರು.

೧೯೬೯ನೆಯ ಇಸ್ವಿಯಲ್ಲಿ ಅಸುಂಡಿಯವರು ಪ್ರಥಮ ಅಂತಾರಾಷ್ಟ್ರೀಯ ರೋಹಿತಶಾಸ್ತ್ರ ಸಮ್ಮೇಳನವನ್ನು ಯೋಜಿಸಿದರು. ಇದನ್ನು ಭಾರತದ ಪರಮಾಣು ಶಕ್ತಿ ಆಯೋಗದ ಆಶ್ರಯದಲ್ಲಿ ನಡೆಸಲಾಯಿತು. ಈ ಸಮ್ಮೇಳನಕ್ಕೆ ಹಲವಾರು ವಿದೇಶೀ ಶಾಸ್ತ್ರಜ್ಞರು ಆಗಮಿಸಿದ್ದರು. ಈ ಸಮ್ಮೇಳನ ನಡೆದಾಗ, ಅಸುಂಡಿಯವರ ಅಭಿಮಾನಿಗಳು ಅವರನ್ನು ಗೌರವಿಸುವದಕ್ಕೋಸ್ಕರ ಒಂದು ಇಡೀ ದಿನವನ್ನು ಮೀಸಲಿಡಲು ಕೇಳಿಕೊಂಡರು. ಅಂದು ಅವರ ಅನೇಕ ವಿದ್ಯಾರ್ಥಿಗಳೂ, ಸಹೋದ್ಯೋಗಿಗಳೂ (ವಿದೇಶೀಯರನ್ನೂ ಒಳಗೊಂಡಂತೆ) ಭಾಗವಹಿಸಿದ್ದರು. ಆ ಸಮಯಕ್ಕೆ ನೋಬೆಲ್ ಪಾರಿತೋಷಕ ವಿಜೇತ ಡಾ. ಹರ್ಜ್‌ಬರ್ಗರು ಅಸುಂಡಿಯವರ ಬಗೆಗೆ ಹೀಗೆ ಅಭಿಪ್ರಾಯಪಟ್ಟರು. "ಪ್ರೊಫೆಸರ್ ಅಸುಂಡಿಯವರನ್ನು ಸನ್ಮಾನಿಸುವ ಈ ಚರ್ಚಾಕೂಟದಲ್ಲಿ ಭಾಗವಹಿಸಲು ನನಗೆ ಹೆಮ್ಮೆ ಎನಿಸುತ್ತದೆ. ಕಳೆದ ೪೦ ವರ್ಷಗಳಿಂದಲೂ ನಾನೂ ಅಸುಂಡಿಯವರೂ ಮಿತ್ರರು. ನಾನು ಅವರ ವೈಜ್ಞಾನಿಕ ಸಂಶೋಧನೆಗಳನ್ನು ಗಮನಿಸುತ್ತಿರುವೆನಲ್ಲದೆ ಮೆಚ್ಚಿಕೊಂಡಿದ್ದೇನೆ. ಅವರ ವೈಜ್ಞಾನಿಕ ಕೊಡುಗೆ ಅಪಾರವಾದುದು. ರೋಹಿತಶಾಸ್ತ್ರಕ್ಕೆ, ವಿಶೇಷವಾಗಿ ಹಿಂದುಸ್ತಾನದಲ್ಲಿ ಅದರ ಬೆಳವಣಿಗೆಗಾಗಿ ಅವರು ಬಹಳಷ್ಟು ಸಹಾಯ ಸಲ್ಲಿಸಿದ್ದಾರೆ. ಅವರು BARCಯಲ್ಲಿ ಹೊಸದೊಂದು ಪ್ರಯೋಗಾಲಯವನ್ನು ಅಭಿವೃದ್ಧಿಗೊಳಿಸುತ್ತಿದ್ದಾರೆ. ಇದು ಆಗಲೇ ಸಾಕಷ್ಟು ಪ್ರಗತಿ ಸಾಧಿಸಿದೆ. ಇದು ನಮಗೆಲ್ಲ ಹೆಮ್ಮೆಯ ವಿಷಯ. ನನ್ನ ಸಹೋದ್ಯೋಗಿಗಳೊಡನೆ ನಾನು ಕೂಡ ಅಸುಂಡಿಯವರಿಗೆ ಶುಭಾಶಯಗಳನ್ನು ಕೋರಿ, ಅವರ ಮುಂಬರುವ ಕಾರ್ಯಗಳಲ್ಲಿ ಯಶಸ್ಸು ದೊರೆಯಲೆಂದು ಹಾರೈಸುತ್ತೇನೆ."

೧೯೬೯ರ ಈ ಸಮ್ಮೇಳನದ ಬಗೆಗೇನೇ ಶ್ರೀಮತಿ ಶಾರ್ಲೊಟ್ ಮೂರ್ ಎಂಬುವರು Applied Optics ಎಂಬ ವೈಜ್ಞಾನಿಕ ಪತ್ರಿಕೆಯಲ್ಲಿ ಹೀಗೆ ಬರೆಯುತ್ತಾರೆ: "ಅಸುಂಡಿಯವರ ಅದ್ಭುತ ನೇತೃತ್ವದಲ್ಲಿ ಈ ಸಮ್ಮೇಳನದ ಕಾರ್ಯಕಲಾಪಗಳು ಸುವ್ಯವಸ್ಥಿತವಾಗಿ ಯೋಜಿತವಾ

ಗಿದ್ದುವು. ಈ ಸಮ್ಮೇಳನವು ನಮ್ಮೆಲ್ಲರ ನೆನಪಿನಲ್ಲಿ ಅಚ್ಚಳಿಯದೆ ಉಳಿಯುವಂತಹದಾಗಿದೆ."

ಅಸುಂಡಿಯವರು ತಮ್ಮ ಪಿಹೆಚ್. ಡಿ. ಗಾಗಿ ಇಂಗ್ಲೆಂಡಿಗೆ ಹೋಗಿದ್ದರು. ಅನಂತರ ಅವರು ಅನೇಕ ಸಲ ವಿದೇಶಗಳಿಗೆ ಪ್ರಯಾಣ ಮಾಡಿದ್ದಾರೆ. ೧೯೫೬ರಲ್ಲಿ ಕ್ಯಾನಡಾ ದೇಶದ ನ್ಯಾಶನಲ್ ರಿಸರ್ಚ್ ಕೌನ್ಸಿಲ್ ಸಂಸ್ಥೆಗೆ ಮತ್ತು ಅಮೇರಿಕದ ಮ್ಯಾಸಾಚುಸೆಟ್ಸ್ ಇನ್‌ಸ್ಟಿಟ್ಯೂಟ್ ಅಫ್ ಟೆಕ್ನಾಲಜಿ, ಕೇಂಬ್ರಿಜ್, ಈ ಸಂಸ್ಥೆಗೆ ಸಂದರ್ಶಕ ಶಾಸ್ತ್ರಜ್ಞರೆಂದು ಭೇಟಿ ಇತ್ತರು. ಆಗ ಹಾರ್ವರ್ಡ್ ಮತ್ತು [illegible] ವಿಶ್ವವಿದ್ಯಾಲಯಗಳಿಗೂ ಭೇಟಿ ನೀಡಿದರು.

ಮುಂದೆ ೧೯೬೫ರಲ್ಲಿ ಅಮೇರಿಕಾ ದೇಶದ ಸ್ಯಾನಿಬೆಲ್ ಐಲೆಂಡ್, ಫ್ಲೋರಿಡಾ, ಎಂಬಲ್ಲಿ ನಡೆದ ಪರಮಾಣು ಮತ್ತು ಅಣು ಕ್ವಾಂಟಮ್ ವಾದದ ಬಗೆಗಿನ ಚರ್ಚಾಕೂಟಕ್ಕೆ ವಿಶಿಷ್ಟ ಆಮಂತ್ರಿತರೆಂದು ಹೋಗಿದ್ದರು. ಈ ಚರ್ಚಾ ಕೂಟವನ್ನು ನೋಬೆಲ್ ಪಾರಿತೋಷಕ ವಿಜೇತ ಅಣು–ವಿಜ್ಞಾನಿ ಮುಲ್ಲಿಕೆನ್ ಅವರ ಗೌರವಾರ್ಥ ಯೋಜಿಸಲಾಗಿತ್ತು. ಅದೇ ಸಮಯಕ್ಕೆ ಅಸುಂಡಿ ಯವರು ಆಕ್ಸ್‌ಫರ್ಡ್, ಲಂಡನ್, ಮತ್ತು ಪ್ಯಾರಿಸ್ ಶಹರಗಳ ಪ್ರಯೋಗಾಲಯಗಳಿಗೆ ಭೇಟಿ ನೀಡಿದರು.

ಇದೇ ರೀತಿ ಪುನಃ ೧೯೬೮ರಲ್ಲಿ ಅಮೇರಿಕದ ನ್ಯಾಶನಲ್ ಬ್ಯೂರೋ ಅಫ್ ಸ್ಟ್ಯಾಂಡರ್ಡ್ಸ್‌ನ ಶ್ರೀಮತಿ ಶಾರ್ಲೋಟ್ ಮೂರ್ ಅವರನ್ನು ಅಭಿನಂದಿಸಲು ಯೋಜಿಸಲಾದ ವಾಶಿಂಗ್ಟನ್ನಿನ ಸಮ್ಮೇಳನಕ್ಕೆ ಡಾ. ಅಸುಂಡಿಯವರು ವಿಶಿಷ್ಟ ಆಮಂತ್ರಿತರೆಂದು ಹೋಗಿದ್ದರು. ಅಲ್ಲಿಂದ ನ್ಯೂಯಾರ್ಕ್, ಬೆಲ್ ಪ್ರಯೋಗಾಲಯಗಳು, ಸ್ಯಾಂಟಾ ಬಾರ್ಬರಾ, ಸ್ಟ್ಯಾನ್‌ಫೋರ್ಡ್ ಮುಂತಾದ ಅನೇಕ ಪ್ರಸಿದ್ಧ ಸ್ಥಳಗಳಿಗೆ ಭೇಟಿ ನೀಡಿ ಅಲ್ಲಿ ನಡೆದ ಸಂಶೋಧನಾ ಕಾರ್ಯವನ್ನು ಅಭ್ಯಸಿಸಿದರು.

ಅಸುಂಡಿಯವರು ಎಲ್ಲಿಯೇ ಇರಲಿ, ಯಾರೊಡನೆಯೇ ಇರಲಿ, ಅಥವಾ ಯಾವುದಾದರೂ ವೈಜ್ಞಾನಿಕ ಚರ್ಚೆಯಲ್ಲಿಯೇ ಭಾಗವಹಿಸುತ್ತಿರಲಿ, ಒಳ್ಳೇ ಆತ್ಮವಿಶ್ವಾಸದಿಂದ ಮಾತನಾಡುತ್ತಿದ್ದರು. ಭಾರತೀಯರಿಗೆ ಸಾಮಾನ್ಯವಾಗಿ, ಪರದೇಶಿಯ ವಿಜ್ಞಾನಿಗಳೆಂದರೆ ಒಂದು ತರಹದ ಭಯ, ಅವರ ಬಗೆಗೆ ಮಿತಿಮೀರಿದ ಮೆಚ್ಚುಗೆ; ನಮ್ಮ ವೈಜ್ಞಾನಿಕ ಸಾಧನೆಗಳು ಅವರ ಸಾಧನೆಗಳಿಗಿಂತ ಕಡಿಮೆ ಮಟ್ಟದವು ಎಂದು ಮುಂತಾದ ಭಾವನೆಗಳು ಇರುತ್ತವೆ. ಆದರೆ ಅಸುಂಡಿಯರ ವಿಷಯ ಹೀಗೆ ಹೇಳುವುದು ಸರಿಯಾಗಲಾರದು. ಏಕೆಂದರೆ, ಅವರು ವಿದೇಶೀ ಶಾಸ್ತ್ರಜ್ಞರೊಡನೆ ಸರಿಸಮಾನ ಮಟ್ಟದಲ್ಲಿ ಒಳ್ಳೇ ಆತ್ಮವಿಶ್ವಾಸದಿಂದ ಮಾತನಾಡುತ್ತಿದರು. ಈ ಆತ್ಮವಿಶ್ವಾಸ ಅವರಿಗೆ ತಮ್ಮ ಸ್ವಂತ ಸಂಶೋಧನಾ ಕಾರ್ಯಗಳಿಂದ ಬಂದುದಾಗಿತ್ತು. ಅಸುಂಡಿಯವರು ಎಂದೂ ಸಣ್ಣ ಪುಟ್ಟ ಲಾಭಗಳಿಗೆ ಕೈಹಾಕಿದ್ದವರಲ್ಲ. ಗೌರವ, ಪುರಸ್ಕಾರಕ್ಕಾಗಿ ಹಾತೊರೆಯುತ್ತಿರಲಿಲ್ಲ; ಅಲ್ಲದೇ ಅವ




"ನಮಗೆ ಓಟು ಬರದಿದ್ದರೇನಯ್ಯಾ? ಹಿಂದುಳಿದವರಾದ್ದರಿಂದ ನಾವೇ ಗೆಲ್ಲುವೆ."

ಅವರನ್ನು ಬೆನ್ನಟ್ಟಿ ಬಂದಂತಹವಾಗಿದ್ದವು.

ಹಿಂದುಸ್ತಾನದಲ್ಲಿ ಅಸುಂಡಿಯವರು ಅಪ್ರತ್ಯಕ್ಷವಾಗಿ ನೂರಾರು ವಿದ್ಯಾರ್ಥಿಗಳಿಗೆ ಸಂಶೋಧನೆಯಲ್ಲಿ ಮಾರ್ಗದರ್ಶಿಗಳಾಗಿದ್ದರು. ಅವರು ಯಾವುದೇ ವಿಶ್ವವಿದ್ಯಾಲಯಕ್ಕೆ ಹೋದರೂ ಸಂಶೋಧಕರು ಅವರನ್ನು ಮುತ್ತುತ್ತಿದ್ದರು, ಮತ್ತು ಅವರಿಂದ ಸಲಹೆ-ಸೂಚನೆಗಳನ್ನು ಪಡೆಯುತ್ತಿದ್ದರು. ಪಿಎಚ್.ಡಿ. ಪದವಿಗಳ ಪರೀಕ್ಷಕರಾಗಿ ಕಾರ್ಯ ನಿರ್ವಹಿಸಿದ್ದು ಅಸಂಖ್ಯಾತ ಬಾರಿ. ಪಿಎಚ್.ಡಿ. ಪ್ರದಾನ ಮಾಡುವ ಮುನ್ನ, ಈ ಮೊದಲು ಹೇಳಿದಂತೆ, ಮೌಖಿಕ ಪರೀಕ್ಷೆಯ ಕಾಲಕ್ಕೆ ಕೂಡ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುತ್ತಿದ್ದರು.

ಅಸುಂಡಿಯವರು ಹಿಂದುಸ್ತಾನದ ವಿವಿಧ ವಿಶ್ವವಿದ್ಯಾಲಯಗಳಲ್ಲಿ ವಿವಿಧ ವಿಷಯಗಳ ಮೇಲೆ ವಿದ್ವತ್ಪೂರಿತ ಭಾಷಣ ಮಾಡಿದ್ದುಂಟು. ೧೯೬೪ರಲ್ಲಿ ರೋಹಿತಶಾಸ್ತ್ರ ಮತ್ತು ಕ್ವಾಂಟಮ್ ಮೆಕ್ಯಾನಿಕ್ಸ್ ಎಂಬ ವಿಷಯದ ಮೇಲೆ ಇಂಡಿಯನ್ ಫಿಸಿಕಲ್ ಸೊಸೈಟಿಯ ಸಾಹಾ ಮೆಮೋರಿಯಲ್ ಲೆಕ್ಚರ್ ಆಶ್ರಯದಲ್ಲಿ ಭಾಷಣ ಮಾಡಿದರು. ಪುನಃ ೧೯೭೮ರಲ್ಲಿ ನ್ಯಾಶನಲ್ ಇನ್ಸ್ಟಿಟ್ಯೂಟ್ ಆಫ್ ಸಾಯನ್ಸಿಸ್ ಇಂಡಿಯಾ ಇವರ ಆಶ್ರಯದಲ್ಲಿ ಕೆ. ಎಸ್. ಕೃಷ್ಣನ್ ಮೆಮೋರಿಯಲ್ ಲೆಕ್ಚರ್ ಎಂದು ಸಮಸ್ಥಾನಿಗಳು ಮತ್ತು ರೋಹಿತಶಾಸ್ತ್ರ (Isotopes and Spectroscopy) ಎಂಬ ವಿಷಯವನ್ನು ಕುರಿತು ಮಾತನಾಡಿದರು. ಅಸುಂಡಿಯವರ ಯಾವುದೇ ಭಾಷಣ, ವಿಷಯದ ಬಗೆಗಿನ ಅವರ ಆಳ ಅಭ್ಯಾಸ, ಪಾಂಡಿತ್ಯ, ಎಲ್ಲಕ್ಕೂ ಹೆಚ್ಚಾಗಿ, ವಿಷಯದ ಬಗೆಗೆ ಅವರಿಗಿದ್ದ ಪ್ರೇಮ ಇವುಗಳನ್ನು ಪ್ರತಿಬಿಂಬಿಸುತ್ತಿತ್ತು. ಯಾವುದೇ ವಿಷಯದ ಮೇಲೆ ಬಹಳ ಉತ್ಸಾಹದಿಂದ ಮಾತನಾಡುತ್ತಿದ್ದರು. ಅವರ ಉತ್ಸಾಹ, ಚಿಕ್ಕ ವಯಸ್ಸಿನ ವಿಜ್ಞಾನಿಗಳಿಗೆ ಕೂಡ ಇರಲಾರದು.

ಅಸುಂಡಿಯವರ ಸಂಶೋಧನೆಗಳನ್ನು (ಅವರ ಸಂಶೋಧನಾ ಪ್ರಬಂಧಗಳು ೧೦೦ಕ್ಕೂ ಮಿಕ್ಕಿವೆ) ಮೆಚ್ಚಿ ಅನೇಕ ಸಂಘ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ಅವರಿಗೆ ಗೌರವ ಪದವಿಗಳನ್ನು, ಬಿರುದುಗಳನ್ನು ದಯಪಾಲಿಸಿದರು. ಇವುಗಳನ್ನೆಲ್ಲ ವಿವರಿಸಿದರೆ ಅತಿ ದೊಡ್ಡ ಪಟ್ಟಿಯೇ ಆದೀತು. ಆದುದರಿಂದ ಈ ಕೆಳಗೆ ಅವುಗಳ ಪ್ರತಿಕೆಲವನ್ನು ಮಾತ್ರ ಕೊಡಲಾಗಿದೆ.

ಫೆಲೊ, ಇಂಡಿಯನ್ ಎಕ್ಯಾಡೆಮಿ ಆಫ್ ಸಾಯನ್ಸಸ್,

ಫೆಲೊ, ಫಿಸಿಕಲ್ ಸೊಸೈಟಿ.

ಫೆಲೊ, ಇಂಡಿಯನ್ ನ್ಯಾಶನಲ್ ಸಾಯನ್ಸ್ ಎಕ್ಯಾಡೆಮಿ.

ಸದಸ್ಯ, ಅಮೇರಿಕನ್ ಫಿಸಿಕಲ್ ಸೊಸೈಟಿ.

ಸದಸ್ಯ, ಆಪ್ಟಿಕಲ್ ಸೊಸೈಟಿ ಆಫ್ ಅಮೇರಿಕಾ, ಅಧ್ಯಕ್ಷ, ಇಂಡಿಯನ್ ಫಿಸಿಕಲ್ ಸೊಸೈಟಿ.

ಅಸುಂಡಿಯವರ ಜೀವನ ಎಲ್ಲರಿಗೂ– ವಿಶೇಷತಃ ಅಧ್ಯಾಪಕ ವರ್ಗದವರಿಗೆ ಆದರ್ಶಪ್ರಾಯವಾದುದು. ಅವರ ವಿಷಯನಿಷ್ಠೆ, ಸತತ ಪರಿಶ್ರಮ, ಮಾನವೀಯತೆ, ವಿದ್ಯಾರ್ಥಿಗಳ ಮೇಲಿನ ಮಮತೆ ಇವೆಲ್ಲ ಅವರನ್ನು ಆದರ್ಶ ಸಂಶೋಧನಕಾರರನ್ನಾಗಿ, ನಿಜವಾದ ಗುರುಗಳನ್ನಾಗಿ ಮಾಡಿದ್ದವು. ಚಿಕ್ಕ ಪ್ರಾಯದಲ್ಲಿಯೇ ಪತ್ನಿಯನ್ನು ಕಳೆದುಕೊಂಡರೂ, (ಅವರು ಸುಮಾರು ೩೫–೩೬ ವರ್ಷದವರಿರುವಾಗ) ಮಗ ಇನ್ನೂ ಕೇವಲ ೧೧ ವರ್ಷದ ಮಗುವಿದ್ದರೂ ಪುನಃ ಮದುವೆಯಾಗದೆ ತಮ್ಮ ಇಡೀ ಜೀವನವನ್ನೇ ಭೌತಶಾಸ್ತ್ರದ ಅಧ್ಯಯನಕ್ಕಾಗಿ ಸೇವೆಗಾಗಿ ಮೀಸಲಿಟ್ಟ ಮಹಾನುಭಾವರು ಅಸುಂಡಿಯವರು. ಅವರ ಜೀವನ ವಿಜ್ಞಾನಿಗಳಾಗಬೇಕೆಂದು ಹಂಬಲವಿಟ್ಟುಕೊಂಡವರಿಗೆಲ್ಲ ಒಂದು ಸ್ಫೂರ್ತಿಯ ಸೆಲೆ. ★



ಒಂದು ವೇಳೆ ಭಗೀರಥ ಈ ಯುಗದಲ್ಲಿ ಹುಟ್ಟಿದ್ದರೆ ಖುರ್ಚಿಗಳ ಮೇಲಿನ ಪಾಪವನ್ನು ಖಂಡಿತವಾಗಿಯೂ ತೊಳೆಯುತ್ತಿದ್ದ. —ನಂದಕಿಶೋರ ನಂದನ

# ಭೂಒಡೆತನಕ್ಕೆ ಗೇಣಿದಾರರು ಕೊಡಬೇಕಾದ ಹಣಕ್ಕೆ ಸರ್ಕಾರದ ನೆರವು ವಿವರಗಳಿಗೆ ಭೂ ಅಭಿವೃದ್ಧಿ ಬ್ಯಾಂಕಿನಲ್ಲಿ ವಿಚಾರಿಸಿ

ಭೂ ಸುಧಾರಣಾ ಕಾಯಿದೆಯನ್ನು ತ್ವರಿತ ಗತಿಯಲ್ಲಿ ಜಾರಿಗೆ ತಂದಿರುವ ರಾಜ್ಯಗಳಲ್ಲೇ ಮುಂಚೂಣಿಯಲ್ಲಿದೆ ಕರ್ನಾಟಕ. ಭೂ ನ್ಯಾಯಮಂಡಳಿಗಳ ಮೂಲಕ ಫೆಬ್ರವರಿ, ೧೯೮೨ ರ ವರೆಗೆ ೮,೦೯,೦೭೪ ಅರ್ಜಿಗಳನ್ನು ಇತ್ಯರ್ಥ ಗೊಳಿಸಲಾಗಿದೆ. ಭೂ ಮಾಲೀಕರಿಂದ ವಶಪಡಿಸಿಕೊಳ್ಳಲಾದ ೨,೬೯,೨೩೨ ಎಕರೆ ಜಮೀನಿನಲ್ಲಿ ೩.೨,೧೭೩ ಎಕರೆ ಜಮೀನನ್ನು ಪರಿಶಿಷ್ಟ ಜಾತಿ ಮತ್ತು ಪಂಗಡದ ಭೂ ರಹಿತರಿಗೆ ಹಾಗೂ ೨೬,೦೭೫ ಎಕರೆ ಜಮೀನನ್ನು ಇತರ ಹಿಂದುಳಿದ ವರ್ಗದವರಿಗೆ ಹಂಚಲಾಗಿದೆ.

- ಭೂ ಒಡೆತನದ ಹಕ್ಕು ಪಡೆದ ಗೇಣಿದಾರರು ಭೂಮಿಗಾಗಿ ನೀಡಬೇಕಾದ ಹಣವನ್ನು ಸರ್ಕಾರಕ್ಕೆ ಪಾವತಿ ಮಾಡಬೇಕು.
- ಈ ಹಣವು ಎರಡು ಸಾವಿರ ರೂ. ಗಳಿಗಿಂತ ಹೆಚ್ಚಾಗಿದ್ದರೆ ಮೊದಲ ಕಂತಿನಲ್ಲಿ ಎರಡು ಸಾವಿರ ರೂ. ಗಳನ್ನೂ ಉಳಿದ ಹಣವನ್ನು 20 ವಾರ್ಷಿಕ ಕಂತುಗಳಲ್ಲಿ ಶೇಕಡಾ ೫॥ ಬಡ್ಡಿಯೊಂದಿಗೆ ಪಾವತಿ ಮಾಡಬೇಕು.
- ರೈತರು ಈ ಹಣ ಪಾವತಿ ಮಾಡುವಲ್ಲಿ ನೆರವಾಗಲು ಯೋಜನೆಯೊಂದನ್ನು ರೂಪಿಸಿದೆ.
- ಈ ಯೋಜನೆಯಂತೆ ಸಂಬಂಧಿಸಿದ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು ಹಣ ಪಾವತಿಗಾಗಿ ಸಾಲ ನೀಡುತ್ತವೆ.
- ಸಾಲದ ನೆರವು ಪಡೆಯಬಯಸುವ ರೈತನು ಭೂನ್ಯಾಯ ಮಂಡಳಿಯು ನೀಡಿದ ಜಮೀನು ಮಂಜೂರಾತಿ ಆದೇಶವನ್ನು ಅರ್ಜಿ ಜೊತೆ ಬ್ಯಾಂಕಿಗೆ ಒಪ್ಪಿಸಿ ಕೊಡಬೇಕು.
- ಪಡೆಯುವ ಸಾಲಕ್ಕೆ ತನ್ನ ಜಮೀನನ್ನೇ ಆಧಾರ ಮಾಡಿ ಕೊಡಬೇಕು. ಇದೇ ಆಧಾರದ ಮೇಲೆ ರೈತನು ಭೂ ಅಭಿವೃದ್ಧಿಗಾಗಿ ಹೆಚ್ಚಿನ ಸಾಲವನ್ನು ಅದೇ ಬ್ಯಾಂಕಿನಿಂದಲೇ ಪಡೆಯಬಹುದು.
- ಈ ಸಂಬಂಧದಲ್ಲಿ ಹೆಚ್ಚಿನ ವಿವರಗಳಿಗೆ ಆಯಾ ತಾಲೂಕಿನ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳಲ್ಲಿ ವಿಚಾರಿಸಬೇಕು.

ಪ್ರಕಟಣೆ: "ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ"
DIP 176/82-83

# ಗುಪ್ತಗಾಮಿನಿ ಶಾಲ್ಮಲೆ

ಎಸ್. ಕೆ. ಜೋಶಿ

ಋಗ್ವೇದವು ಉದ್ಘೋಷಿಸಿದಂತೆ 'ಸಲಿಲಂ ವಿಶ್ವಮಿದಂ ಜೀವನಮ್,' ನೀರು ಜೀವನದ ಅಭಿಜಾತ ಹಾಗೂ ಅವಿಭಾಜ್ಯ ಅಧಾರ. ನಾವು ಕಾಣುವ ಈ ಜಗತ್ತು, ಈ ಚರಾಚರಗಳು ಪ್ರಾಯಶಃ ಅಸ್ತಿತ್ವದಲ್ಲಿಯೇ ಇರುತ್ತಿರಲಿಲ್ಲವೆಂದು ನಿಸ್ಸಂಕೋಚವಾಗಿ ಹೇಳಬಹುದು. ನೀರು ಜೀವನದ ಮೂಲಾಧಾರವಾಗಿರುವುದರಿಂದ ಅದರ ಉಗಮ ಗಮನ ಹಾಗೂ ಸಮಾಗಮಗಳ ಬಗ್ಗೆ ಮಾನವನ ಬೌದ್ಧಿಕ ಸಂವೇದನೆಯು ಅವಿಶ್ರಾಂತವಾಗಿ, ಭೂವಿಜ್ಞಾನದ ಜಿಜ್ಞಾಸೆಯಲ್ಲಿ ಯುಗ – ಯುಗಾಂತರಗಳಿಂದ ಶೋಧಿಸುತ್ತಲೇ ಬಂದಿದೆ.

ಮಾನವನ ಅನಾಗರಿಕ ಜೀವನದಿಂದ ಸಾಂಸ್ಕೃತಿಕ ಜೀವನದ ಪ್ರೌಢಿಮೆಯು ಪರಿವರ್ತನೆವರೆಗಾದ ಅವಾಂತರದಲ್ಲಿ ಅತನು ನೀರಿನ ಸಂಗಾರಗಳನ್ನು, ಜುಳು ಜುಳು ಹರಿಯುವ ಮಂದ ಸಲಿಲ ಸರಗಳನ್ನು ನೀಳ್ದೆಳೆಗಾಗಿ ಪ್ರವಹಿಸುವ ಪ್ರಶಾಂತ ನದೀ ತೀರಗಳನ್ನು ತನ್ನ ವಸತಿಗಾಗಿ ಆಯ್ದುಕೊಂಡ, ಹಾಗೂ ಅವುಗಳ ದಡದಲ್ಲಿ ಜೀವನಾವಶ್ಯಕತೆಗಳನ್ನು ಪೂರೈಸುವ ನಿಸರ್ಗದ ಕೊಡುಗೆಯ ಲಾಭವನ್ನೂ ಪಡೆದ. ಅದಾಗಿ ನದೀ ತೀರಗಳು ಸಾಂಸ್ಕೃತಿಕ ತೊಟ್ಟಿಲುಗಳಾದವು. ಇದು ಮಾನವನ ಐತಿಹಾಸಿಕ ಜೀವನೋತ್ಕ್ರಾಂತಿಯ ಸ್ಥೂಲ ಹಿನ್ನೆಲೆ. ಈ ಹಿನ್ನೆಲೆಯಲ್ಲಿ ಆಯಾ ಸಲಿಲಧಾರೆಗಳು ಉಗಮಿಸಿ ಸಮಾಗಮಿಸುವ ಸಾಗರದ ತೋಳ್ತೆಕ್ಕೆಯಲ್ಲಿ ಲೀನವಾಗುವ ಐತಿಹ್ಯವನ್ನೂ ಅಲ್ಲಲ್ಲಿ ಭೂಪೃಷ್ಠದ ಮೇಲೆ ನಿಂತ ಉತ್ತುಂಗ ಪರ್ವತ ಶ್ರೇಣಿಗಳ ಅಭ್ಯಾಸವನ್ನೂ ಮಾಡಿದ. ಭಾರತದ ಮಟ್ಟಿಗೆ, ಹೇಳಬೇಕಾದರೆ ಈ ಪ್ರಯತ್ನವು ವೇದಕಾಲದಿಂದಲೂ ನಡೆದು ಬಂದಿದೆ. ನದಿಗಳ ಬಗ್ಗೆ ಋಗ್ವೇದ, ಸಂಹಿತೆಗಳು, ಅರಣ್ಯಕೋಪನಿಷತ್, ಬ್ರಹ್ಮಸೂತ್ರ, ಯಾಸ್ಕನ ನಿರುಕ್ತಿ, ರಾಮಾಯಣ ಹಾಗೂ ಮಹಾಭಾರತಗಳಲ್ಲಿ ಬೇಕಾದಷ್ಟು ಉಲ್ಲೇಖಗಳು ಸಿಗುತ್ತವೆ.

## ನದಿಗಳ ಬಗ್ಗೆ

ಗಂಗಾ ಸಿಂಧೂ ಸರಸ್ವತೀ ಚ
ಯಮುನಾ ಗೋದಾವರೀ ನರ್ಮದಾ
ಕೃಷ್ಣಾ ಭೀಮರಥೀ ಚ ಫಲ್ಗು
ಸರಯೂ ಶ್ರೀಗಂಡಕೀ ಗೋಮತಿ,
ಕಾವೇರಿ ಕಪಿಲಾ ಪ್ರಯಾಗವನಿತಾ
ನೇತ್ರಾವತೀತ್ಯಾದಯೋ ನದ್ಯಃ
ಶ್ರೀಪಾದ ಪಂಕಜಭೂಷಾಃ ಕುರ್ವಂತು
ನೋ ಮಂಗಲಮ್

## ಹಾಗೂ ಪರ್ವತಗಳ ಬಗ್ಗೆ!

ಶ್ರೀಮೇರುರ್ಹಿಮವಾಂಶ್ಚ ಮಂದರಗಿರಿಃ
ಕೈಲಾಸ ಶೈಲಸ್ತಥಾ
ಮಾಹೇಂದ್ರೋ ಮಲಯಶ್ಚ ವಿಂಧ್ಯ
ನಿಷಧೇ
ಸಿಂಹಸ್ತಥಾ ರೈವತಃ
ಸಹ್ಯಾದ್ರಿರ್ವರಗಂಧಮಾದನಗಿರಿ
ರ್ಮೈನಾಕ ಗೋಮಂತಕಃ

ಮೇ 'ಕಸ್ತೂರಿ'ಯಲ್ಲಿ ಬಂದ "ಸರಸ್ವತಿ ಗುಪ್ತಗಾಮಿನಿ" ತುಂಬ ರೋಚಕ ಲೇಖನ. ಆದರೆ ಜೂನ್ ಸಂಚಿಕೆಯಲ್ಲಿ ಅದನ್ನು ಮೆಚ್ಚಿಕೊಂಡು ಬರೆದಿರುವ ಓದುಗ ಶ್ರೀ ಎಸ್. ಕೆ. ಜೋಶಿಯವರ ಪತ್ರದಲ್ಲಿ ಉಲ್ಲೇಖವಾದ ಶ್ಲೋಕವು ಋಗ್ವೇದ ಸಂಹಿತೆಯಲ್ಲಿದೆಯೆಂದು ಹೇಳಲಾಗಿದೆ. ನಿಜಕ್ಕೂ "ಗಂಗಾ-ಸಿಂಧು-ಸರಸ್ವತಿ.. ಕೃಷ್ಣಾ ಭೀಮರಥಿ– (ದಕ್ಷಿಣ ಭಾರತದ ನದಿಗಳು) ಕುರ್ವಂತುನೋ ಮಂಗಲಂ" ಎಂಬ ಶ್ಲೋಕವು ಋಗ್ವೇದದಲ್ಲಿರಲಾರದು. ಏಕೆಂದರೆ ಋಗ್ವೇದವು ರಚನೆಯಾದದ್ದು ಸಿಂಧು ಸರಸ್ವತಿ ಶತದ್ರು ಗಂಗಾ ಮೊದಲಾದವುಗಳ ತೀರದಲ್ಲಿ ಋಗ್ವೇದದ ಋಷಿ ಕವಿ ಆಗಿನ್ನೂ ದಕ್ಷಿಣ ಭಾರತಕ್ಕೆ ಬಂದಿರಲಿಲ್ಲ. ಅಲ್ಲದೆ ಮೇಲೆ ಹೇಳಿದ ಈ ಶ್ಲೋಕವು ಉಡುಪಿಯ ಅಷ್ಟಮಠೀಯ ಸಂಪ್ರದಾಯದ ಶ್ರೀ ರಾಜರಾಜೇಶ್ವರರೆಂಬ ಯತಿಗಳು ರಚಿಸಿದ್ದಾರೆ. ಹಾಗೆಂದು ಮಂಗಲಾಷ್ಟಕದ ಕೊನೆಯಲ್ಲಿ ಹೇಳಿದೆ. ಮಾಧ್ವರಲ್ಲಿ ನಡೆದ ಉಪನಯನ ವಿವಾಹಾದಿಗಳಲ್ಲಿ ಅಲ್ಲದೆ ಪ್ರತಿದಿನವೂ ಇದನ್ನು ಪಠಿಸುವ ರೂಢಿಯಿದೆ. ಹೀಗಿರುವಾಗ ಭಾರತೀಯ ಪುರಾತತ್ತ್ವ ವಿಭಾಗದ ಶ್ರೀ ಎಸ್. ಕೆ. ಜೋಶಿಯವರು ಇದನ್ನು ಋಗ್ವೇದದಲ್ಲಿ ಸೇರಿಸಲು ಏಕೆ ಪ್ರಯತ್ನಿಸಿದರೊ ತಿಳಿಯದು. ಏನಿದ್ದರೂ ಇದು ಋಗ್ವೇದದ ಋಚೆಯಲ್ಲ, ಮಂಗಲಾಷ್ಟಕದ ಒಂದು ಶ್ಲೋಕ.

**ಹುಬ್ಬಳ್ಳಿ      ಪ್ರಹ್ಲಾದ ರಂ. ಹಂಧರಿ**

ಇತ್ಯಾದ್ಯಾಭುವಿ ಭೂಧರಾಶ್ಚ ಸತತಂ ಕುರ್ವಂತು ನೋ ಮಂಗಲಮ್ ಎಂತಾಗಿ ನದಿಗಳ ಬಗ್ಗೆಯೂ ಹಾಗೂ ಅವುಗಳ ಉಗಮ ತಾಣಗಳಾದ ಪರ್ವತ ಶೃಂಗಗಳ ಬಗ್ಗೆಯೂ ಋಗ್ವೇದ ಸಂಹಿತೆಯಲ್ಲಿ ವಿವರಿಸಲಾಗಿದೆ. ಇದು ಸಲಿಲ ಧಾರೆಗಳು ಹಾಗೂ ಪರ್ವತಗಳ ಸ್ತುತಿ ಚಿತ್ರಣ. ಅಂಥ ಕೆಲ ವೈಶಿಷ್ಟ್ಯಪೂರ್ಣ ನದಿಗಳಲ್ಲಿ ತನ್ನ ಹೆಸರು ಜೋಡಿಸುವ ಹೆಮ್ಮೆಯ ನದಿ ಶಾಲ್ಮಲೆ ಅದರ ಬಗ್ಗೆ ವಿಶ್ಲೇಷಿಸುವಾ.

ಶಾಲ್ಮಲಾ ನದಿಯು ಉತ್ತರ ಕರ್ನಾಟಕದ ಜನಜೀವನಕ್ಕೆ ಪರಿಚಿತವೂ ಅದೇ ಸಮಯಕ್ಕೆ ಅಪರಿಚಿತವೂ ಎಂದಾಗ್ಗೆ, ಈ ಮಿಶ್ರಕ್ರಿಯೆಗೆ ಆಶ್ಚರ್ಯ. ಉತ್ತರ ಕರ್ನಾಟಕದ ವಿದ್ಯಾಕೇಂದ್ರವಾದ ಧಾರವಾಡದ ಹಚ್ಚ ಹಸುರಿನ ಸಸ್ಯಶಾಮಲೆಯಲ್ಲಿ ಈ ಶಾಲ್ಮಲೆಯು ಉಗಮಿಸಿದ ವಿಚಾರವು ಮತ್ತಷ್ಟು ಮಹದಾಶ್ಚರ್ಯ ಈ ನದಿಯು ಧಾರವಾಡದಲ್ಲಿ ನದಿಯೇ ಇಲ್ಲವೆಂದು ಪರಿತಪಿಸುವ ಜನಕ್ಕೆ ಸಾಂತ್ವನ ನೀಡಬಲ್ಲದು.

## ವ್ಯಾಕರಣ ಹಾಗು ಸಾಹಿತ್ಯಗಳಲ್ಲಿ !

ಈ ಶಾಲ್ಮಲೆಯ ಉಗಮ ಗಮನ ಹಾಗೂ ಸಮಾಗಮಗಳು ಉತ್ತರ ಭಾರತದ ವೇದಕಾಲೀನ ಸರಸ್ವತೀ ನದಿಯಂತೆ ಗುಪ್ತವಾದ ವಿಷಯಗಳಾಗಿದ್ದು ಶಾಲ್ಮಲೆಯು ಭೌಗೋಲಿಕ ವೈಚಿತ್ರ್ಯಗಳಲ್ಲಿ, ದಕ್ಷಿಣ ಭಾರತದಲ್ಲಿಯೂ ಗುಪ್ತಗಾಮಿನಿ ಎಂದು ಕರೆಯಿಸಿಕೊಂಡು ಉತ್ತರ ದಕ್ಷಿಣಗಳ ಸಮತೋಲವನ್ನು ಕಾಯ್ದಿದ್ದಾಳೆ. ಅವಳ ಜೀವನದ ವೈಶೇಷಿಕತೆಯನ್ನು ವಿವರಿಸುವ ಪೂರ್ವದಲ್ಲಿ 'ಶಾಲ್ಮಲಾ' ಎಂಬ ಪದದ ಅರ್ಥ ಸಂದರ್ಭ ಸಾಹಿತ್ಯಕ ವಿಶ್ಲೇಷಣೆಗಳು ಅವಶ್ಯಕ.

ಸಂಸ್ಕೃತ ಶಬ್ದಕೋಶದಲ್ಲಿ 'ಶಾಲ್ಮಲ' ಎಂದರೆ ಬೂರಲ ಹತ್ತಿಯ ಗಿಡ ಅಥವಾ ಪೃಥ್ವಿಯ ಏಳು ಮಹಾನ್ ವಿಭಾಗಗಳ ಒಂದು ಪ್ರದೇಶ, ಅಥವಾ ಪಾತಾಳದಲ್ಲಿಯ ನದಿ ಎಂತಾಗಿ ಅರ್ಥೈಸಲಾಗಿದೆ. ಅಲ್ಲದೇ ವಾಯು ಪುರಾಣ ಭಾಗ ಎರಡು ಪ್ರಕರಣ ನಾಲ್ಕರಲ್ಲಿ 'ಶಾಲ್ಮಲ' ದ್ವೀಪವನ್ನು ಹೆಸರಿಸಲಾಗಿದೆ. ಅಲ್ಲಿ "ಏಳು ದ್ವೀಪಗಳಲ್ಲಿ ಇದು ಒಂದಾಗಿದ್ದು ಕಠಿಣ. ಅ[illegible]ಕ ಮಹತ್ತಾದ ಏಳು ಧಾತುಗಳನ್ನು ನೀಡುವಂಥ ಸಪ್ತಗಿರಿಗಳಿಂದ ಹಮ್ಮಿಕೊಂಡು ಅಲ್ಲಿಯ ಪ್ರದೇಶವನ್ನು [illegible]

ಗಳಲ್ಲಿ ವಿಭಾಗಿಸಿ ಸಪ್ತ ವಿಭಾಗಗಳಲ್ಲಿ ರೂಪು ಗೊಂಡಿವೆ. ಅಲ್ಲದೇ ಕಪಿಲ, ಅರುಣ, ಪೀತ ಹಾಗೂ ಕೃಷ್ಣ ವರ್ಣಗಳ ಜನರಿಂದ ಕೂಡಿದೆ. 'ಶಾಲ್ಮಲ' ಎಂಬ ಮಾನಸಿಕ ನೆಮ್ಮದಿ ಶಾಂತಿ ಕೊಡುವ ಗಿಡವು ಈ ಪ್ರದೇಶದಲ್ಲಿ ಸಾಕಷ್ಟು ಬೆಳೆದಿವೆ." ಆದಾಗ ಈ ತರಹದ ಪೌರಾಣಿಕ ಸಾಹಿತ್ಯಕ ಪತ್ಯವು ತನ್ನ ವರ್ಣನೆಯಲ್ಲಿ ಎಷ್ಟರ ಮಟ್ಟಿಗೆ ಪ್ರತ್ಯಕ್ಷವಾಗಿ ನದಿಯ ಪ್ರದೇಶದ ಸಮೀಕ್ಷೆಯನ್ನು ಹೋಲುತ್ತದೆ ಎಂಬುದನ್ನು ಸಂಕ್ಷಿಪ್ತವಾಗಿ ಈ ಕೆಳಗೆ ನೋಡೋಣ.

## ಪಶ್ಚಿಮವಾಹಿನಿ ಗುಪ್ತೆ ಶಾಲ್ಮಲೆ!

ಇನ್ನು ಶಾಲ್ಮಲೆಯ ಪ್ರವಹನದ ಬಗ್ಗೆ ಅಭ್ಯಸಿಸಿದಾಗ ಪರಂಪರೆಯು ಹೇಳುವಂತೆ ಮಲಯ ಶ್ರೇಣಿಯ ಪೂರ್ವದ ಅಂಚು ಹಾಗೂ ಅಪರಾಜಿ ಪೂರ್ವಕ್ಕೆ ಹಬ್ಬಿದ ಬಯಲು ಸೀಮೆಯ ಸಂಗಮದ ಸ್ಥಾನವಾದ ಧಾರವಾಡ ನಗರದ ದಕ್ಷಿಣದ ಪರಿಸರದಲ್ಲಿ ಸುಮಾರು ಒಂದು ಕಿಲೋಮೀಟರ್ ದೂರವಿರುವ ೧೧-೧೨ ನೇಯ ಶತಮಾನಗಳಲ್ಲಿ ಕಲ್ಯಾಣ ಚಾಲುಕ್ಯರಿಂದ ನಿರ್ಮಿತವಾದ ಸೋಮೇಶ್ವರ ದೇವಾಲಯದ ಮುಂದುಗಡೆ ಇರುವ ಪವಿತ್ರ ಪುಷ್ಕರಣಿಯಲ್ಲಿ ಈ ನದಿಯು ಉಗಮಗೊಂಡಿದೆ. (ಉತ್ತರ ಅಕ್ಷಾಂಶ ೧೫°-೨೫'-೦" "ಹಾಗೂ ಪೂರ್ವ ರೇಖಾಂಶ ೭೫°-೦'-೪")" ಈ ಉಗಮ ಸ್ಥಾನವು ವಾಯು ಪುರಾಣವು ವರ್ಣಿಸಿದಂತೆ ಹಾಗೂ ಅಲ್ಲಿ ಪ್ರತ್ಯಕ್ಷವಾಗಿರುವಂತೆ, ಧಾರವಾಡದ ಪರಿಸರದಲ್ಲಿರುವ ಸಪ್ತಗಿರಿಗಳೊಂದರಲ್ಲಿ ಇದ್ದು, ಹಚ್ಚ ಹಸುರಾದ ಈ ಕೊಳ್ಳದ ಪ್ರದೇಶದಲ್ಲಿ ಶಾಲ್ಮಲ ಮರಗಳು ಅಂದರೆ ಬೂರಲ ಹತ್ತಿಯ ಮರಗಳು ಸಾಕಷ್ಟು ಈಗಲೂ ಕಾಣಸಿಗುವದರಿಂದ ಈ ನದಿಗೆ 'ಶಾಲ್ಮಲಾ' ಎಂದು ಸಾರ್ಥಕ



ವಾಗಿಯೂ ಯೋಗ್ಯವಾಗಿಯೂ ನಾಮಕರಣ ಮಾಡಿರಲು ಸಾಕು. ಅಲ್ಲದೇ ಮತ್ತೊಂದು ಸಂಸ್ಕೃತ ಶಬ್ದಾರ್ಥವು ಹೇಳುವಂತೆ ಪಾತಾಳದಲ್ಲಿಯ ನದಿ. ಈ ನದಿಯು ಕೂಡ ಅತಿ ಕೆಳಗಡೆ ಪಾತಾಳವೆಂತಿರುವ ಕೊಳ್ಳದಲ್ಲಿ ಹರಿದು ಕೊನೆಯಲ್ಲಿ ಪಾತಾಳದಲ್ಲಿ (ಅಂದರೆ ಭೂಗರ್ಭದಲ್ಲಿ) ಗುಪ್ತವಾಗಿರುವದರಿಂದ 'ಶಾಲ್ಮಲೆ' ಎಂಬ ಹೆಸರು ಅರ್ಥಪೂರ್ಣವಾಗಿದೆ. ಅಲ್ಲದೇ ಧಾರವಾಡ ಪರಿಸರವು ಮಲೆನಾಡಿನ ಪ್ರದೇಶ ಹಾಗೂ ಬಯಲು ನಾಡಿನ ಕ್ಷೇತ್ರಗಳಲ್ಲಿ ಹಮ್ಮಿಕೊಂಡಿರುವದರಿಂದ ಇಲ್ಲಿಯ ಜನರ ಮೈ ಬಣ್ಣವು ವಾಯು ಪುರಾಣದಲ್ಲಿ ವರ್ಣಿಸಿದಂತೆ ಬಿಳಿ ಕೆಂಪು ಹಳದಿ ಹಾಗೂ ಕಪ್ಪು ಛಾಯೆಗಳಲ್ಲಿ ಚತುರ್ವಿಧವಾಗಿ ಕಾಣುವದರಿಂದ (ಅಲ್ಲದೇ ಈ ಜನರು ಹನುಮಂತನ ಆರಾಧಕರು) ಇಂಥ ಜನರು ಜೀವಿಸುವ ಈ ಪ್ರದೇಶವು ಶಾಲ್ಮಲೀ ದ್ವೀಪವಾಗಿರಲೂ ಸಾಕು. ಅದಾಗಿ ಈ ರೀತಿಯ ಸಾಹಿತ್ಯಕ ಪತ್ರಗಳು ಹಾಗೂ ಪ್ರಾತ್ಯಕ್ಷಿಕ ಸ್ಥಳ ಸಮೀಕ್ಷೆಯ ಪರಿಣಾಮಗಳು ಒಂದಕ್ಕೊಂದು ಬಹಳ ಸಮೀಪವಾಗಿದ್ದು 'ಶಾಲ್ಮಲಿ ದ್ವೀಪ' ಅಥವಾ 'ಶಾಲ್ಮಲೀ ತೀರ'ವೆಂದರೆ ಧಾರವಾಡದ ಪರಿಸರವೇ ಆಗಿರಬಹುದು ಎನ್ನಿಸುತ್ತದೆ.



ಇನ್ನು ಭೌಗೋಲಿಕವಾಗಿ ಶಾಲ್ಮಲೆಯ ಪ್ರವಾಹವನ್ನು ಸಮೀಕ್ಷಿಸಿದಂತೆ ಸೋಮೇಶ್ವರದಲ್ಲಿ ಉಗಮಿಸಿದ ಈ ನದಿಯು ಅದರ ಸಮೀಪದಲ್ಲಿ ನೈಋತ್ಯ ದಿಕ್ಕಿಗಿರುವ ನುಗ್ಗಿಕೆರೆ ಹನುಮಂತನ ಪಾದ ಸ್ಪರ್ಶಿಸಿ ಆಮೇಲೆ ದಕ್ಷಿಣಾಭಿಮುಖವಾಗಿ ಚಿಕ್ಕ ವಾಹಿನಿಯಾಗಿ ಹರಿಯುತ್ತ ಮನಗುಂಡಿ ಹತ್ತಿರ ಅಂದರೆ ಉಗಮದಿಂದ ಸುಮಾರು ಹದಿನೈದು ಕಿಲೋಮೀಟರ್ ಅಂತರದಲ್ಲಿ ಸುಮಾರು ೫ ಮೀಟರ್ ಕಡಿದಾದ ಪ್ರಪಾತದಲ್ಲಿ ಧುಮ್ಮಿಕ್ಕಿ ಅಲ್ಲಿಯೇ ಗುಪ್ತಳಾದಳೋ ಏನೋ ಎಂಬಂತೆ ಕಾಣುವದು. ಇದ ನಂತರ ಅಲ್ಲೊಮ್ಮೆ ಇಲ್ಲೊಮ್ಮೆ ಕೆಲವೆಡೆ ಕಾಣುತ್ತ ಬಳ್ಳಿಗಟ್ಟಿ ಬಸವನಕೊಪ್ಪ ಜಮ್ಮಿಹಾಳಗಳ ಮೂಲಕ ಕಂಡೂ ಕಾಣದಂತೆ ಪ್ರವಹಿಸಿ ಬೇಡತಿ ನದಿಯಲ್ಲಿ ಒಂದಾಗಿದ್ದಾಳೆ. ಅನಂತರ ಉತ್ತರ ಅಕ್ಷಾಂಶ ೧೫°-೧೯'-೧೪" ಗಳಿಂದ ೧೫°-೧೯'-೮" ಗಳ ಅಂತರದಲ್ಲಿ ಬೇಡತಿಕಲ್ಲ ಹಳ್ಳ ಎಂದು ನಾಮಧಾರಿಯಾಗಿ, ಆಮೇಲೆ ಎಮ್ಮಿಗಟ್ಟಿ ಹಾಗೂ ಬಮ್ಮಿಗಟ್ಟಿಗಳ ಮಧ್ಯದಲ್ಲಿ ಹಾದು ಕಲಘಟಗಿ ಬನ್ನಿಗಟ್ಟಿ ಕೋಳಿಕೆರೆ ಹಾಗೂ ಇಂದೂರುಗಳವರೆಗೆ ಮತ್ತೆ ಶಾಲ್ಮಲಾ ನದಿ ಎಂದು ಪುನರ್ನಾಮ ಹೊಂದಿ ಕಾರವಾರ ಜಿಲ್ಲೆ ಸೇರುತ್ತಾಳೆ. ಇಲ್ಲಿ ಮತ್ತೆ ಹೆಸರು ಬೇರೆಯಾಗುತ್ತದೆ. ಅಂದರೆ ಹಚ್ಚಹಸುರಿನ ತಾಣಗಳಾದ ಕಡಿದಾದ ಕೊಳ್ಳ ಪ್ರದೇಶಗಳಾದ ಮಂಚಿಕೇರಿ ಅರಬೈಲ ಸಂಕಸಾಳ ಹೆಬ್ಬುಲ ಗುಂಡಬಾಳಗಳ ಮಾರ್ಗವಾಗಿ ಹರಿದು ಗಂಗಾವಳೀ ಎಂಬ ಹೆಸರು ಪಡೆದು ಅಂಕೋಲಾ, ಹಾಗೂ ಗೋಕರ್ಣಗಳ ಮಧ್ಯದಲ್ಲಿರುವ, ಗಂಗಾ

ವಳಿ ಎಂಬ ಕರಾವಳಿ ಊರ ಹತ್ತಿರ ಅರಬೀ ಸಮುದ್ರವನ್ನು ಸೇರುತ್ತಾಳೆ. ಕಾರವಾರ ಜಿಲ್ಲೆಯ ಪ್ರವೇಶದಿಂದ ಸಮುದ್ರ ಸೇರುವ ಮುಖದ ವರೆಗೂ ಅವಳೀಗ ಪಶ್ಚಿಮವಾಹಿನಿ. ಪಶ್ಚಿಮ ವಾಹಿನಿಗಳು ಪವಿತ್ರ ನದಿಗಳೆಂಬ ಪರಂಪರೆಯ ನ್ನಿಲ್ಲಿ ಸ್ಮರಿಸಬಹುದು. ಈ ಪ್ರವಾಹದ ಆದಿ ಯಿಂದ ಕೊನೆಯವರೆಗಿನ ಉದ್ದಳತೆ ೧೬೫ ಕಿಲೋ ಮೀಟರುಗಳು. ಮೊದಲ ೧೫ ಕಿಲೋಮೀಟರು ಗಳಲ್ಲಿ ಸ್ಪಷ್ಟವಾಗಿಯೂ ಎರಡನೆಯ ೨೫ ಕಿಲೋ ಮೀಟರುಗಳ ಹಂತದಲ್ಲಿ ಅಸ್ಪಷ್ಟವಾಗಿಯೂ ಮೂರನೆಯ ೧೨೫ ಕಿಲೋಮೀಟರುಗಳ ಹಂತದಲ್ಲಿ ಮತ್ತೆಸ್ಪಷ್ಟವಾಗಿಯೂ ಹರಿದಿದೆ. ಅಂದರೆ ಮೊದಲ ಹಂತಡಲ್ಲಿ 'ಶಾಲ್ಮಲಾ' ಎರಡನೆಯ ಹಂತದಲ್ಲಿ ಬೇಡತಿ + ಶಾಲ್ಮಲಾ ಹಾಗೂ ಮೂರನೆಯ ಹಂತ ದಲ್ಲಿ ಗಂಗಾವಳೀ ಎಂದು ಶಾಲ್ಮಲೆಯು ಹರಿದಿದ್ದಾಳೆ. ಉತ್ತರ ಭಾರತದ ಸರಸ್ವತಿ ನದಿ ಯಂತೆ, ಇವಳು ತನ್ನ ಅಸ್ತಿತ್ವದ ಕೊಂಡಿಗಳನ್ನು ಕೆಲಕೆಲ ಭಾಗಗಳಲ್ಲಿ ಕಳಚಿಕೊಂಡು ಗುಪ್ತಗಾಮಿನಿ ಯಾಗಿ ತನ್ನತನವನ್ನು ಮೆರೆದಿದ್ದಾಳೆ.

ಈ ಶಾಲ್ಮಲೆಯ ಸುದೀರ್ಘ ಪ್ರವಹನವನ್ನು ಭೂಗೋಲ ಹಾಗೂ ಭೂಗರ್ಭ ಶಾಸ್ತ್ರಗಳ ಚಕ್ಷುಗಳಿಂದ ಅಭ್ಯಸಿಸಿದಾಗ ೧೫ ಕಿಲೋಮೀಟರ್ ದೂರದಲ್ಲಿರುವ ಪ್ರಪಾತದಿಂದ ಹಿಡಿದು ಮುಂದಿನ ೨೫ ಕಿಲೋಮೀಟರುಗಳ ವರೆಗೆ ಚಾಚಿದ ಪ್ರದೇಶದಲ್ಲಿ ಅದರ ಭೂಗರ್ಭದಲ್ಲಿ ಪರಿಚ್ಛೇದ ದಲ್ಲಿ ಕಲ್ಲು ಹಾಗೂ ಮಣ್ಣಿನ ಸ್ತರಗಳು ಪೊಳ್ಳಾಗಿರುವುದರಿಂದ ಪ್ರಾಯಶಃ ಈ ಪ್ರದೇಶದ ಕೊಳ್ಳದುದ್ದಕ್ಕೂ ಈ ನದಿಯು ಪೊಳ್ಳಾದ ಸಂದುಗಳಲ್ಲಿ ಹರಿದು ಗುಪ್ತಗಾಮಿನಿಯಾಗಿರ- ಬಹುದು. ಇದೊಂದು ಶಾಲ್ಮಲೆಯ ಪ್ರಾಕೃತಿಕ ವೈಶಿಷ್ಟ್ಯವಲ್ಲವೇ? ಶಾಲ್ಮಲೆಯ ಪಶ್ಚಿಮ ವಾಹಿನಿಯ ವೃತ್ತಾಂತ ಇದಾದರೆ ಅವಳ ಪೂರ್ವವಾಹಿನಿಯ ಇತಿಹಾಸ ಮತ್ತೊಂದಿದೆ.

**ಪೂರ್ವವಾಹಿನಿ :**

ಇನ್ನು ಶಾಲ್ಮಲೆಯ ಉಗಮಸ್ಥಾನವಾದ ಸೋಮೇಶ್ವರ ಪರಿಸರವು ಮತ್ತೊಂದು ರೀತಿ ಯಿಂದ ವೈಶಿಷ್ಟ್ಯಪೂರ್ಣವಾಗಿದೆ. ಇಲ್ಲಿಯ

ಪುಷ್ಕರಣಿಯು ಪಶ್ಚಿಮವಾಹಿನಿಯಾಗಿ ಶಾಲ್ಮಲೆಯ ಉಗಮಕ್ಕೆ ಕಾರಣೀಭೂತವಾದಂತೆ, ಅದೇ ಸ್ಥಳವು ಪೂರ್ವವಾಹಿನಿಯಾಗಿ ಹರಿಯುವ ಇನ್ನೊಂದು ಪ್ರವಾಹಕ್ಕೂ ಕಾರಣವಾಗಿದೆ. ಒಂದೇ ಮೂಲದಿಂದ ಎರಡು ವಿರುದ್ಧ ದಿಸೆಗಳಲ್ಲಿ ಹರಿಯುವ ನದಿಗಳು ಭಾರತದಲ್ಲಿ ಅತಿ ವಿರಳ. ಭೌಗೋಲಿಕ ಪರಿಶಿತಗಳು ಈ ತತ್ವವನ್ನು ಪುಷ್ಟೀಕರಿಸುತ್ತವೆ. ಶಾಲ್ಮಲೆಯ ಈ ದ್ವಿಮುಖ ಪಶ್ಚಿಮ ಹಾಗೂ ಪೂರ್ವವಾಹಿನಿಗಳು ಭೌಗೋಲಿಕ ವಿಜ್ಞಾನಿಗಳಿಗೆ ಜಿಜ್ಞಾಸೆಯನ್ನು ಹುಟ್ಟಿಸುವಂಥವು. ಸೋಮೇಶ್ವರದ ಪೂರ್ವ ಮೂಲೆಯ ಹೊಂಡದಲ್ಲಿ ಉಗಮಿಸಿ ಪೂರ್ವಾಭಿಮುಖವಾಗಿ ಜುಳುಜುಳಿಸಿ ಅಡ್ಡಲಾಗಿ ಬರುವ ರೈಲುದಾರಿಯನ್ನು ಕ್ರಮಿಸಿ ಪೂರ್ವದಲ್ಲಿರುವ ಹೊಳ್ಳದಲ್ಲಿ ಹಾದು ನವಲೂರಿನ ಉತ್ತರಕ್ಕೆ ದೊಡ್ಡಹಳ್ಳವೆಂದು ನಾಮ ಧರಿಸಿ ಬ್ಯಾಹಟ್ಟಿಯ ದಕ್ಷಿಣಕ್ಕೆ ಹರಿದು ಹೆಬಸೂರು ಹಾಗೂ ಕಿರೇಸೂರುಗಳ ಮಧ್ಯದಲ್ಲಿ ಹಾದು ಬೆಣ್ಣೆ ಹಳ್ಳಕ್ಕೆ ಸಂಗಮಿಸಿ ಕೋಲವಾಡ, ಕರ್ಲವಾಡ, ಕಲಕವಾಡ ಅರೆಕುರಹಟ್ಟಿ ಯಮನೂರು ಪಡೇಸೂರುಗಳ ಮೂಲಕ ನವಲಗುಂದದ ಪಶ್ಚಿಮಕ್ಕೆ ಸುಮಾರು ಅರ್ಧ ಕಿಲೋಮೀಟರುಗಳ ಅಂತರದಲ್ಲಿ ತುಪರಿಹಳ್ಳಕ್ಕೆ ಕೂಡಿ ಗುಡಿಸಾಗರ ನಾಗನೂರ ಅಮರಗೋಳ ಬ್ಯಾಹಟ್ಟಿ ಕುರ್ಲಕೇರಿ, ಸುರಕೋಡ ಮತ್ತು ಕೊಂಗವಾಡಗಳ ಮಧ್ಯೆ ಹಾಯ್ದು ಕೊಣ್ಣೂರಿನ ಪೂರ್ವದಲ್ಲಿ ಮಲಪ್ರಭೆಗೆ ಕೂಡುತ್ತದೆ. ಇದರ ಉದ್ದಳತೆಯು ೮೦ ಕಿಲೋಮೀಟರ್ ಇದ್ದು · ಬಯಲು ನಾಡಿನಲ್ಲಿ ಪೂರ್ತಿಯಾಗಿ ಹರಿಯುತ್ತದೆ. ಇದು ಪೂರ್ವವಾಹಿನಿ. ಈ ರೀತಿಯಾಗಿ, ಪಶ್ಚಿಮ ಹಾಗೂ ಪೂರ್ವವಾಹಿನಿಯಾಗಿ ಹರಿಯುವಂಥ ಶಾಲ್ಮಲೆಯು ಇತಿಹಾಸ ನದಿಗಳ ಇತಿಹಾಸದಲ್ಲಿ ಅತಿ ವಿರಳ.



## ಶಾಲ್ಮಲೆಯ ಜಾನಪದ ಕಥೆ:

ಧಾರವಾಡವು ಮಲೆನಾಡಿನ ಸೆರಗಿನಲ್ಲಿಯು ಬೀಡಾದರೂ, ಇಲ್ಲಿ ನದಿಗಳಿಲ್ಲದ ಕೊರಗು ಜನಜನಿತವಾಗಿದೆ. ಇದಕ್ಕೊಂದು ಪರಂಪರಾಗತ ಜಾನಪದ ಕಥೆಯೂ ಉಂಟು. ಈ ಪ್ರದೇಶದ ಪಡುವ ದಿಬ್ಬದ ಗೌಡನೊಬ್ಬನು ಸೋಮೇಶ್ವರನ ಭಕ್ತ. ಅವನಿಂದ ಪ್ರತಿದಿನ ಸೋಮೇಶ್ವರನ ಪೂಜೆ. ಅವನ ಭಕ್ತಿಯು ಫಲವೆಂಬಂತೆ ಗಂಗೆಯು ಅವನ ಮನೆಯ ಮುಂದೆ ಹೊಳೆಯಾಗಿ ಪ್ರವಹಿಸುವ ವಾಗ್ದಾನದ ಕನಸು. ಪ್ರತಿಯಾಗಿ ಹಿರಿಮಗಳ ಬಲಿದಾನದ ಬೇಡಿಕೆ. ಪಿತೃವಾತ್ಸಲ್ಯ ಈ ಬಲಿದಾನಕ್ಕೆ ನಿರಾಕರಿಸಿದುದು ಅಂತೆಯೇ ಉಗಮಳಾದ ಗಂಗಾರೂಪಿಣಿಯಾದ ಶಾಲ್ಮಲೆಯು ಉಗಮಿಸಿದ ಕೆಲ ಅಂತರದಲ್ಲಿಯೇ ಕತೆಗೂ ಶಾಲ್ಮಲೆಯ ಪ್ರವಾಹ ಗುಪ್ತಳಾದುದು. ಜೀವನಕ್ಕೂ ಎಷ್ಟೊಂದು ಸಾಮೀಪ್ಯ !!

ಅದಾಗಿ ಪೃಥ್ವಿಯ ಪೃಷ್ಠದ ಮೇಲೆ ಭೌಗೋಲಿಕ ಹಾಗೂ ಭೂಗರ್ಭ ಶಾಸ್ತ್ರಗಳ ದೃಷ್ಟಿಯಿಂದ ನೋಡಿದಾಗ ಶಾಲ್ಮಲೆಯಂತೆ ಗುಪ್ತಗಾಮಿನಿಯಾಗಿಯೂ ದ್ವಿದಿಶಾವಾಹಿನಿಯಾಗಿಯೂ ಹರಿಯುವ ನದಿಗಳು ಅತಿ ವಿರಳ. ✡

# ಗಡಿ ಸಮಸ್ಯೆ:

# ನಾವು ಮಾಡಬೇಕಾದುದೇನು?

ಎಚ್. ಎಸ್. ಅಚ್ಯುತ

ಗಡಿ ಸಮಸ್ಯೆ ವಿವೇಕ ಮತ್ತು ಅವಿವೇಕ (ಏಪ್ರಿಲ್ ೮೨) 'ವಿಚಾರಿ'ಯವರ ಈ ವಿಚಾರ ಪ್ರಚೋದಕ ಲೇಖನ ಕನ್ನಡಿಗರ ಎಲ್ಲ ಸಮಸ್ಯೆಗಳನ್ನು ವಿಶ್ಲೇಷಿಸುವಂತೆ ಪ್ರಚೋದಿಸಿದೆ.

ಮೊದಲು ವಿಚಾರಿಯವರ ಲೇಖನದಲ್ಲಿರುವ ತಪ್ಪುಗಳನ್ನು ತೋರಿಸಿ ನಂತರ ಉಳಿದ ವಿಷಯಗಳನ್ನು ಕುರಿತು ಹೇಳುತ್ತೇನೆ. 'ಔದ್ಯೋಗಿಕ ವಿಕಾಸ ಹೊಂದುತ್ತಿರುವ ದೇಶದಲ್ಲಿ ಯಾವಾಗಲೂ ಜನ ಒಂದೆಡೆಯಿಂದ ಇನ್ನೊಂದೆಡೆಗೆ ವಲಸೆ ಹೋಗುತ್ತಲೇ ಇರುತ್ತಾರೆ' ಎಂದಿದ್ದಾರೆ. ಇದು ಕರ್ನಾಟಕದ ಮಟ್ಟಿಗೆ ಮಾತ್ರ ನಿಜ. ಅಂದರೆ ಹೊರರಾಜ್ಯಗಳಿಂದ ಜನ ಕರ್ನಾಟಕಕ್ಕೆ ವಲಸೆ ಬರುತ್ತಲೇ ಇರುತ್ತಾರೆ. ಬೇರೆ ರಾಜ್ಯಗಳಲ್ಲಿ ನಮ್ಮವರಿಗೆ ಕೆಲಸ ಕೊಡಲು ಅವರಿಗೇನು ತಲೆ ಕೆಟ್ಟಿಲ್ಲ. ಉಳಿದೆಲ್ಲ ರಾಜ್ಯಗಳಲ್ಲಿ ಮಣ್ಣಿನ ಮಕ್ಕಳಿಗೇ ಕೆಲಸ. ಮಹಾರಾಷ್ಟ್ರವಂತೂ ಕಾರ್ಖಾನೆಗಳಿಗೆ ಲೈಸೆನ್ಸ್ ಕೊಡುವ ಮೊದಲು ಮರಾಠಿಗರಿಗೆ ಕೆಲಸ ಕೊಡಬೇಕೆಂದು ಒಪ್ಪಂದ ಮಾಡಿಕೊಳ್ಳುತ್ತದೆ.

ಮೇಲಿನ ವಿಚಾರದಿಂದ ಗಡಿವಿವಾದವನ್ನು ನೋಡಬೇಕು. ಬೆಳಗಾವಿಯನ್ನು ಹಿಂದಿನಿಂದ ನಮ್ಮ ರಾಜರುಗಳು ಆಳಿದರು. ಅದು ನಮ್ಮ ನೆಲ ನಿಜ. ಆದರೆ ಅಲ್ಲಿಯ ಜನ ನಾವು ಕನ್ನಡಿಗರಲ್ಲ ಎಂದಿದ್ದಾರೆ (ಮಹಾರಾಷ್ಟ್ರ ಏಕೀಕರಣ ಸಮಿತಿಗೆ ಹೆಚ್ಚು ಸ್ಥಾನಗಳು ಬಂದಿವೆ). ಆದ್ದರಿಂದ ಆ ನೆಲವನ್ನು ನಾವು ಹಿಡಿದಿಟ್ಟುಕೊಳ್ಳಬೇಕಿದ್ದರೆ ಅದರಿಂದ ಕರ್ನಾಟಕಕ್ಕೆ ಇರುವ ಆದಾಯವನ್ನು ಗಣನೆಗೆ ತೆಗೆದುಕೊಳ್ಳಬೇಕು. ನಮಗೆ ಪ್ರಯೋಜನವಿಲ್ಲದ ಪ್ರದೇಶಗಳನ್ನು ಅವರಿಗೆ ಕೊಟ್ಟುಬಿಡುವುದು ಲೇಸು. ಇದರಿಂದ ಬೇರೆ ರಾಜ್ಯಗಳವರು ನಮ್ಮನ್ನು ಪುಕ್ಕರು ಎಂದು ತಿಳಿದು ಅವರೂ ಕಿರುಕುಳ ಶುರುಮಾಡಬಹುದಲ್ಲವೆ? ಎನ್ನುವುದಾದರೆ ನಾವು ಪುಕ್ಕಟೆ ಕೊಡುವುದು ಬೇಡ. ಮಹಾರಾಷ್ಟ್ರದಲ್ಲಿ ಸೇರಿರುವ ಆದರೆ ಹೆಚ್ಚು ಕನ್ನಡಿಗರಿರುವ ನೆಲವನ್ನು ಇದಕ್ಕೆ ಬದಲಾಗಿ ಪಡೆಯುವುದು ಇಲ್ಲವೆ ಅವರಿಗೆ ಕೊಡುವ ಪ್ರದೇಶವನ್ನು ಅಭಿವೃದ್ಧಿ ಮಾಡಲು ನಮ್ಮ ರಾಜ್ಯಕ್ಕೆ ತಗುಲಿದ ಖರ್ಚನ್ನು ಅವರಿಂದ ವಸೂಲು ಮಾಡುವುದು. ಇದೇನು ಭಾರತ ಪಾಕಿಸ್ತಾನ ವಿಭಜನೆಯಂತೆ ಮಾತಾಡುತ್ತಿದ್ದೀರಲ್ಲ ಎಂದರೆ ಶಿವಸೇನೆಯವರು ನಮ್ಮವರ ಮೇಲೆ ಮಾಡಿದ ದೌರ್ಜನ್ಯ ವಿಭಜನೆಯ ಸಮಯದಲ್ಲಿ ಪಾಕಿಸ್ತಾನಿಗಳು ಮಾಡಿದುದಕ್ಕಿಂತ ಕಡಿಮೆ ಏನಿಲ್ಲವಲ್ಲ. ಇಷ್ಟೇ ಅಲ್ಲ ನಮ್ಮ ರಾಜ್ಯದಲ್ಲೂ ಮಣ್ಣಿನ ಮಕ್ಕಳ ನೀತಿ ಬಂದಾಗ ವೃಥಾ ಬೆಳಗಾವಿಯ ಮರಾಠಿಗರಿಗೆ ಕೆಲಸ ಕೊಡುವ ಜವಾಬ್ದಾರಿ ಹೊತ್ತುಕೊಂಡಂತಾಗುತ್ತದೆ.

ನಮ್ಮಲ್ಲಿ ನಮ್ಮವರೆ ನಾವು ಉಳಿದ ರಾಜ್ಯದವರಿಗಿಂತ ದಡ್ಡರು ಎಂದು ಪ್ರಚಾರ ಮಾಡುತ್ತಿದ್ದಾರೆ. ಮಾನ್ಯ ಮುಖ್ಯ ಮಂತ್ರಿ ಗುಂಡೂರಾಯರೆ ಈ ಮಾತನ್ನು ಹೇಳಿದ್ದರು. ಇದು ಹುರುಳಿಲ್ಲದ ಮಾತು ನಿಜ. ಐಎಎಸ್ ಮುಂತಾದ ಪರೀಕ್ಷೆ

ಗಳಲ್ಲಿ ಉತ್ತೀರ್ಣರಾಗುತ್ತಿರುವ ಕನ್ನಡಿಗರು ಬಹಳ ಕಡಿಮೆ. ಇದಕ್ಕೆ ಕಾರಣ ನಾವು ಹಿಂದುಳಿದಿದ್ದೇವೆ. ಹಾಗೆ ನೋಡಿದರೆ ನೊಬೆಲ್ ಬಹುಮಾನ ಪಡೆದ ಭಾರತೀಯರು ಎಷ್ಟು ಮಂದಿ ಇದ್ದಾರೆ? ಅಂದರೆ ಭಾರತೀಯರು ಅಮೇರಿಕದವರಿಗಿಂತ ದಡ್ಡರು ಎಂದರ್ಥವೇನು? ಕನ್ನಡಿಗರು ಬೇರೆ ರಾಜ್ಯದವರಿಗಿಂತ ಹಿಂದುಳಿದಿದ್ದೇವೆ.

ನೇರ ಬ್ರಿಟಿಷ್ ಆಡಳಿತದಲ್ಲಿದ್ದ ಪ್ರದೇಶಗಳಿಗೆ ವಿದ್ಯೆ ಕಲಿಯಲು ಹೆಚ್ಚು ಅನುಕೂಲ ಇತ್ತು. ಮಹಾರಾಜರುಗಳ ಆಳ್ವಿಕೆಯಲ್ಲಿದ್ದ ನಮಗೆ ಸಾಕಷ್ಟು ಅನುಕೂಲ ಇರಲಿಲ್ಲ.

ಬೆಂಗಳೂರಿನಲ್ಲಿ ಕೇಂದ್ರ ಸರ್ಕಾರದ ಸಾಕಷ್ಟು ಕಾರ್ಖಾನೆಗಳಿವೆ. ಈ ಕಾರ್ಖಾನೆಗಳು ಪ್ರಾರಂಭವಾದ ಸಮಯದಲ್ಲಿ ನಮ್ಮಲ್ಲಿ ಉನ್ನತ ಶಿಕ್ಷಣ ಪಡೆದವರು ಮತ್ತು ಕುಶಲ ಕಾರ್ಮಿಕರು ಕಡಿಮೆ ಇದ್ದರು. ಆದ್ದರಿಂದ ಹೊರಗಿನವರೆ ಹೆಚ್ಚಾಗಿ ಕೆಲಸಕ್ಕೆ ಸೇರಿಕೊಂಡರು. ಇವರೆ ಈಗ ಉನ್ನತ ಸ್ಥಾನಗಳಲ್ಲಿ ಇದ್ದಾರೆ. ಈ ಜನ ನಮ್ಮವರು ಶಿಕ್ಷಿತರಾದ ಸಮಯದಲ್ಲೂ ತಮ್ಮವರಿಗೇ ಕೆಲಸ ಕೊಡುತ್ತಾ ಬಂದಿದ್ದಾರೆ.

ಕಾರ್ಮಿಕ ಸಂಘಗಳು ಹೆಚ್ಚಾಗಿ ಎಡ ಪಕ್ಷಗಳ ನಾಯಕತ್ವವನ್ನೇ ಹೊಂದಿವೆ. ಈ ಎಡ ಪಕ್ಷಗಳು ಹೊರ ರಾಜ್ಯಗಳಲ್ಲಿ 'ಮಣ್ಣಿನ ಮಕ್ಕಳ' ನೀತಿಗೆ ಬಹಿರಂಗ ಇಲ್ಲವೆ ಮೌನ ಸಮ್ಮತಿಯನ್ನು ಕೊಟ್ಟಿವೆ. ಆದರೆ ನಮ್ಮ ರಾಜ್ಯದಲ್ಲಿ ಯಾರಾದರೂ ಮಣ್ಣಿನ ಮಕ್ಕಳ ನೀತಿ ತೆಗೆದರೆ "ಕಾರ್ಮಿಕರೆಲ್ಲ ಒಂದೇ. ಈ ಸಂಕುಚಿತ ಬುದ್ಧಿ ಬೇಡ" ಎಂದು ಅವರ ಬಾಯಿ ಮುಚ್ಚಿಸುತ್ತಾರೆ. ಇವರ ಹಿಂದಿರುವ ಗುಟ್ಟು ಇಷ್ಟೆ: ಈ ನಾಯಕರುಗಳು ಮಣ್ಣಿನ ಮಕ್ಕಳ ತತ್ವವನ್ನು ಬೆಂಬಲಿಸಿದರೆ ನಾಳೆ ಇವರಿಗೆ ಅರ್ಧ ಚಂದ್ರ ಪ್ರಯೋಗವಾಗುವುದು ಖಂಡಿತ. ಏಕೆಂದರೆ ಕರ್ನಾಟಕದಲ್ಲಿ ಹೊರಗಿನ ಕಾರ್ಮಿಕರೇ ಹೆಚ್ಚಾಗಿದ್ದಾರಲ್ಲ. ಅಷ್ಟೇ ಅಲ್ಲ ಈ ನಾಯಕರುಗಳಲ್ಲಿ ಹೆಚ್ಚು ಮಂದಿ ಕನ್ನಡೇತರರೇ. ಮುಖ್ಯವಾಗಿ ಈ ಎಡ ಪಕ್ಷದ ನಾಯಕರುಗಳಿಗೆ ಬೇಕಿರುವುದು ಕನ್ನಡಿಗರ ಹಿತಕ್ಕಿಂತ ತಮ್ಮ ಪಕ್ಷದ ನಾಯಕತ್ವ. ಅಂದರೆ ಬೇರೆ ಪಕ್ಷದ ನಾಯಕರುಗಳು ಸರಿಯಿದ್ದಾರೆಂದಲ್ಲ. ಹೆಚ್ಚು ಮಂದಿ ಕಾರ್ಮಿಕ ನಾಯಕರುಗಳು ಎಡ ಪಕ್ಷದವರಾಗಿರುವುದರಿಂದ ನಮಗಾಗುತ್ತಿರುವ ಅನ್ಯಾಯಕ್ಕೆ ಇವರೇ ಮುಖ್ಯವಾಗಿ ಜವಾಬ್ದಾರರು.

ಇನ್ನು ನಮಗಾಗುತ್ತಿರುವ ಅನ್ಯಾಯದ ಬಗ್ಗೆ ಮನವರಿಕೆ ಮಾಡಿಕೊಡದೆ ವಿಷಯವನ್ನು ಮುಚ್ಚಿಡುತ್ತಾ, ಕನ್ನಡಿಗರು ವಿಶಾಲ ಹೃದಯರು ಎಂದು ನಮ್ಮ ದಡ್ಡ ಜನರನ್ನು ಉಬ್ಬಿಸಿ ಬೆನ್ನಲ್ಲಿ ನಮಗೆ ಇರಿಯುತ್ತಿರುವ ಅನೇಕ ಪತ್ರಿಕೆಗಳಿವೆ. ಈ ಪತ್ರಿಕೆಗಳಲ್ಲಿರುವವರು ಹೆಚ್ಚು ಮಂದಿ ಕನ್ನಡೇತರರು ಮತ್ತು ನಿರಭಿಮಾನಿ ಕನ್ನಡಿಗರು. ಈ ಪತ್ರಿಕೆಗಳು ನಮಗಾಗುತ್ತಿರುವ ಅನ್ಯಾಯದ ಬಗ್ಗೆ ಬರೆದ ಪತ್ರಗಳನ್ನು ಕಸದ ಬುಟ್ಟಿಗೆ ಎಸೆದು ಖಾಜಿ ನ್ಯಾಯಮಾಡುವಂತಹ ಅಥವಾ 'ವಿಶಾಲ ಹೃದಯ' ಎನ್ನುವ ಗೊಡ್ಡುವಾದವನ್ನು ಮಂಡಿಸುವ ಪತ್ರಗಳನ್ನು ಪ್ರಕಟಿಸುತ್ತವೆ. ಇಲ್ಲಿ ಒಂದು ಘಟನೆ ಹೇಳುವುದು ಸೂಕ್ತ. ಬೆಂಗಳೂರಿನ ಅಕೌಂಟೆಂಟ್ ಜನರಲ್ ಕಛೇರಿಯಲ್ಲಿ ಕೆಲವು ವರ್ಷಗಳ ಕೆಳಗೆ ಸುಮಾರು ೭೫ ಜನ ನೌಕರರನ್ನು ಹೊಸದಾಗಿ ನೇಮಕ ಮಾಡಿಕೊಂಡರು. ಇದರಲ್ಲಿ ಕೇವಲ ಐದಾರು ಜನ ಮಾತ್ರ ಕನ್ನಡಿಗರಾಗಿದ್ದರು. ಆಗ ಅಲ್ಲಿಯ ಕನ್ನಡ ಕ್ರಿಯಾ ಸಮಿತಿ ಉಗ್ರವಾಗಿ ಪ್ರತಿಭಟಿಸಿತು. ಇವರಿಗೆ ಕೊನೆಗೆ ಜಯ ದೊರಕಿತು ಎನ್ನುವುದು ಹೆಮ್ಮೆಯ ವಿಚಾರ.

ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದ ಮುಖ್ಯ ವಿಚಾರ ಎಂದರೆ ಈ ಕ್ರಿಯಾ ಸಮಿತಿಯವರು ಎಲ್ಲ ಪತ್ರಿಕೆಗಳಿಗೂ ಹೇಳಿಕೆ ಕೊಟ್ಟಿದ್ದರು. ಇವರ ಪ್ರತಿಭಟನೆಯ ವಿಚಾರ ಎಲ್ಲ ಪತ್ರಿಕೆಗಳಲ್ಲಿ ಬಂದಿತ್ತು. ಆದರೆ ಒಂದು ಮುಖ್ಯವಾದ ಇಂಗ್ಲಿಷ್ (ಹದಿನಾರಾಣೆ ತಮಿಳರಿಂದ ಬೆಂಗಳೂರಿನಿಂದ ಪ್ರಕಟವಾಗುವ) ಪತ್ರಿಕೆಯಲ್ಲಿ ಪ್ರಕಟವಾಗಲಿಲ್ಲ ಎನ್ನುವುದು ಗಮನಾರ್ಹ. ನಂತರ ಈ ಪತ್ರಿಕೆಯ ಆಫೀಸಿನ ಎದುರು ಪ್ರತಿಭಟನೆ ನಡೆಯಿತು.

ಇನ್ನು ನಮ್ಮ ಜನರ ದೌರ್ಬಲ್ಯಗಳನ್ನು ನೋಡೋಣ. ಯಾರಿಗೂ ಬೇಡದ ಭಾರತೀಯತೆಗೆ ನಮ್ಮ ಜನ ಅಂಟಿಕುಳಿತಿದ್ದಾರೆ. ಇದರಿಂದ ನಮಗೆ ನಾವೆ ಅನ್ಯಾಯ ಮಾಡಿಕೊಳ್ಳುತ್ತಿದ್ದೇವೆ

ಎನ್ನುವುದನ್ನು ನಾವು ಮರೆತಿದ್ದೇವೆ. ನಮ್ಮ ದೌರ್ಬಲ್ಯದ ದುರುಪಯೋಗ ಸಾಕಷ್ಟು ಆಗಿದೆ.

ನಮ್ಮಲ್ಲಿ ಸ್ವಾರ್ಥ ವಿಪರೀತ ಇದೆ. ನಮ್ಮ ಕನ್ನಡಿಗರ ಸಮಸ್ಯೆಯ ಬಗ್ಗೆ ಚಿಂತೆ ನಮ್ಮಲ್ಲಿ ಹೆಚ್ಚು ಜನರಿಗೆ ಬೇಕಾಗಿಲ್ಲ. ಎಲ್ಲೋ ಕೈ ಬೆರಳ ಮೇಲೆ ಎಣಿಸಬಹುದಾದಷ್ಟು ಸಾಹಿತಿಗಳಿಗೆ ಮಾತ್ರ ಬೇಕಾಗಿದೆ.

ಇಂದು ನಮ್ಮ ನಾಡಿನಲ್ಲಿ ಜಾತೀಯ ಬಡಿದಾಟ ಹೆಚ್ಚಾಗಿದೆ. ಆದ್ದರಿಂದ ನಾಡಿನ ಅಭಿಮಾನ ಮೂಲೆಗುಂಪಾಗಿ ಜಾತಿಯೇ ಪ್ರಧಾನವಾಗುತ್ತಿದೆ. ತಮ್ಮ ಜಾತಿ ಅಥವಾ ಮತವನ್ನು ನೋಡಿ ಕೆಲಸ ಕೊಡುವುದು ಅಭ್ಯರ್ಥಿ ಯಾವ ರಾಜ್ಯದವನಾಗಿದ್ದರೂ ಚಿಂತೆಯಿಲ್ಲ, ತಮ್ಮ ಜಾತಿಯವನಾದರೆ ಸಾಕೆನ್ನುವ ಭಾವನೆ ಬಂದಿದೆ.

ಇನ್ನು ಕನ್ನಡಾಭಿಮಾನದ ವಿಚಾರಕ್ಕೆ ಬಂದರೆ ನಮ್ಮ ಅಭಿಮಾನಶೂನ್ಯತೆಗೆ ಮುಖ್ಯ ಕಾರಣ ನಮ್ಮಲ್ಲಿರುವ ಸೋಗಲಾಡಿತನ. ಅಪ್ಪ, ಅಮ್ಮನಿಗೆ ಸ್ನೇಹಿತರಿಗೆ ಇಂಗ್ಲಿಷಿನಲ್ಲೇ ಕಾಗದ ಬರೆಯುವುದು ಸಾಧ್ಯವಾದಷ್ಟು ಇಂಗ್ಲಿಷಿನಲ್ಲೇ ಮಾತಾಡುವುದು, ಇಲ್ಲವೇ ಬೇಕೆಂತಲೇ ಕನ್ನಡದಲ್ಲಿ ಇಂಗ್ಲಿಷು ಬೆರೆಸುವುದು ಇದೇ ಮುಂತಾದ' ವಕ್ರ ಚೇಷ್ಟೆಗಳಿಂದ ಏನೋ ದೊಡ್ಡಸ್ತಿಕೆ ಪಡೆದಂತೆ ಆಡುವುದು.

ಮದುವೆ ಕರೆಯೋಲೆಯನ್ನು ಇಂಗ್ಲಿಷು ಮತ್ತು ಕನ್ನಡದಲ್ಲಿ ಮುದ್ರಿಸಿ ಸ್ನೇಹಿತರಿಗೆ ಇಂಗ್ಲಿಷಿನದನ್ನು ಹಂಚುವುದು ಬಳಗದವರಿಗೆ ಕನ್ನಡದ ಕರೆಯೋಲೆ ಕೊಡುವುದು ಇಂತಹ ಹಲವು ನಿದರ್ಶನಗಳು ನಮಗೆ ನಮ್ಮ ಭಾಷೆಯ ಬಗ್ಗೆ ಇರುವ ಕೀಳರಿಮೆಯನ್ನು ತೋರಿಸುತ್ತವೆ.

ಇನ್ನು ಕಾನ್ವೆಂಟಿನ ವಿಚಾರಕ್ಕೆ ಬರೋಣ. ಮಕ್ಕಳನ್ನು ತಂದೆತಾಯಿಗಳು ಕಾನ್ವೆಂಟಿಗೆ ಕಳಿಸುವುದಕ್ಕೆ ಮುಖ್ಯ ಕಾರಣಗಳು

೧) ಕನ್ನಡದ ಬಗ್ಗೆ ಕೀಳರಿಮೆ.

೨) ಇದರಿಂದ ತಮ್ಮ ಪ್ರತಿಷ್ಠೆ ಹೆಚ್ಚುತ್ತದೆ.

೩) ಮಕ್ಕಳು ಬುದ್ಧಿವಂತರಾಗಿ ಡಾಕ್ಟರೋ ಇಂಜನಿಯರೋ ಆಗುತ್ತಾರೆ ಎನ್ನುವ ಭ್ರಮೆ.

೪) ಮಕ್ಕಳು ತುಂಬಾ ಶಿಸ್ತಿನವರಾಗುತ್ತಾರೆ.

೫) ಸುಮಾರು ಕನ್ನಡ ಶಾಲೆಗಳು ಸರ್ಕಾರಿ ಶಾಲೆಗಳು, ಇಲ್ಲಿಗೆ ಬರುವ ಮಕ್ಕಳು ಬಡ ಮಕ್ಕಳು. ಇಂತಹ ಮಕ್ಕಳ ಜೊತೆ ಸೇರಿದರೆ ತಮ್ಮ ಪ್ರತಿಷ್ಠೆಗೆ ಕುಂದು ಮತ್ತು ತಮ್ಮ ಮಕ್ಕಳು ಕೆಡುತ್ತವೆ ಎನ್ನುವ ಒಣ ಪ್ರತಿಷ್ಠೆ.

೬) ಕೆಲ ಪ್ರದೇಶಗಳಲ್ಲಿ ಕನ್ನಡ ಶಾಲೆಗಳೇ ಇಲ್ಲ ಎನ್ನುವುದು ಸತ್ಯ.

ಎರಡನೇ ಕಾರಣವನ್ನು ವಿಶ್ಲೇಷಿಸೋಣ. ಭಾಷೆಯ ಹಿಡಿತವಿಲ್ಲದೆ ಯಾವುದೇ ವಿಷಯವನ್ನು ಕಲಿಯಲು ಸಾಧ್ಯವಿಲ್ಲ. ಕಾನ್ವೆಂಟ್ ಸೇರಿದ ಮಗುವಿಗೆ ಇಂಗ್ಲಿಷು ಕಲಿಯುವುದಕ್ಕೆ ಕೆಲವು ವರ್ಷಗಳು ಹಿಡಿಯುತ್ತವೆ. ಅಲ್ಲಿಯವರೆಗೆ ಉಳಿದ ವಿಷಯಗಳು ಅದಕ್ಕೆ ಏನೂ ಅರ್ಥವಾಗುವುದಿಲ್ಲ. ಆದ್ದರಿಂದ ಸಾಮಾನ್ಯವಾಗಿ ಕಾನ್ವೆಂಟ್ ಮಕ್ಕಳು ಉಪಾಧ್ಯಾಯರು ಬರೆಸಿದ ಪ್ರಶ್ನೆ ಉತ್ತರಗಳನ್ನು ಗಿಳಿ ಪಾಠ ಒಪ್ಪಿಸುತ್ತಾರೆ. ಅದೇ ಕನ್ನಡ ಶಾಲೆಯಲ್ಲಿ ಓದುವ ಮಗುವಿಗೆ



ಲೇಖಕರು ಈ ಲೇಖನದ ಮೂರನೆಯ ಪ್ಯಾರಾದಲ್ಲಿ ಬೆಳಗಾವಿಯ ಬಗ್ಗೆ ಹೇಳಿದ ಮಾತುಗಳನ್ನು, ಅವು ಓದುಗರಲ್ಲಿ ಅಪಾರ್ಥಕ್ಕೆಡೆಗೊಡಬಹುದಾದ್ದರಿಂದ ತುಸು ವಿವರಣೆ ಅಗತ್ಯವೆನಿಸುತ್ತದೆ. "ಬೆಳಗಾವಿಯನ್ನು ಹಿಂದಿನಿಂದ ನಮ್ಮ ರಾಜರುಗಳು ಆಳಿದರು, ಅದು ನಮ್ಮ ನೆಲ ನಿಜ. ಆದರೆ ಅಲ್ಲಿಯ ಜನ ನಾವು ಕನ್ನಡಿಗರಲ್ಲ ಎಂದಿದ್ದಾರೆ. (ಮಹಾರಾಷ್ಟ್ರ ಏಕೀಕರಣ ಸಮಿತಿಗೆ ಹೆಚ್ಚು ಸ್ಥಾನಗಳು ಬಂದಿವೆ.) ಆದ್ದರಿಂದ ಆ ನೆಲವನ್ನು ನಾವು ಹಿಡಿದಿಟ್ಟುಕೊಳ್ಳಬೇಕಿದ್ದರೆ ಅದರಿಂದ ಕರ್ನಾಟಕಕ್ಕೆ ಇರುವ ಆದಾಯವನ್ನು ಗಣನೆಗೆ ತೆಗೆದುಕೊಳ್ಳಬೇಕು" ಮುಂತಾಗಿ ಬರೆದಿದ್ದಾರೆ. ಶ್ರೀಯುತರಿಗೆ ಬೆಳಗಾವಿ ಸಮಸ್ಯೆ ಅರ್ಥವೇ ಆಗಿಲ್ಲವೆಂದು ಹೇಳಬೇಕಾಗುತ್ತದೆ. ಹಿಂದೆ ಯಾರೋ ನಮ್ಮ ರಾಜರು ಈ ನಗರವನ್ನು ಆಳಿದ್ದರೆಂಬ ಕಾರಣಕ್ಕಾಗಿ ಅದು ಕನ್ನಡ ನೆಲವೆಂದು ಯಾರೂ ಹೇಳುವುದಿಲ್ಲ. ಆ ನಗರದಲ್ಲಿ ಮರಾಠಿಯ ಪ್ರಭಾವ ಹೆಚ್ಚಿದ್ದು ಈ ಶತಮಾನದ ಪ್ರಾರಂಭಕ್ಕಿಂತ ತುಸು ಮುಂಚಿನಿಂದ ಅದೂ ಆಗಿನ ಮುಂಬಯಿ ರಾಜ್ಯದಲ್ಲಿ ಹಿರಿಯ ಅಧಿಕಾರಿಗಳಾಗಿರುತ್ತಿದ್ದ ಮರಾಠಿಗರು ಬಂದು ಇಲ್ಲಿ ನೆಲಸಲು ಆರಂಭಿಸಿದಾಗಿನಿಂದ; ನಂತರ ಹೊಟ್ಟೆ ಹೊರೆಯಲು ಕೊಂಕಣದಿಂದ ಜನ ಇಲ್ಲಿಯೇ ತಳವೂರಿದ್ದರಿಂದ ಈ ನಗರದ ಮೂಲ ನಿವಾಸಿಗಳೆಲ್ಲ ಕನ್ನಡಿಗರು. ಆದರೆ ದುರ್ದೈವದಿಂದ ಈ ಜನಗಳಲ್ಲಿ ಕನ್ನಡದ ಪ್ರಜ್ಞೆಯಿಲ್ಲ. ಇಂಥವರು ಚಲಾಯಿಸುವ ಮತಗಳಿಂದಲೇ ಮಾ. ಏ. ಸಮಿತಿಯ ಸದಸ್ಯರು ಆರಿಸಿ ಬರುತ್ತಿದ್ದಾರೆಯೇ ಹೊರತು, ಅದಕ್ಕಿಂತ ಹೆಚ್ಚಿನ ಮಹತ್ವವನ್ನು ಅದಕ್ಕೆ ಕೊಡುವುದು ಅನಾವಶ್ಯಕ. —ಸಂಪಾದಕ

ಕೇವಲ ಲಿಪಿ ಕಲಿಯುವ ಅವಶ್ಯಕತೆಯಿದೆ. ಅದ್ದರಿಂದ ಅದಕ್ಕೆ ಕಲಿಯುವುದು ಸುಲಭ. ಆದ್ದರಿಂದ, ಮಕ್ಕಳನ್ನು ಕಾನ್ವೆಂಟಿಗೆ ಸೇರಿಸುವುದರಿಂದ ಇಂಗ್ಲಿಷು ಮತ್ತು ಉಳಿದ ವಿಷಯಗಳನ್ನು (ಇಂಗ್ಲಿಷ್ ಮಾಧ್ಯಮದಲ್ಲಿ) ಒಟ್ಟಿಗೆ ಕಲಿಯುವ ತೊಂದರೆಗೆ ಸಿಕ್ಕಿ ಅವುಗಳ ಬುದ್ಧಿ ಕುಂಠಿತವಾಗಬಹುದು. ಆದ್ದರಿಂದ ಕಾನ್ವೆಂಟಿನ ಮಕ್ಕಳು ಹೆಚ್ಚು ಬುದ್ಧಿವಂತರು ಎನ್ನುವುದು ತಪ್ಪು.

ನಾಲ್ಕನೆಯ ಕಾರಣಕ್ಕೆ ಬರೋಣ. ಶಿಸ್ತಿನ ಬಗ್ಗೆ ಇರುವ ತಪ್ಪು ಕಲ್ಪನೆಯೆ ಇದಕ್ಕೆ ಕಾರಣ. ಶಿಸ್ತು ಎಂದರೆ ಒಳ್ಳೆ ಬಟ್ಟೆ ಧರಿಸಿ ಬೂಟು ಹಾಕಿಕೊಂಡು ಮಣಗಾತ್ರದ ಪುಸ್ತಕ ಚೀಲವನ್ನು ಹೊರುತ್ತಾ ಹೋಗುವುದಲ್ಲ. ಮಕ್ಕಳು ಪೋಲಿ ಬೀಳದಿದ್ದರೆ ಸಾಕು ತಾನೆ? ಮಕ್ಕಳು ಪೋಲಿ ಬೀಳುವುದಕ್ಕೆ ಕಾರಣ ಸಹವಾಸ ಹಾಗೂ ಮನೆಯ ವಾತಾವರಣ. ಆದ್ದರಿಂದ ಇದಕ್ಕೆ ಕನ್ನಡ ಶಾಲೆ ಅಥವಾ ಕಾನ್ವೆಂಟ್ ಕಾರಣವಲ್ಲ.

ಇನ್ನು ಕನ್ನಡಿಗರು ಮುಖ್ಯವಾಗಿ ಮಾಡಬೇಕಾಗಿರುವುದು ಏನು?

ಕರ್ನಾಟಕದಲ್ಲಿ ಹುಟ್ಟು ಕನ್ನಡಿಗರಿಗೇ ಕೆಲಸಗಳನ್ನು ಮೀಸಲಾಗಿಡಬೇಕು. ಇಲ್ಲವಾದರೆ ಈ ಚುನಾವಣೆಯಲ್ಲಿ ಕನ್ನಡಿಗರ ಮತಗಳು ನಿಮಗೆ ಸಿಗುವುದಿಲ್ಲ ಎಂದು ಆಳುವ ಹಾಗೂ ವಿರೋಧ ಪಕ್ಷಗಳಿಗೆ ಸ್ಪಷ್ಟವಾಗಿ ತಿಳಿಸಬೇಕು.

ಪ್ರತಿ ಕಾರ್ಖಾನೆಯಲ್ಲಿ ಕನ್ನಡಿಗರು ಪ್ರತ್ಯೇಕ ಯೂನಿಯನ್ ಮಾಡಿಕೊಳ್ಳಬೇಕು. ಕನ್ನಡಿಗರಿಗೆ ಕೆಲಸ ಕೊಡಿ ಎಂದು ಆಡಳಿತ ವರ್ಗದ ಮೇಲೆ ಒತ್ತಾಯ ತರಬೇಕು.

ಕನ್ನಡೇತರ ಚಿತ್ರಗಳಿಗೆ ಬಹಿಷ್ಕಾರ ಇವೇ ಮುಂತಾದ ಕ್ರಮಗಳನ್ನು ಕೈಕೊಳ್ಳಬೇಕು. ಈ ಕನ್ನಡ ಹೋರಾಟಕ್ಕಾಗಿ ಸಂಘಟನೆಯ ಅವಶ್ಯಕತೆ ಇದೆ. ಇದಕ್ಕಾಗಿ ಒಂದು ಶಾಶ್ವತ ಸಂಘ ಬೇಕಾಗಿದೆ. ಸಂಘದ ಅಧ್ಯಕ್ಷತೆ ವಹಿಸುವವರು ಕನ್ನಡಿಗರಿಗೆ ಕನ್ನಡೇತರರಿಂದ ಆಗುತ್ತಿರುವ ಅನ್ಯಾಯದ ವಿಚಾರ ಬಿಟ್ಟು ಬೇರೆ ವಿಷಯಗಳಲ್ಲಿ ತಲೆ ಹಾಕಬಾರದು. ★

## ಮುಂಬಯಿ ನಗರದ
## ಮೂರ್ತಿಮಂತ ಸಜ್ಜನ ಕನ್ನಡಿಗ

# ಆರ್. ವಿ. ಮೂರ್ತಿ

**ವಸಂತ ಕಲಕೋಟಿ**

ಸರಳತೆ, ಸೌಜನ್ಯ, ಪ್ರಾಮಾಣಿಕತೆ, ವಿದ್ವತ್ತು ಈ ಎಲ್ಲ ಗುಣಗಳೂ ಒಂದೇ ವ್ಯಕ್ತಿಯಲ್ಲಿ ಕಂಡು ಬರುವದು ತುಂಬ ವಿರಳ. ಆದರೆ ಮುಂಬಯಿಯ ಆರ್. ವೆಂಕಟೇಶ ಮೂರ್ತಿ ಅವರು ಈ ಎಲ್ಲ ಗುಣ ಗಳನು, ಒಳ್ಳೆಯತನದೊಂದಿಗೆ ಬೆರೆಸಿಕೊಂಡು ಅಜಾತಶತ್ರುವಾಗಿ ಜೀವನ ನಡೆಸಿಕೊಂಡು ಬಂದಿದ್ದಾರೆ. ಮೂರ್ತಿಯವರ ಹೆಸರು ಹಾಗೂ ವ್ಯಕ್ತಿತ್ವ ಇಲ್ಲಿಯ ಕನ್ನಡಿಗರಲ್ಲಿ, ಸಂಘ ಸಂಸ್ಥೆಗಳಲ್ಲಿ ಮತ್ತು ಇಂಗ್ಲಿಷ್ ಪತ್ರಿಕಾ ವಲಯಗಳಲ್ಲಿ ತುಂಬ ಪರಿಚಿತ.




ಐದಡಿಗಿಂತ ಒಂದೆರಡು ಇಂಚು ಎತ್ತರ, ಕಪ್ಪೂ ಅಲ್ಲ ಬಿಳಿಯೂ ಅಲ್ಲ ಅನ್ನುವಂಥ ಮೈ ಬಣ್ಣ, ಶುಭ್ರ ಧೋತರ ಅದಕ್ಕೆ ತಕ್ಕ ಬಿಳಿ ನೆಹರೂ ಶರ್ಟು ಯಾವಾಗಲೂ ಮಂದಸ್ಮಿತ ಮುಖ, ಅವರ ಸರಳತೆ ಸೌಜನ್ಯ ಹಾಗೂ ಪ್ರಾಮಾಣಿಕತೆಯ ಸಂಕೇತ. ಮುಂಬಯಿಯ, ಸಾಹಿತ್ಯ ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ವಲಯಗಳಲ್ಲಿ ಆರ್. ವಿ. ಮೂರ್ತಿಯವರ ಸಾಧನೋತ ಕರ್ತೃತ್ವ ಶಕ್ತಿ, ಪರಿಶ್ರಮ ಹಿರಿದು.

೭೫ ವರುಷಗಳ ಸಾರ್ಥಕ ಜೀವನವನ್ನು ಪೂರ್ತಿಗೊಳಿಸುತ್ತಿರುವ ಮೂರ್ತಿಯವರು ಮಿತಭಾಷಿ, ಹಿಡಿದ ಕಾರ್ಯವನ್ನು ಮುಗಿಯುವವರೆಗೆ ಬಿಡುವವರಲ್ಲ. ಕನ್ನಡ ಭಾಷೆ, ಸಂಸ್ಕೃತಿ–ಶಿಕ್ಷಣ ವ್ಯವಸ್ಥೆಗಳು ಈ ಮಹಾನಗರದಲ್ಲಿ ಉಳಿದು ಬೆಳೆಯುವಂತೆ ಮಾಡುವಲ್ಲಿ ಮೂರ್ತಿಯವರ ಸಾಹಸ ಮೆಚ್ಚುವಂತಹದು.

ಬೆಂಗಳೂರು ಜಿಲ್ಲೆಯವರಾದ ಮೂರ್ತಿಯವರು ಅರ್ಥಶಾಸ್ತ್ರ ಮತ್ತು ರಾಜಕೀಯ ವಿಜ್ಞಾನ ವಿಷಯಗಳೊಂದಿಗೆ ಮದ್ರಾಸು ವಿಶ್ವವಿದ್ಯಾಲಯದಿಂದ ಪದವೀಧರರಾಗಿ ಮುಂದೆ ಇಂಗ್ಲಿಷ್ ವಿಷಯ ತೆಗೆದುಕೊಂಡು ಎಂ.ಎ. ಪಾಸು ಮಾಡಿಕೊಂಡರು. ಅವರು ಜೀವನ ಆರಂಭಿಸಿದುದು ಒಂದು ಪ್ರೌಢ ಶಾಲೆಯ ಶಿಕ್ಷಕರಾಗಿ. ನಂತರ ಹಳೆಯ ಮೈಸೂರು ರಾಜ್ಯದಲ್ಲಿ ಅನೇಕ ಕ್ಷೇತ್ರಗಳಲ್ಲಿ ಅವರು ಸೇವೆ ಸಲ್ಲಿಸಿದರು. ಮೋಕ್ಷಗುಂಡಂ ವಿಶ್ವೇಶ್ವರಯ್ಯನವರ ಹುಟ್ಟೂರಿನ ಶಾಲೆಯಲ್ಲಿ ಶಿಕ್ಷಕರಾಗಿ ಕೆಲ ಸಮಯ

ಕೆಲಸ ಮಾಡಿದ ಮೂರ್ತಿಯವರಿಗೆ ಅವರ ಬಗೆಗೆ ವಿಶೇಷ ಆದರ, ಗೌರವ ಅಭಿಮಾನ, ತಮ್ಮ ಕುಟುಂಬದಲ್ಲಿ ಒಬ್ಬರು ಬಿ. ಕಾಂ. ಪರೀಕ್ಷೆ ಮಾಡಿ ತಾನೇ ಶ್ರೇಷ್ಠ ಎಂದು ತನ್ನ ಪ್ರತಿಷ್ಠೆಯನ್ನು ಪ್ರದರ್ಶಿಸುತ್ತಿದ್ದರಂತೆ. ಮೂರ್ತಿಯವರು ಚಿಕ್ಕವರಿರುವಾಗ ತಾನೂ ಬಿ. ಕಾಂ. ಪಾಸು ಮಾಡಿಕೊಳ್ಳಬೇಕೆಂಬ ಆಶೆಯುಳ್ಳವರಾಗಿದ್ದರಂತೆ. ಅಂತೆಯೇ ಮದುವೆಯಾದ ನಂತರವೂ, ಮುಂಬಯಿಗೆ ಬಂದು ಇಲ್ಲಿಯ ಸಿಡೆನ್‌ಹ್ಯಾಂ ಕಾಲೇಜಿನಿಂದ ಬಿ. ಕಾಂ. ಪರೀಕ್ಷೆಯನ್ನು ಉತ್ತಮ ತರಗತಿಯಲ್ಲಿ ಪಾಸಾದರು.

ಮೂರ್ತಿಯವರು ಪತ್ರಿಕಾ ರಂಗ ಸೇರಿದುದೂ ಒಂದು ಆಕಸ್ಮಿಕವೆ ಎನ್ನಬಹುದು. 'ಕಾಮರ್ಸ್' ಭಾರತದಲ್ಲಿ ಆರ್ಥಿಕ ಹಾಗೂ ಔದ್ಯೋಗಿಕ ಕ್ಷೇತ್ರಗಳಲ್ಲಿ ಉತ್ತಮ ಪತ್ರಿಕೆಯೆಂದು ಹೆಸರು ಪಡೆದಿದೆ. ಅದರಲ್ಲಿ ಮೂರ್ತಿಯವರು ಉಪಸಂಪಾದಕರಾಗಿ ಕೆಲಸಕ್ಕೆ ಸೇರಿಕೊಂಡರು. ಭಾರತಕ್ಕೆ ಸ್ವಾತಂತ್ರ್ಯ ದೊರಕುವ ಮೊದಲು ಈ ಪ್ರತಿಷ್ಠಿತ ಪತ್ರಿಕೆಗೆ ಸಂಪಾದಕರು ಇಂಗ್ಲೆಂಡಿನವರು. ತಮ್ಮ ಕರ್ತೃತ್ವ ಶಕ್ತಿ, ವಿಚಾರಪೂರ್ಣ ಲೇಖನ, ಅರ್ಥಶಾಸ್ತ್ರದಲ್ಲಿ ಆಳವಾದ ಅಧ್ಯಯನದಿಂದಾಗಿ ಮೂರ್ತಿಯವರು ಕ್ರಮೇಣ ಸಹಾಯಕ ಸಂಪಾದಕರಾಗಿ, ನಂತರ ಸಂಪಾದಕರಾಗಿ ಕಾರ್ಯ ನಿರ್ವಹಿಸಿದರು. 'ಕಾಮರ್ಸ್' ಪತ್ರಿಕೆಗೆ ಸಂಪಾದಕರಾಗಿ ಗುರುತರ ಕಾರ್ಯಭಾರ ವಹಿಸಿದ ಭಾರತೀಯರಲ್ಲಿ ಮೂರ್ತಿಯವರು ಮೊದಲಿಗರು. ಮುಂದೆ 'ಭಾರತ' ಎಂಬ ಇಂಗ್ಲಿಷ್ ಪತ್ರಿಕೆಯ ಪ್ರಧಾನ ಸಂಪಾದಕರಾಗಿಯೂ ಕೆಲ ವರುಷ ಸೇವೆ ಸಲ್ಲಿಸಿದರು. ತಮ್ಮ ಕಾರ್ಯಕ್ಷೇತ್ರವನ್ನು ವಿಶಾಲಗೊಳಿಸುವ ಉದ್ದೇಶದಿಂದ ಇಂಗ್ಲೆಂಡಿನ 'ಈಸ್ಟರ್ನ್ ಎಕನಾಮಿಸ್ಟ್' ಪತ್ರಿಕೆಯ, ದಿಲ್ಲಿಯ 'ಹಿಂದುಸ್ತಾನ ಟಾಯಿಮ್ಸ್' ಪತ್ರಿಕೆಯ ಮುಂಬಯಿ ಪ್ರತಿನಿಧಿಯಾಗಿ ಹಲವು ವರುಷ ಕಾರ್ಯ ಮಾಡಿದರು. ಭಾರತದ ಆರ್ಥಿಕ ಔದ್ಯೋಗಿಕ ವಿಕಾಸದ ಬಗೆಗೆ ಮೂರ್ತಿಯವರು ಬರೆದು ಪ್ರಕಟಿಸಿದ ಅನೇಕ ವಿದ್ವತ್ಪೂರ್ಣ ಲೇಖನಗಳು ಇಂದಿಗೂ ಮಹತ್ವಪೂರ್ಣ. 'ಕಾಟನ್ ಆ್ಯಂಡ್ ಟೆಕ್ಸ್‌ಟೈಲ್ ಮಾರ್ಕೆಟ್' ಈ ವಿಶೇಷ ವಾರ್ಷಿಕ ಪತ್ರಿಕೆಯಲ್ಲಿ ಹತ್ತಿ–ಅರಳೆ ಬೆಳೆಯ ಬಗೆಗೆ ಉದ್ದಿಮೆಯ ಬಗೆಗೆ ಅಧ್ಯಯನ ಮಾಡಿ ಒಂದು ವಿಭಾಗದ ಸಂಪಾದಕರಾಗಿ ಕೆಲಸ ಮಾಡಿದರು. ಮುಂಬಯಿಯ ಪ್ರತಿಷ್ಠೆಯ ಸಂಸ್ಥೆಯಾದ ಪ್ರೆಸ್ ಗಿಲ್ಡ್ ಆಫ್ ಇಂಡಿಯಾದಲ್ಲಿ ಪ್ರಮುಖ ಸದಸ್ಯರಾಗಿ ನಂತರ ಉಪಾಧ್ಯಕ್ಷರಾಗಿ ಕೆಲಸ ಮಾಡಿದರು. ಅವರ ಕಾರ್ಯಕ್ಷೇತ್ರ ಇಷ್ಟಕ್ಕೆ ಸೀಮಿತಗೊಳ್ಳದೇ, ಫಿನಾನ್ಶಿಯಲ್ ಜರ್ನಲಿಸ್ಟ್ಸ ಅಸೋಸಿಯೇಶನ್ ಆಫ್ ವರ್ಲ್ಡ್ ಅಫೇರ್ಸ್ ಸಂಸ್ಥೆಯ ಉಪಾಧ್ಯಕ್ಷರಾಗಿ ಸಹ ನಿಷ್ಠೆಯಿಂದ ಕೆಲಸ ನಿರ್ವಹಿಸಿದರು.

ಕನ್ನಡ ಶಿಕ್ಷಣ ಕ್ಷೇತ್ರದಲ್ಲಿ ಅವರು ಮಾಡಿದ ಕೆಲಸ ಉಲ್ಲೇಖನೀಯ. ಮುಂಬಯಿ ಕನ್ನಡ ಸಂಘದೊಂದಿಗೆ ಘನಿಷ್ಠ ಸಂಬಂಧ ಹೊಂದಿದ ಮೂರ್ತಿಯವರು, ೧೯೪೪ರಲ್ಲಿ ಮಾತುಂಗದಲ್ಲಿ ಒಂದು ಕನ್ನಡ ಮಾಧ್ಯಮ ಶಾಲೆ ಆರಂಭ ಮಾಡಬೇಕೆಂಬ ಉದ್ದೇಶದಿಂದ ಮುಂಬಯಿಯ ಖ್ಯಾತ ಕನ್ನಡಿಗರೂ ನ್ಯಾಯವಾದಿಗಳೂ ಆಗಿದ್ದ, ಬಿ. ನಾರಾಯಣಸ್ವಾಮಿ ಹಾಗೂ ಇತರರ ನೆರವಿನಿಂದ ರಾಷ್ಟ್ರೀಯ ಕನ್ನಡ ಶಾಲೆಯನ್ನು ಆರಂಭಿಸಿದರು. "ಬಿ. ನಾರಾಯಣಸ್ವಾಮಿಯವರಿಗೆ ಮತ್ತು ನನಗೆ ಮಕ್ಕಳು ಬಹಳ. ಅಂತೆಯೇ ಆ ಮಕ್ಕಳಿಗೆ ಶಿಕ್ಷಣ ನೀಡುವ ಸೌಕರ್ಯ ಕಲ್ಪಿಸಲು ನಾವೇ ಒಂದು ಕನ್ನಡ ಮಾಧ್ಯಮ ಶಾಲೆ ಆರಂಭಿಸಿದೆವು" ಎಂದು ವಿನೋದವಾಗಿ ನುಡಿಯುತ್ತಾರೆ ಅವರು. ಮಾತುಂಗದ ಒಂದು ಚಿಕ್ಕ ಕೋಣೆಯಲ್ಲಿ ಮೂರ್ತಿ ಮತ್ತು ಬಿ. ನಾರಾಯಣಸ್ವಾಮಿಗಳ ಮಕ್ಕಳೇ ವಿದ್ಯಾರ್ಥಿಗಳಾಗಿ ಆರಂಭಗೊಂಡ, ನ್ಯಾಶನಲ್ ಕನ್ನಡ ಎಜುಕೇಶನ್ ಸೊಸಾಯಿಟಿಯ ರಾಷ್ಟ್ರೀಯ ಕನ್ನಡ ಶಾಲೆ ಇಂದು ವಡಾಳಾದಲ್ಲಿ ತನ್ನದೇ ಆದ ಕಟ್ಟಡ ಹೊಂದಿದೆ. ಪೂರ್ವ–ಪ್ರಾಥಮಿಕ, ಪ್ರಾಥಮಿಕ, ಮಾಧ್ಯಮಿಕ, ಹಾಗೂ ಜೂನಿಯರ್ ಕಾಲೇಜು ವಿಭಾಗಗಳಲ್ಲಿ ಸುಮಾರು ಎರಡು ಸಾವಿರಕ್ಕೂ ಮಿಕ್ಕಿ ವಿದ್ಯಾ

ರ್ಥಿಗಳು ಕನ್ನಡ, ಮತ್ತು ಇಂಗ್ಲಿಷ್ ಮಾಧ್ಯಮಕ್ಕಳಲ್ಲಿ ಶಿಕ್ಷಣ ಪಡೆಯುತ್ತಿದ್ದಾರೆ. ನೂರಕ್ಕೂ ಮಿಕ್ಕಿ ಶಿಕ್ಷಕರು ಇಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಮುಂಬಯಿಯ ಕನ್ನಡ ಸಂಘ ಸಂಸ್ಥೆಗಳಲ್ಲಿ ವಿಶೇಷವಾಗಿ ಶಿಕ್ಷಣ ಕ್ಷೇತ್ರದಲ್ಲಿ ತನ್ನದೇ ಆದ ಭವ್ಯ ಕಟ್ಟಡವನ್ನು ಪ್ರಪ್ರಥಮವಾಗಿ ಪಡೆದ ಕೀರ್ತಿ ಈ ರಾಷ್ಟ್ರೀಯ ಕನ್ನಡ ಶಾಲೆಗೆ ಸಲ್ಲುತ್ತದೆ. ಜಕ್ಕಣಾಚಾರ್ಯರ ಶಿಲ್ಪ ಶೈಲಿಯಲ್ಲಿ ಈ ಕಟ್ಟಡದ ಗೋಪುರ ಹಾಗೂ ಹೊರ ಭಾಗಗಳು ರಚಿತವಾಗಿವೆ. ಮಾತುಂಗಾ–ವಡಾಳಾ ವಿಭಾಗದಲ್ಲಿರುವ ಈ ಶಾಲೆಯ ಕಟ್ಟಡ ಮುಂಬಯಿ ಮಹಾನಗರದ ಕೇಂದ್ರ ಪ್ರದೇಶದಲ್ಲಿದ್ದು ಇಂದು ಅದರ ಬೆಲೆ ಒಂದು ಕೋಟಿಯಷ್ಟಾಗಬಹುದು. ರಾಷ್ಟ್ರೀಯ ಕನ್ನಡ ಶಿಕ್ಷಣ ಸಮಿತಿಯ ಸ್ಥಾಪಕ ಸದಸ್ಯರಲ್ಲೊಬ್ಬರಾದ ಮೂರ್ತಿಯವರು ಕಳೆದ ಇಪ್ಪತ್ತೈದು ವರುಷಗಳಿಂದ ಸಂಸ್ಥೆಯ ಗೌರವ ಕಾರ್ಯದರ್ಶಿಗಳಾಗಿ, ಅಧ್ಯಕ್ಷರಾಗಿ ತುಂಬ ದಕ್ಷತೆಯಿಂದ ಕಾರ್ಯ ನಿರ್ವಹಿಸಿದ್ದಾರೆ. ಕನ್ನಡ ಶಾಲೆಯ ಅದ್ಭುತ ಪ್ರಗತಿಯಲ್ಲಿ ಮೂರ್ತಿಯವರ ಕಾರ್ಯಕ್ಷಮತೆ ಪರಿಶ್ರಮ ಎದ್ದು ಕಾಣುವಂತಹುದು. ಮುಂಬಯಿ ಮಹಾನಗರವು ಕಾಸ್ಮಾಪಾಲಿಟನ್ ಕೇಂದ್ರ. ಇಲ್ಲಿ ಇಂಗ್ಲಿಷ್, ಮರಾಠಿ, ಹಿಂದಿ, ಗುಜರಾತಿ– ಭಾಷೆಗಳ ಪ್ರಭಾವ, ಒತ್ತಡ ಹೆಚ್ಚು. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಮೂರ್ತಿಯವರ ನೇತೃತ್ವದಲ್ಲಿ ಇಲ್ಲಿಯ ಕನ್ನಡಿಗರು ಕನ್ನಡ ಮಾಧ್ಯಮ ಶಾಲೆಯನ್ನು ಆರಂಭಿಸಿ ಇಷ್ಟು ವಿಶಾಲವಾಗಿ ಬೆಳೆಸಿಕೊಂಡು ಬಂದಿರುವದು ವಿಶೇಷ ಮತ್ತು ಅಭಿನಂದನೀಯ. ಇಲ್ಲಿಯ ಇಂಗ್ಲಿಷ್ ಮಾಧ್ಯಮದ ವಿದ್ಯಾರ್ಥಿಗಳು ಕನ್ನಡ ವಿಷಯವನ್ನು ಕಡ್ಡಾಯವಾಗಿ ಕಲಿಯಲೇಬೇಕೆಂಬ ನಿಯಮ ಮಾಡಿದುದು ಮೂರ್ತಿಯವರ ಕನ್ನಡ ಭಾಷೆಯ ಅಭಿಮಾನವನ್ನು ಸೂಚಿಸುತ್ತದೆ. ಸಾಯನ್‌ನಲ್ಲಿರುವ ಸೌಥ್ ಇಂಡಿಯನ್ ಎಜುಕೇಶನ್ ಸೊಸಾಯಿಟಿಯು ನಡೆಸುತ್ತಿರುವ ಕಲೆ– ವಿಜ್ಞಾನ– ವಾಣಿಜ್ಯ ಕಾಲೇಜುಗಳ ಆಡಳಿತ ಮಂಡಳಿಯ ಪ್ರಮುಖ ಸದಸ್ಯರಾಗಿ ಅನೇಕ ವರುಷಗಳಿಂದ ಮೂರ್ತಿ ಸೇವೆ ಸಲ್ಲಿಸುತ್ತಿದ್ದಾರೆ. ಈ ಕಾಲೇಜಿನಲ್ಲಿ ಕನ್ನಡ ವಿಷಯ ಕಲಿಸಲು ಸೌಕರ್ಯ ಕಲ್ಪಿಸಿಕೊಡುವಲ್ಲಿ ಮೂರ್ತಿಯವರು ಪಾತ್ರ ಹಿರಿದು. ಆದರೆ ಕನ್ನಡ ವಿಷಯ ಅಧ್ಯಯನ ಮಾಡಲು ಮುಂದೆ ಬರುವ ಕನ್ನಡ ವಿದ್ಯಾರ್ಥಿಗಳ ಕೊರತೆಯಿಂದಲೋ ಅಥವಾ ಸಂಸ್ಥೆಯ ರಾಜಕಾರಣದಿಂದಲೋ ಈಗ ಕೆಲವು ವರುಷಗಳಿಂದ ಈ ಕಾಲೇಜಿನಲ್ಲಿ ಕನ್ನಡ ಕಲಿಸುವಿಕೆ ನಿಂತು ಹೋಗಿದೆ. ಕನ್ನಡ ಭಾಷಾಭಿಮಾನಿಗಳಾದ ಮೂರ್ತಿಯವರಿಗೆ ಈ ವಿಷಯ ಅಸಮಾಧಾನವನ್ನು ಉಂಟು ಮಾಡಿದೆ. ಮಾತುಂಗದಲ್ಲಿರುವ






ಷಣ್ಮುಖಾನಂದ ಸಂಸ್ಥೆಯ ವಿಶ್ವಸ್ತ ಮಂಡಲಿಯ ಸದಸ್ಯರಾಗಿದ್ದಾರೆ. ಇಂಡಿಯನ್ ಕಾನ್ಸರ್ ಸೊಸ್ಯಾಟಿಯ ಸಕ್ರಿಯ ಸದಸ್ಯರೂ ಅಹುದು. ಫೋರಮ್ ಆಫ್ ಫ್ರೀ ಎಂಟರ್‌ಪ್ರೈಸ್ ಸಂಸ್ಥೆಯ ಗೌರವ ಕೋಶಾಧಿಕಾರಿಗಳಾಗಿಯೂ ಮೂರ್ತಿಯವರು ಕಾರ್ಯ ಮಾಡುತ್ತಿದ್ದಾರೆ.

ಮೂರ್ತಿಯವರ ವ್ಯಕ್ತಿತ್ವಕ್ಕೆ ಸಮಾಜ ಜೀವನಕ್ಕೆ ಅವರ ಧರ್ಮ ನಿಷ್ಠೆ, ಸಾತ್ವಿಕತೆ ಗುರುಹಿರಿಯರಲ್ಲಿ ಅವರಿಗಿರುವ ಪೂಜ್ಯ ಭಾವನೆ ಬೆನ್ನೆಲುಬಾಗಿವೆ. ಸಮಾಜದ ಹಲವು ಕ್ಷೇತ್ರಗಳಲ್ಲಿ ದುಡಿಯುತ್ತಿದ್ದರೂ ಸಮಯದ ಅಭಾವದಲ್ಲಿಯೂ ಅವರು ಧರ್ಮನಿಷ್ಠೆಯ ಆಚರಣೆಯನ್ನು ಬಿಟ್ಟುಕೊಟ್ಟಿಲ್ಲ. ಕಳೆದ ನಲವತ್ತು ವರುಷಗಳಿಂದ ಮೂರ್ತಿಯವರು ಪಂಡಿತ ಮಾಹುಲಿ ಗೋಪಾಲಾಚಾರ್ಯರ ಪ್ರಮುಖ ಶಿಷ್ಯರಾಗಿ ಅನುಪಮ ನಿಷ್ಠೆ ಅಸದೃಶ ವಿಶ್ವಾಸವುಳ್ಳವರಾಗಿದ್ದಾರೆ. ಶ್ರೀ ಸತ್ಯಧ್ಯಾನ ತೀರ್ಥ ಸ್ವಾಮಿಗಳು ಮುಂಬಯಿಗೆ ಬಂದಾಗಿನಿಂದ ಅವರ ಸನ್ನಿಧಿಯಲ್ಲಿದ್ದ ಪಂಡಿತ ಗೋಪಾಚಾರ್ಯರ ವಿದ್ವತ್ತು ಪಾಂಡಿತ್ಯಗಳನ್ನು ಅರಿತುಕೊಂಡವರು. ಪಾಠ ಪ್ರವಚನಗಳಿಗೆ ತಪ್ಪದೇ ಬರುವಂಥವರು. ಸಾತ್ವಿಕರು, ಸದಾಚಾರಿಗಳು, ಎಲ್ಲ ಧಾರ್ಮಿಕ ಕಾರ್ಯಗಳಲ್ಲಿ ಮೂರ್ತಿಯವರ ಸಹಧರ್ಮಿಣಿ ಸೌ. ಸರೋಜಾ ಮೂರ್ತಿಯವರು ತಮ್ಮ ಪತಿಯೊಂದಿಗೆ ಯಾವಾಗಲೂ ಮುಂದು. ಪಾಣೀ ವಿಹಾರ ವಿದ್ಯಾರ್ಥಿಗಳ ಮೇಲೆ ಮೂರ್ತಿ ದಂಪತಿಗಳಿಗೆ ತುಂಬ ಮಮತೆ, ಅಂತಃಕರಣ. ಹಲವು ಸಲ, ಮೂರ್ತಿಯವರು ಯುರೋಪ್, ಅಮೇರಿಕ ಹೀಗೆ ವಿದೇಶ ಸಂಚಾರ ಮಾಡಿ ಬಂದರೂ ಪೂಜೆ, ಪುನಸ್ಕಾರ, ಶ್ರದ್ಧೆಯಲ್ಲಿ ಎಳ್ಳಷ್ಟು ಲೋಪವಾಗಿಲ್ಲ. ಸತ್ಯಧ್ಯಾನ ವಿದ್ಯಾಪೀಠ ವಿಶ್ವಸ್ತ ಮಂಡಲಿಯ ಸದಸ್ಯರಾಗಿ ಮೂರ್ತಿಯವರು ವಿದ್ಯಾಪೀಠದ ಪ್ರಗತಿಗೆ ಸಾಕಷ್ಟು ಪರಿಶ್ರಮಪಟ್ಟಿದ್ದಾರೆ.

ಮುಂಬಯಿಯಲ್ಲಿ ಯಾವದೇ ಕನ್ನಡ ಸಾಹಿತ್ಯಕ, ಸಾಂಸ್ಕೃತಿಕ, ಶೈಕ್ಷಣಿಕ ಧಾರ್ಮಿಕ ಕ್ರಮವು ಮೂರ್ತಿಯವರ ಅನುಪಸ್ಥಿತಿಯಲ್ಲಿ ಜರುಗುದಿಲ್ಲವೆಂದರೆ ಅತಿಶಯೋಕ್ತಿಯಲ್ಲ. ಸುಮಾರು ಐವತ್ತಕ್ಕೂ ಮಿಕ್ಕಿ ಕನ್ನಡ ಸಂಘ ಸಂಸ್ಥೆಗಳೊಂದಿಗೆ ಅವರು ಘನಿಷ್ಠ ಸಂಬಂಧವನ್ನು ಉಳಿಸಿಕೊಂಡಿದ್ದಾರೆ. ೧೯೫೬ರಲ್ಲಿ ಕರ್ನಾಟಕ ರಾಜ್ಯವಾದ ನಂತರ, ಹಳೆಯ ಮೈಸೂರು, ಉತ್ತರ ಕರ್ನಾಟಕ, ಹೈದರಾಬಾದ ಕರ್ನಾಟಕ, ಕೊಡಗು ಹೀಗೆ ಎಲ್ಲ ಪ್ರದೇಶಗಳು ಒಂದಾಗಿ ಕರ್ನಾಟಕ ರಾಜ್ಯವಾದರೂ, ಇನ್ನೂ ಅನೇಕ ಹಳೆಯ ಮೈಸೂರು ಪ್ರಭೃತಿಗಳು ತಮ್ಮ ಮನಸ್ಸು, ಸಂಬಂಧಗಳನ್ನು ವಿಶಾಲಗೊಳಿಸಿಲ್ಲ. ಆದರೆ, ಮೂರ್ತಿಯವರು ಮುಂಬಯಿಗೆ ಬಂದಾಗಿನಿಂದ ಅಖಂಡ ಕರ್ನಾಟಕ ರಾಜ್ಯ ಸ್ಥಾಪನೆಗೆ ಹೋರಾಡಿದವರು. ಅಂತೆಯೇ ವಿಶಾಲ ಕರ್ನಾಟಕದ ಎಲ್ಲ ಭಾಗದ ಜನರಿಗೂ ಅವರು ಅಚ್ಚುಮೆಚ್ಚು. ಇತ್ತೀಚೆಗೆ ಅವರಿಗೆ ನೀಡಿದ ಸನ್ಮಾನ ಸಮಾರಂಭದಲ್ಲಿ ಪೇಜಾವರ ಶ್ರೀಗಳು "ಆರ್. ವಿ. ಮೂರ್ತಿಯವರು, ಆರ್ಯ ಸಂಸ್ಕೃತಿಯ ವಿನಯಮೂರ್ತಿಗಳು. ಅವರ ಪ್ರಾಮಾಣಿಕ ಪರಿಶುದ್ಧ ಜೀವನ ಅನುಕರಣೀಯ" ಎಂದು ಆಶೀರ್ವದಿಸಿದುದನ್ನು ಇಲ್ಲಿ ನೆನೆಯಬಹುದು.

೭೫ ವರುಷಗಳನ್ನು ಪೂರ್ತಿಗೊಳಿಸಿದ ಮೂರ್ತಿಯವರನ್ನು ಸನ್ಮಾನಿಸಲು ಅಖಿಲ ಭಾರತ ಮಟ್ಟದಲ್ಲಿ ಒಂದು ಸಮಿತಿ ರಚಿತವಾಗಿದೆ. ಹಾಡ್ಕೊ ಚೇರ್ಮನ್ನರಾದ ಎಚ್. ಟಿ. ಪಾರೇಖ ಅವರು ಈ ಸಮಿತಿಯ ಅಧ್ಯಕ್ಷರು. [illegible]

(೮೦ನೆಯ ಪುಟ ನೋಡಿರಿ)

# ಗಗನದಲ್ಲಿ ವಾರಲೇಖನ?

**ಜಿ. ಟಿ. ನಾರಾಯಣರಾವ್**

ಸಾಮಾನ್ಯರಂತಿರಲಿ, ವಿಜ್ಞಾನ ಓದಿ ಅದರ ಅನ್ವಯದಿಂದಲೇ ಜೀವನ ನಡೆಸುತ್ತಿರುವ 'ಅಸಾಮಾನ್ಯರು' ಕೂಡ, ಮಂಗಳ ಮತ್ತು ಶನಿವಾರಗಳಂದು ಮಂಗಳ ಕಾರ್ಯಕ್ಕೆ ಹಿಂದೇಟು ಹೊಡೆಯುವುದು ಅಪರೂಪವಲ್ಲ. ಇನ್ನು ಭರಣಿ ಕೃತ್ತಿಕೆ ಮತ್ತು ರಾಹುಕಾಲ? ಸಾಕ್ಷಾತ್ ಸರ್ಪದಂಶನಾನುಭವವೇ ಇವರಿಗೆ!

ಅಮಾವಾಸ್ಯೆ, ಹುಣ್ಣಿಮೆ, ಗ್ರಹಣ, ಧೂಮಕೇತು ಆಗಮನ, ಶುಕ್ರ ಅಥವಾ ಗುರು ಮೌಢ್ಯ ಮುಂತಾದ ಸನ್ನಿವೇಶಗಳನ್ನು ಕುರಿತು ಈ ತೆರನಾದ 'ಅಸ್ಪೃಶ್ಯ' ಭಾವನೆಯನ್ನು ಗಗನ ದೃಶ್ಯಗಳ ಹಿನ್ನೆಲೆಯಲ್ಲಿ ವ್ಯಾಖ್ಯಾನಿಸಬಹುದು (ಇದು ಸಮರ್ಥನೆ ಅಲ್ಲ). ಅಮಾವಾಸ್ಯೆಯಂದು ಚಂದ್ರದರ್ಶನವಿಲ್ಲ. ಹುಣ್ಣಿಮೆಯಂದು ನಕ್ಷತ್ರಗಳು ಕಳಾಹೀನವಾಗಿರುತ್ತವೆ. ಗ್ರಹಣವೆಂದರೆ ಸೂರ್ಯ ಅಥವಾ ಚಂದ್ರ ಛಾಯಾವೃತವಾಗುವ ವಿರಳದೃಶ್ಯ. ಬಾನ ಹಲಗೆಯಲ್ಲಿ ವಿಧಿ ಬರೆವ ವಿಕರಾಳ ಚಿತ್ರ ಧೂಮಕೇತು. ಅದೇ ಕೆಲವು ತಿಂಗಳ ಕಾಲ ಬೆಳಕಿನ ಗಟ್ಟಿಗನಂತೆ ಇರುವ ಬಾನನ್ನು ಬೆಳಗುವ ಶುಕ್ರ ಮತ್ತು ಗುರು ಕ್ರಮೇಣ ಸೂರ್ಯಪ್ರಕಾಶದ ಉಜ್ವಲತೆಯಲ್ಲಿ ಲೀನವಾಗಿ ಅಂತರ್ಧಾನವಾಗುವ ವಿದ್ಯಮಾನ ಗ್ರಹಮೌಢ್ಯ.

ಆದರೆ ಅಮಾವಾಸ್ಯೆ, ಹುಣ್ಣಿಮೆ, ಗ್ರಹಣ, ಸಂಕ್ರಮಣ, ಅಯನಾರಂಭ ಮುಂತಾದ ಪದಗಳು ಆಕಾಶದಲ್ಲಿ ಖಚಿತವಾಗಿ ಬೊಟ್ಟಿಟ್ಟು ತೋರಿಸಬಹುದಾದ ಘಟನೆಗಳನ್ನು ಸೂಚಿಸುತ್ತವೆ – ಬಾನ ಗೋಲಕಹಲಗೆಯಲ್ಲಿ (score-board) ಕಾಲರಾಯ ಇವನ್ನು ಬರೆದು ತೋರಿಸುತ್ತಿರುವನೋ ಎಂಬಂತೆ. ಆದರೆ ದಿವಸದ ೨೪ ಗಂಟೆಗಳು, ವಾರದ ೭ ದಿವಸಗಳು, ವರ್ಷದ ೧೨ ತಿಂಗಳುಗಳು, ಇಸವಿ ಸಂಖ್ಯೆ, ಮುಂತಾದವನ್ನು ಎತ್ತಿ ಕಾಣಿಸುವ ಯಾವ ಘಟನೆಯೂ ಆಕಾಶದಲ್ಲಿ ಜರುಗುವುದಿಲ್ಲ. ಬಾನಿನಲ್ಲಿ ತಾರೀಕು ಪಟ್ಟಿ ಇಲ್ಲ.

ಹಾಗಾದರೆ ಆಚರಣೆಯಲ್ಲಿರುವ ಗಂಟೆ, ದಿವಸ, ತಿಂಗಳು, ಇಸವಿ ಮುಂತಾದವುಗಳ ಅರ್ಥವೇನು?

ಪ್ರಾಚೀನ ಮಾನವನಿಗೆ ಕಂಡ ನೋಟವಿದು. ಚಂದ್ರ ಅವನ ಗಡಿಯಾರ. ಹನ್ನೆರಡು ಅಮಾವಾಸ್ಯೆ ಅಥವಾ ಹುಣ್ಣಿಮೆ ಸಂದಾಗ ಭೂಮಿಯಲ್ಲಿ ಋತುಗಳ ಒಂದು ಚಕ್ರ ಪೂರ್ತಿಗೊಂಡು ಮುಂದಿನದು ಆರಂಭವಾಗುತ್ತಿತ್ತು. ಅದೇ ವೇಳೆ ಆಕಾಶದಲ್ಲಿಯು ಸ್ಥಿರ ನಕ್ಷತ್ರ ಚಿತ್ರಗಳು ಹಿಂದಿನ ವಿನ್ಯಾಸವನ್ನೇ ಪ್ರದರ್ಶಿಸುತ್ತಿದ್ದವು. ಹೀಗೆ ಸಂಖ್ಯೆ ೧೨ಕ್ಕೆ ಪ್ರಾಶಸ್ತ್ಯ ಬಂದಿತು.

ಎರಡು ಅನುಕ್ರಮ ಅಮಾವಾಸ್ಯೆಗಳ ನಡುವಿನ ಅವಧಿ ತಿಂಗಳು. ಇದರ ಉದ್ದ ಸುಮಾರು ೩೦ ದಿವಸಗಳು. ಒಂದು ತಿಂಗಳಿಗೆ ಎರಡು ಪಕ್ಷಗಳು – ಅಮಾವಾಸ್ಯೆಯಿಂದ ಹುಣ್ಣಿಮೆ ತನಕ ಶುಕ್ಲ ಪಕ್ಷ, ಹುಣ್ಣಿಮೆಯಿಂದ ಅಮಾವಾಸ್ಯೆ ತನಕ ಕೃಷ್ಣ ಪಕ್ಷ. ಪಕ್ಷದ ಉದ್ದ ಸುಮಾರು ೧೫ ದಿವಸಗಳು.

ಪಕ್ಷ, ತಿಂಗಳು ಮತ್ತು ವರ್ಷ ಎಂಬ ಕಾಲಮಾನಗಳು ಈ ತೆರನಾಗಿ ರೂಢಿಗೆ ಬಂದುವು. ಇವು ವರ್ಷವನ್ನು ನಿಖರವಾಗಿ ಅಳೆಯುವುದಿಲ್ಲವೆಂಬ ಸಂಗತಿ ಬೇಗನೆ ಸ್ಪಷ್ಟವಾಯಿತು. ಏಕೆಂದರೆ ಚಾಂದ್ರ ವರ್ಷದ ಉದ್ದ ೩೫೪(=

೨೯.೫ × ೧೨) ದಿವಸಗಳು, ಋತುಚಕ್ರದ್ದು ೩೬೫ ದಿವಸಗಳು. ಈ ಕೊರತೆಯನ್ನು ತೇಪೆ ಹಾಕಿ ಸರಿಪಡಿಸಲಾಯಿತಾದರೂ ತಿಂಗಳು ಮತ್ತು ಪಕ್ಷ ಪದಗಳು ಮೂಲ ಅರ್ಥಗಳಲ್ಲಿಯೇ ಬಳಕೆ ಆಗುತ್ತಿವೆ.

ಸೂರ್ಯೋದಯದಿಂದ ಮುಂದಿನ ಸೂರ್ಯೋದಯದ ತನಕ ಸಲ್ಲುವ ಅವಧಿಯೇ ದಿವಸ. ನಾಗರಿಕತೆ ಮುನ್ನಡೆದಂತೆ ಧಾರ್ಮಿಕಾಚರಣೆ, ಕೃಷಿಕಾರ್ಯ, ವಾಣಿಜ್ಯ ವ್ಯವಹಾರ ಮುಂತಾದ ಹಲವು ಹತ್ತೊಂದು ಚಟುವಟಿಕೆಗಳಿಗೆ ಅನುಕೂಲವಾಗುವಂತೆ ದಿವಸಗಳ ನಿರ್ದಿಷ್ಟಗುಂಪನ್ನು ಪರಿಗಣಿಸುವುದು ಅಗತ್ಯವಾಯಿತು. ಉದಾಹರಣೆಗೆ ಪ್ರಾಚೀನ ಈಜಿಪ್ಟಿನಲ್ಲಿ ೧೦ ದಿವಸಗಳ 'ವಾರ' ಬಳಕೆಯಲ್ಲಿತ್ತು. ವೈದಿಕರು ಅಮಾವಾಸ್ಯೆ, ಪೌರ್ಣಮಿ ಮತ್ತು ಪಕ್ಷ ಪ್ರಥಮ ದಿನಗಳಂದು ವಿಶ್ರಾಂತಿ ಪಡೆಯುತ್ತಿದ್ದರು. ಹೀಗೆ ಕೆಲಸದ ದಿವಸಗಳು, ರಜಾ ದಿವಸಗಳು, ಪುನಃ ಕೆಲಸದ ದಿವಸಗಳು – ಈ ಚಕ್ರ ರೂಢಿಗೆ ಬಂದಿತು.

ಕ್ರಿಸ್ತಪೂರ್ವ ೮ನೆಯ ಶತಮಾನದಲ್ಲಿ ಬ್ಯಾಬಿಲೋನಿಯಾದಲ್ಲಿದ್ದ ಕಾಲ್ಡೀಯನ್ ಜ್ಯೋತಿಶ್ಶಾಸ್ತ್ರಜ್ಞರು ೭ ದಿವಸಗಳ ವಾರವನ್ನೂ ೨೪ ಗಂಟೆಗಳ ದಿವಸವನ್ನೂ ಪ್ರವರ್ತಿಸಿದ ಮೊದಲಿಗರು. ಪಕ್ಷಾರ್ಧ ೭ (=೧೪ ÷ ೨) ದಿವಸಗಳು ಆಗಿದ್ದುದರ ಜೊತೆಗೆ ಆಕಾಶದಲ್ಲಿ ೭ ಚರತಾರೆಗಳು ಗೋಚರವಾದದ್ದು ಯೋಗಾಯೋಗ. ಸ್ಥಿರನಕ್ಷತ್ರ ಚಿತ್ರಗಳ ಮುನ್ನಡೆಯಲ್ಲಿ ಬುಧ, ಶುಕ್ರ, ಮಂಗಳ ಗುರು, ಶನಿ ಎಂಬ ೫ ಗ್ರಹಗಳೂ ಸೂರ್ಯ, ಚಂದ್ರ ಎಂಬ ೨ ಗಗನ ದೀಪಗಳೂ ಭೂಮಿಯನ್ನು ಪರಿಭ್ರಮಿಸುತ್ತಿರುವ ದೃಶ್ಯ ಅವರಿಗೆ ಕಂಡಿತು. ಈ ಏಳು ಕಾಯಗಳ ಅಧಿಪತಿಗಳು ದೇವರುಗಳೆಂದೂ ಇವರು ಮಾನವನ ಭೂತ ವರ್ತಮಾನ ಭವಿಷ್ಯತ್ತುಗಳನ್ನು ನಿರ್ಧರಿಸಬಲ್ಲ ಸರ್ವಶಕ್ತರೆಂದೂ ಕಾಲ್ಡೀಯನರು ನಂಬಿದರು. ಅಂದ ಮೇಲೆ ಈ ದೇವರುಗಳನ್ನು ಪೂಜಿಸುವುದು ಮಾನವನ ಕರ್ತವ್ಯ. ಹೀಗೆ ಅವರು ೭ ದಿವಸಗಳ ವಾರವನ್ನು ತೊಡಗಿ ಒಂದೊಂದು ದಿವಸಕ್ಕೆ ಒಂದೊಂದು ಕಾಯದ ಹೆಸರಿಟ್ಟರು: ಭಾನುವಾರದ ಅಧಿಪತಿ ಸೂರ್ಯ, ಸೋಮವಾರದ ಅಧಿಪತಿ ಚಂದ್ರ ಇತ್ಯಾದಿ. ಆದ್ದರಿಂದ ವಾರದಲ್ಲಿರುವ ದಿವಸಗಳ ಸಂಖ್ಯೆಯಾಗಲಿ ಹೆಸರುಗಳಾಗಲಿ ಪೂರ್ತಿ ಮಾನವ ಕಲ್ಪಿತ. ಖಗೋಳದಲ್ಲಿ ಇವುಗಳಿಗೆ ಯಾವ ಆಧಾರವೂ ಇಲ್ಲ.

ಹೆಸರುಗಳ ಸರಣಿಯಲ್ಲಿ ನಿರ್ದಿಷ್ಟವಾದ ಒಂದು ಕ್ರಮ ಉಂಟು: ಆದಿತ್ಯವಾರದಿಂದ ಶನಿವಾರದ ತನಕ. ಉದಾಹರಣೆಗೆ ಗುರುವಾರದ ಮರುದಿನ ಶುಕ್ರವಾರವೇ ಬರತಕ್ಕದ್ದು. ಬೇರೆ ಯಾವ ದಿವಸವೂ ಅಲ್ಲ, ಇದೇ ಕ್ರಮ ಏಕೆ? ಇದು ಏಕೈಕವೇ? ಗಣಿತ ಹೇಳುತ್ತದೆ ಅಲ್ಲ ಎಂದು. ವಾಸ್ತವವಾಗಿ ಏಳು ದಿವಸಗಳನ್ನು ೭೨೦ ಬೇರೆ ಬೇರೆ ಸರಣಿಗಳಲ್ಲಿ ಅಳವಡಿಸಬಹುದು. ಆ ಪೈಕಿ ಈಗ ಚಾಲ್ತಿಯಲ್ಲಿರುವ ಅಳವಡಿಕೆ ಅಥವಾ ಕ್ರಮ ಒಂದು ಮಾತ್ರ. ಇದನ್ನೇ ಕಾಲ್ಡೀಯನರು ಆಯ್ದುದೇಕೆ?

ಈ ಪ್ರಶ್ನೆಗೆ ಉತ್ತರ ಪಡೆಯಲು ಬುದ್ಧಿ ಆಕಾಶವನ್ನೇ ಕೆಲವು ದಶಕಗಳ ತನಕ ವೀಕ್ಷಿಸುವುದು ಅಪೇಕ್ಷಣೀಯ. ಅಂದಿನ ಕಾಲ್ಡೀಯನರಿಗೆ ಯಾವ ದೃಶ್ಯ ಕಂಡಿತೋ ಇಂದಿನ ನಮಗೂ ಅದೇ ಕಾಣುತ್ತದೆ: ನಕ್ಷತ್ರ ಚಿತ್ರಗಳ ಪರದೆಯ ಮೇಲೆ ಏಳು ಕಾಯಗಳೂ ಭೂಮಿಯನ್ನು ಪಶ್ಚಿಮ-ಪೂರ್ವ ದಿಶೆಯಲ್ಲಿ ಪರಿಭ್ರಮಿಸುತ್ತಿವೆ. ಪರಿಭ್ರಮಣಾವಧಿಗಳನ್ನು ಇಳಿಕೆ ಅವರೋಹೀ ಕ್ರಮದಲ್ಲಿ ಅಳವಡಿಸಿದರೆ ಹೀಗಿರುತ್ತದೆ:

೨೯.೫ ವರ್ಷಗಳು...ಶನಿ
೧೧.೮೬ ವರ್ಷಗಳು... ಗುರು
೧.೮೮ ವರ್ಷಗಳು...ಮಂಗಳ
೧ ವರ್ಷ...ಸೂರ್ಯ
೦.೬೨ ವರ್ಷ...ಶುಕ್ರ
೦.೨೪ ವರ್ಷ...ಬುಧ
೦.೦೭ವರ್ಷ...ಚಂದ್ರ
(೧ ವರ್ಷ = ೩೬೫ ದಿವಸಗಳು)

ಈ ಅವಧಿಗಳಿಗೂ ಭೂಮಿಯಿಂದ ಕಾಯಗಳ ದೂರಗಳಿಗೂ ನೇರವಾದ ಏನಾದರೂ ಸಂಬಂಧ

ಇರಬಹುದೇ ?

ನಾವು ರೇಲ್ವೆ ಪ್ರಯಾಣ ಮಾಡುತ್ತಿರುವಾಗ ದೂರದ ವಸ್ತುಗಳು ಕಡಿಮೆ ವೇಗದಿಂದಲೂ ಹತ್ತಿರದವು ಜಾಸ್ತಿ ವೇಗದಿಂದಲೂ ನಮ್ಮ ಚಲನೆಯ ವಿರುದ್ಧ ದಿಕ್ಕಿನಲ್ಲಿ ಸರಿದಂತೆ ಭಾಸವಾಗುವುದು ಸರಿಯಷ್ಟೆ. ಆದ್ದರಿಂದ ಕಡಿಮೆ ವೇಗದವು ನಮ್ಮಿಂದ ದೂರ ಇವೆಯೆಂದೂ ಜಾಸ್ತಿ ವೇಗದವು ನಮಗೆ ಹತ್ತಿರ ಇವೆಯೆಂದೂ ತೀರ್ಮಾನಿಸಬಹುದು. ಈ ತತ್ತ್ವವನ್ನು ಭೂಮಿ ಎಂಬ ರೇಲ್ವೆ ಬಂಡಿಯ ಪ್ರಯಾಣಿಕರಾದ ನಾವು ಆಕಾಶಕ್ಕೆ ಅನ್ವಯಿಸಿದರೆ ದೊರೆಯುವ ಫಲಿತಾಂಶವೇನು? ಶನಿ ನಮ್ಮಿಂದ ಅತಿ ದೂರದಲ್ಲಿದೆ: ಅಲ್ಲಿಂದ ಅವರೋಹೀ ದೂರಗಳಲ್ಲಿ ಅನುಕ್ರಮವಾಗಿ ಗುರು, ಮಂಗಳ, ಸೂರ್ಯ, ಶುಕ್ರ, ಬುಧ ಮತ್ತು ಚಂದ್ರ ಇವೆ. ಕಾಲ್ಡಿಯನರು ಈ ಸೂಕ್ಷ್ಮವನ್ನು ಗುರುತಿಸಿದ್ದರು.




ಒಂದು ವರ್ಷದಲ್ಲಿ ೨೪ ಪಕ್ಷಗಳಿವೆ. ಈ ೨೪ ಎಂಬ ಸಂಖ್ಯೆಯಿಂದ ಸ್ಫೂರ್ತಿ ಪಡೆದ ಅವರು ಎರಡು ಅನುಕ್ರಮ ಸೂರ್ಯೋದಯಗಳ ನಡುವಿನ ಅವಧಿಯಾದ ದಿವಸವನ್ನು, ಗಣನೆಯ ಸೌಕರ್ಯಕ್ಕಾಗಿ, ೨೪ ಸಮಭಾಗಗಳಾಗಿ ವಿಭಾಗಿಸಿದರು. ಇವೇ ೨೪ ಗಂಟೆಗಳು. ಈ ವಿಭಾಗೀಕರಣವೂ ಮಾನವಕಲ್ಪಿತ. ಇದಕ್ಕೆ ಆಕಾಶದಲ್ಲಿ ಯಾವ ಮಹತ್ವವೂ ಇಲ್ಲ.

ದಿವಸದ ಒಂದೊಂದು ಗಂಟೆಗೆ ಶನಿಯಿಂದ ಚಂದ್ರನವರೆಗಿನ ಏಳು ದೇವರುಗಳನ್ನು ಅದೇ ಕ್ರಮದಲ್ಲಿ ಅಧಿಪತಿಗಳೆಂದು ನೇಮಿಸಲಾಯಿತು. ಸೂರ್ಯೋದಯವಾಗುವಾಗಿನ ಗಂಟೆಯ ಅಧಿಪತಿಯ ಹೆಸರನ್ನೇ ಆ ದಿವಸಕ್ಕೂ ಕೊಡಲಾಯಿತು. ಉದಾಹರಣೆಗೆ ಇಂದು ಸೂರ್ಯೋದಯವಾಗುವಾಗಿನ ಗಂಟೆಯ ಅಧಿಪತಿ ಸೂರ್ಯನೇ ಆಗಿರಲಿ. ಆದ್ದರಿಂದ ಇಂದು ಸೂರ್ಯವಾರ (ಆದಿತ್ಯವಾರ). ಇಂದಿನ ಎಲ್ಲ ಗಂಟೆಗಳ ಅಧಿಪತಿಗಳ ವಿವರಗಳನ್ನು ಮುಂದೆ ಕಾಣಿಸಿದೆ.

ಆದಿತ್ಯವಾರದ ೨೫ನೆಯ ಗಂಟೆ ಎಂದರೆ ಮರುದಿನದ ೧ನೆಯ ಗಂಟೆ ಎಂದರ್ಥ. ಇದರ ಅಧಿಪತಿ ಚಂದ್ರ. ಆದ್ದರಿಂದ ಅಂದು ಚಂದ್ರವಾರ (ಸೋಮವಾರ). ಹೀಗೆ ಆದಿತ್ಯವಾರದ ಮರುದಿನ ಸೋಮವಾರ, ಇದೇ ರೀತಿ ಮುಂದುವರಿದರೆ ೭ ದಿವಸಗಳ ಚಕ್ರವನ್ನು ಪೂರ್ತಿಗೊಳಿಸಿ ಪುನಃ ಆದಿತ್ಯವಾರಕ್ಕೆ ಮರಳುತ್ತೇವೆ.

| | | | | | | | |
|---|---|---|---|---|---|---|---|
| ೧ | ಸೂರ್ಯ | ೮ | ಸೂರ್ಯ | ೧೫ | ಸೂರ್ಯ | ೨೨ | ಸೂರ್ಯ |
| ೨ | ಶುಕ್ರ | ೯ | ಶುಕ್ರ | ೧೬ | ಶುಕ್ರ | ೨೩ | ಶುಕ್ರ |
| ೩ | ಬುಧ | ೧೦ | ಬುಧ | ೧೭ | ಬುಧ | ೨೪ | ಬುಧ |
| ೪ | ಚಂದ್ರ | ೧೧ | ಚಂದ್ರ | ೧೮ | ಚಂದ್ರ | ೨೫ | ಚಂದ್ರ |
| ೫ | ಶನಿ | ೧೨ | ಶನಿ | ೧೯ | ಶನಿ | ೨೬ | ಶನಿ |
| ೬ | ಗುರು | ೧೩ | ಗುರು | ೨೦ | ಗುರು | ೨೭ | ಗುರು |
| ೭ | ಮಂಗಳ | ೧೪ | ಮಂಗಳ | ೨೧ | ಮಂಗಳ | ೨೮ | ಮಂಗಳ |

## ಶುಭಲಗ್ನ

**ದಿವಸದ ಹೆಸರಿಗೂ ವ್ಯಕ್ತಿಯ ಶುಭಾಶುಭಕ್ಕೂ ನಡುವೆ ಯಾವ ಸಂಬಂಧವೂ ಇಲ್ಲ.**

**ದಿವಸದ ಗಳಿಗೆಗೂ ಉದ್ದಿಷ್ಟಕಾರ್ಯದ ಜಯಾಪಜಯಕ್ಕೂ ನಡುವೆ ಯಾವ ಸಂಬಂಧವೂ ಇಲ್ಲ.**

**ಇಸವಿ ಸಂಖ್ಯೆಗೂ (ಅಥವಾ ಸಂವತ್ಸರನಾಮಕ್ಕೂ) ಸಂವತ್ಸರಫಲಕ್ಕೂ ನಡುವೆ ಯಾವ ಸಂಬಂಧವೂ ಇಲ್ಲ.**

**ಆದ್ದರಿಂದ ಪ್ರವೃತ್ತ ಮನಕ್ಕೆ "ಇಂದಿನ ದಿನವೇ ಶುಭದಿನ." ಬಸವಣ್ಣನವರ ಮಾತಿನಲ್ಲಿ "ಎಮ್ಮವರು ಬೆಸಗೊಂಡರೆ ಶುಭಲಗ್ನವೆಂದೆನ್ನಿರಯ್ಯ. ರಾಶಿಕೂಟ ಋಣ ಸಂಬಂಧ ಉಂಟೆಂದು ಹೇಳಿರಯ್ಯ. ಚಂದ್ರಬಲ ತಾರಾಬಲ ಉಂಟೆಂದು ಹೇಳಿರಯ್ಯ."**

**ಗಣನೆಯ ಸೌಕರ್ಯಕ್ಕಾಗಿ ಮಾನವ ಕಲ್ಪಿಸಿರುವ ಸಲಕರಣೆಗಳನ್ನು ಬೆಂಬಲಿಸುವ ಅಥವಾ ಬೆಂಬಲಿಸದಿರುವ ದೈವಿಕಶಕ್ತಿ ಇದೆಯೆಂದು ಭಾವಿಸಿ ತದನುಗುಣವಾಗಿ ತಮ್ಮ ಜೀವನವನ್ನು ರೂಪಿಸಿಕೊಳ್ಳುವವರು ಹೇಡಿಗಳು.**

ಈ ಅನುಕ್ರಮವನ್ನು ನೆನಪಿನಲ್ಲಿಡಲು ಒಂದು ಸರಳ ಚಿತ್ರ ಸೂತ್ರವಿದೆ. ವೃತ್ತ ಪರಿಧಿಯ ಮೇಲೆ ಏಳು ಕಾಯಗಳ ಹೆಸರುಗಳನ್ನು ಕಾಲ್ಡೀಯನರು ಕಂಡ ಅವರೋಹೀ ಕ್ರಮದಲ್ಲಿ, ಅಪ್ರದಕ್ಷಿಣ ದಿಶೆಯಲ್ಲಿ ಬರೆಯಬೇಕು. ಬಳಿಕ ಯಾವುದೇ ಕಾಯದಿಂದ ತೊಡಗಿ, ಅದರಿಂದ ಮುಂದಿನ ಎರಡು ಕಾಯಗಳನ್ನು ಜಗಿಹಾಯ್ದು, ಮೂರನೆಯದನ್ನು ತಲಪಬೇಕು. ಈ ಪ್ರಕ್ರಿಯೆಯನ್ನು ಪೂರ್ತಿಗೊಳಿಸಿದಾಗ ನಮಗೆ ಆದಿತ್ಯವಾರದಿಂದ ಶನಿವಾರದ ವರೆಗಿನ ಸರಣಿ ದೊರೆತಿರುತ್ತದೆ.

ಈಗ್ಗೆ ಸುಮಾರು ೨೮೦೦ ವರ್ಷಗಳ ಹಿಂದೆ ಕಾಲ್ಡೀಯನರು ಪ್ರವರ್ತಿಸಿದ ನಿಷ್ಕೃಷ್ಟ ವೀಕ್ಷಣೆ, ವೈಜ್ಞಾನಿಕ ವಿಶ್ಲೇಷಣೆ, ನಿಗಮಿಸಿದ (inferred) ತತ್ತ್ವ ಮತ್ತು ವಿಧಿಸಿದ ಸೂತ್ರವನ್ನು ಬೆರಗುಗೊಳಿಸುವಂತಿವೆ. ಇವುಗಳಿಗೆ ತೀರ ವೈದೃಶ್ಯವಾಗಿ ನಮ್ಮಲ್ಲಿ ಬಹುಮಂದಿ ವಿಜ್ಞಾನ-ಸುಶಿಕ್ಷಿತರು ಖಾಸಗಿ ಬದುಕಿನಲ್ಲಿಯೂ (ಉದಾ. ಧಾರ್ಮಿಕಾಚರಣೆಗಳು) ಸಾರ್ವಜನಿಕ ರಂಗದಲ್ಲಿಯೂ (ಉದಾ: ರಾಹುಕಾಲ ನಿವಾರಣೆ) ವರ್ತಿಸುವ ಪರಿಯನ್ನು ಗಮನಿಸುವಾಗ "ನಗೆಯು ಬರುತಿದೆ, ಎನಗೆ." ✡



**ಯಾರು ವಿಚಾರ ಮಾಡುವುದಿಲ್ಲವೋ ಅವರು ಸದಾ ಮಾತಾಡುತ್ತಲೇ ಇರುತ್ತಾರೆ.**

— ಡ್ರಾಯರ್

"ಸಂಪೂರ್ಣ ನಿಯೋಜಿತ ಆಹಾರ ಕೋಂಪ್ಲಾನ್® ನನ್ನ ಕುಟುಂಬದವರಿಗೆ ಇದೇ ಆಗಬೇಕು."

ಕೇವಲ

**ಕೋಂಪ್ಲಾನ್®**

ಪ್ರತಿಯೊಬ್ಬರಿಗೆ ಅತ್ಯವಶ್ಯಕವಾದ 23 ಪೋಷಕಾಂಶಗಳನ್ನು ಒಳಗೊಂಡಿದೆ.

ದೇಹಕ್ಕೆ ಪ್ರತಿ ದಿನ ಬೇಕಾಗುವ, ಅತ್ಯವಶ್ಯಕವಾದ 23 ಪೋಷಕಾಂಶಗಳಾದ, ಪ್ರೋಟೀನ್ಸ್, ಕಾರ್ಬೋಹೈಡ್ರೇಟ್, ಕೊಬ್ಬು, ವಿಟಮಿನ್ಸ್ ಮತ್ತು ಖನಿಜದ್ರವ್ಯಗಳನ್ನು, ವೈಜ್ಞಾನಿಕವಾಗಿ ನಿಯೋಜಿತ ಪ್ರಮಾಣದಲ್ಲಿ ಕೇವಲ ಕೋಂಪ್ಲಾನ್ ಪಡೆದಿದೆ.

ಇದು ಅಧಿಕಾಧಿಕ ಡಾಕ್ಟರರು ಶಿಫಾರಸು ಮಾಡುವ ಆರೋಗ್ಯದಾಯಕ ಪೇಯವಾಗಿದೆ.

ಚಾಕೊಲೆಟ್, ಮಿಲ್ಕ್-ಕೇಸರಿ, ಮತ್ತು ಸ್ಟ್ರಾಬೆರ್ರಿ ಸ್ವಾದಗಳಲ್ಲಿ ದೊರೆಯುತ್ತದೆ— ಸಾದಾ ಕೂಡ ಇದೆ.




**ಕೋಂಪ್ಲಾನ್®**

–ಸಂಪೂರ್ಣ ನಿಯೋಜಿತ ಆಹಾರ.

LINTAS-GLC-10-1611 KN

-೪೩-

ಬರೆಯುವ ಕಲೆಗೆ ಸಂಬಂಧಿಸಿದ ಅನೇಕ ಶಬ್ದಗಳ ಮೂಲಶೋಧನೆ ಯುಕ್ತಿಮೂಲದ ಅನ್ವೇಷಣೆಯಂತೆ ಸ್ವಲ್ಪ ಸಂಕೋಚಕಾರಿಯಾಗಿದೆ. **ಪುಸ್ತಕವನ್ನೇ ತೆಗೆದುಕೊಳ್ಳಿ.** ನಮ್ಮ ಸರಸ್ವತೀದೇವಿ ವೀಣಾ **ಪುಸ್ತಕ**ಪಾಣಿಯಾಗಿದ್ದಾಳೆ. ಅಂದ **ಮೇಲೆ ಪುಸ್ತಕ** ಶುದ್ಧ ಭಾರತೀಯ ಪದವಾಗಿರಬೇಕು. ಆದರೆ ಹಾಗಿಲ್ಲ. **ಪುಸ್ತಕ** ಶಬ್ದಕ್ಕೆ ನಿಜವಾದ ಪುರಾತನ ಪ್ರಯೋಗದ ಉದಾಹರಣೆ ಭಾರತೀಯ ಸಾಹಿತ್ಯದಲ್ಲಿ ಇಲ್ಲ. ಪಾಣಿನೀಯ ವ್ಯಾಕರಣದಲ್ಲಿ ಅದು ಸಿಕ್ಕುವುದಿಲ್ಲ. ಅಲ್ಲಿ **ಪುಸ್ತ**, ಬುಸ್ತ ಎಂಬ ಧಾತುಗಳಿವೆ. ಆದರೆ ಅವು **ಪುಸ್ತಕ**ಕ್ಕೆ ಸಂಬಂಧಿಸಿದವಲ್ಲ. **ಹರಿವಂಶ ಪುರಾಣ**ದಲ್ಲಿ ಅದು ಕಾಣಿಸುತ್ತದೆಂದು **ಮೋನಿಯರ್** ವಿಲಿಯಮ್ಸ್ **ಕೋಶ** ಹೇಳುತ್ತದೆ. ಆದರೆ ಈ ಪುರಾಣ ಅಷ್ಟು ಪ್ರಾಚೀನವೆಂದು ಗೃಹೀತವಾಗಿಲ್ಲ. ವರಾಹಮಿಹಿರ **ಪುಸ್ತಕ**ವನ್ನು ಉಲ್ಲೇಖಿಸುವುದರಿಂದ ಅದು ಕ್ರಿ. ಶ. ಐದನೇ ಶತಮಾನದಲ್ಲಿ ಇಲ್ಲಿ ಪ್ರಚಾರದಲ್ಲಿತ್ತೆಂಬುದು ಖಂಡಿತ. ಆದರೆ ಅಮರಕೋಶದಲ್ಲಿ ಅದು ಕಾಣದು. ಅನಂತರ ಬಾಣಭಟ್ಟನ **ಹರ್ಷಚರಿತ** ಮತ್ತು ಆ ಮೇಲಿನ ಕಾವ್ಯಗಳಲ್ಲಿ ಈ ಪದ ಗೋಚರಕ್ಕೆ ಬಂದಿದೆ.

ವಾಸ್ತವಿಕವಾಗಿ **ಪುಸ್ತಕ** ಪದ ನಮಗೆ ಬಂದದ್ದು ಪ್ರಾಚೀನ **ಪಾರಸೀಕ ಭಾಷೆ**ಯಿಂದ. ಆ ಭಾಷೆ **ತುರ್ಕಿ** ಭಾಷೆಯಿಂದ ಅದನ್ನು ತೆಗೆದುಕೊಂಡಿತೆಂದು ಡಾ. ಸುನೀತಿಕುಮಾರ ಚಟರ್ಜಿ ಹೇಳುತ್ತಾರೆ. ಇರಾಣ ಮತ್ತು ಇತರ ‘ಮ್ಲೇಚ್ಛ’ ದೇಶಗಳಲ್ಲಿ ಶಾಶ್ವತ ದಾಖಲೆಗಳನ್ನು ಬರೆದಿಡುವುದಕ್ಕೆ ಉಪಯೋಗಿಸುತ್ತಿದ್ದ ಪದವಾದ **ಕುರಿಚರ್ಮಕ್ಕೆ ಪೋಸ್ತ** ಎಂಬ ಹೆಸರಿತ್ತು (ಇಂಗ್ಲೀಷಿನಲ್ಲಿ ಅದು **ಪಾರ್ಚ್‌ಮೆಂಟ್**). ಸುರುಳಿ ಸುತ್ತಿ ಕಾಪಾಡುತ್ತಿದ್ದ ಇಂಥ ಚರ್ಮಮಯ ದಾಖಲೆಗಳನ್ನು ಭಾರತೀಯರು ಇಡುತ್ತಿದ್ದರೋ ಇಲ್ಲವೋ ತಿಳಿಯದು. ಹೇಗಿದ್ದರೂ **ಪೋಸ್ತ** ಪ್ರಾಕೃತ ಭಾಷೆಯನ್ನು ಹೊಕ್ಕು ಗುಜರಾಥಿ, ಹಿಂದೀ ಮೊದಲಾದ ಅಪಭ್ರಂಶ ಭಾಷೆಗಳಲ್ಲಿ **ಪೋಥಾ**, **ಪೋಥಿ** ಮೊದಲಾದ ರೂಪಗಳನ್ನು ಪಡೆಯಿತು. ಪ್ರಾಕೃತದಿಂದ ಕನ್ನಡಕ್ಕೂ ಬಂದು **ಪೊತ್ತಗೆ, ಹೊತ್ತಗೆ** ಆಯಿತು. **ಪೋಥೀ** ಎಂಬುದು **ಲೆಕ್ಕ-ಪುಸ್ತಕ**ಕ್ಕೂ ಅನ್ವಯವಾಯಿತು.

ಕ್ರಿ. ಶ. ಆರನೇ ಶತಮಾನಕ್ಕೂ ಹಿಂದಿನ ಅಮರಕೋಶದಲ್ಲಿ **ಪುಸ್ತ** ಎಂಬ ಶಬ್ದವೊಂದು ಸಿಕ್ಕುತ್ತದೆ. ಅದರ ಅರ್ಥ **ಚರ್ಮ**, ಮಣ್ಣು ಮೊದಲಾದ ಪದಾರ್ಥಗಳಿಂದ ಲೆಪ್ಪದ **ಬೊಂಬೆ**ಗಳ ನಿರ್ಮಾಣಮಾಡುವ ಕಲೆ ಎಂದು. **ಪುಸ್ತ**ಕ್ಕೂ **ಚರ್ಮ**ಕ್ಕೂ ಇರುವ ಸಂಬಂಧಕ್ಕೆ ಇದು ಇನ್ನೊಂದು ಅಪ್ರತ್ಯಕ್ಷ ಪ್ರಮಾಣವೆನ್ನಬಹುದು. ಈ ಪುಸ್ತವೇ ಬೊಂಬೆಗೆ **ಪುತ್ತಳಿ**ಯೆಂಬ ಹೆಸರು ಬರಲು ಕಾರಣವಾಗಿರಬಹುದು.

**ಕಾಗದ** ಬರುವ ಮುಂಚೆ ಭಾರತದಲ್ಲಿ ಬರವಣಿಗೆಯ ತಲಗಳೆಂದರೆ ಮುಖ್ಯವಾಗಿ **ತಾಳ-ಪತ್ರ** ಮತ್ತು **ಭೂರ್ಜ (ಭೋಜ) ಪತ್ರ**. **ಪತ್ರ** ಅಂದರೆ **ಎಲೆ, ತಾಳಪತ್ರ**ದ ವಿಷಯದಲ್ಲಿ ಇದು ಸರಿ. ಅದು **ತಾಳೀ** ಮರದ **ಎಲೆ** ಅಥವಾ **ಗರಿ**. ಹಿಮಾಲಯದ ಪ್ರಾಂತದಲ್ಲಿ ಬೆಳೆಯುವ **ಭೂರ್ಜವೃಕ್ಷ**ದಿಂದ ಬರುವ ‘ಪತ್ರ’ ಮಾತ್ರ ಎಲೆಯಲ್ಲ. ಅದು ಆ ಮರದ ಕಾಂಡದಿಂದ ಸುಲಿದು ತೆಗೆಯುವ ತೆಳ್ಳನ್ನ **ತೊಗಟೆ**. ಉತ್ತರ ದೇಶದಲ್ಲಿ ಭೂರ್ಜಪತ್ರದ ಮೇಲೆ ಲೇಖನಿಯಿಂದ ಬರೆಯುವ ವಾಡಿಕೆ ಬೆಳೆದು ಬಂದರೆ, **ಪೂರ್ವ** ದಕ್ಷಿಣಗಳಲ್ಲಿ ಧಾರಾಳವಾದ **ತಾಳಪತ್ರ**ದ ಮೇಲೆ **ಕಂಟವ**ದಿಂದ ಬರೆಯುವುದು ಕ್ರಮವಾಯಿತು. ಭಾರತದ ಭೂರ್ಜಪತ್ರದಂತೆ ಪ್ರಾಚೀನ ಇಜಿಪ್ತಿನಲ್ಲಿ **ಪೆಪಿರಸ್** ಗಿಡದ ತೆಳ್ಳನ್ನ ತೊಗಟೆಯ ಮೇಲೆ ದಾಖಲೆಗಳನ್ನು ಬರೆಯುತ್ತಿದ್ದರು. ಗ್ರೀಕ್ ಭಾಷೆಗೆ ಬಂದ **ಪೆಪರಸ್** ಲ್ಯಾಟಿನ್ ಮೂಲಕ ಫ್ರೆಂಚ್ ದಾರಿಯಾಗಿ ಇಂಗ್ಲೀಷಿಗೆ ಪ್ರವೇಶಿಸಿದಾಗ ಅದು **ಪೇಪರ್** ಆಯಿತು. ಪೆಪಿರಸ್ ತೊಗಟೆ ಇಂದು ಎಲ್ಲಿಯೂ

ಲೇಖನಿ ತಲವಾಗಿ ಉಳಿದಿಲ್ಲ. ಚೀನೀಯರಿಂದ ಆವಿಷ್ಕಾರವಾದ **ಕಾಗದ** ಸರ್ವತ್ರ ಬಳಕೆಗೆ ಬಂದಿದೆ. ಆದರೆ **ಪೇಪರ್** ಎಂಬ ಆ ಹಳೇ ಲೇಖನ ಸಾಮಗ್ರಿಯ ಹೆಸರೇ ಈ ಕಾಗದಕ್ಕೂ ಬಳಸಲ್ಪಟ್ಟು ಮುಂದುವರಿದಿದೆ. ಈ **ಪೇಪರ್** ಈಗ ಸಮಾಚಾರಪತ್ರದಿಂದಾರಂಭಿಸಿ ಪಂಡಿತರ ಗಹನ ಪ್ರಬಂಧಗಳ ವರೆಗೆ ನಾನಾ ಲಿಖಿತಗಳಿಗೆ ಅನ್ವಯವಾಗಿ ಅರ್ಥವನ್ನು ವಿಸ್ತರಿಸಿಕೊಂಡಿದೆ.

ಇಂದು ಹಳ್ಳಿಗನಿಗೂ ಪರಿಚಿತವಾಗಿರುವ ಇಂಗ್ಲೀಷ್ **ಬೂಕು** (Book) ಭೂರ್ಜದಂಥದೇ ಯುರೋಪಿನ **ಬೀಚ್** ಮರದಿಂದ ಬಂದದ್ದಂತೆ. ಹಳೇ ಇಂಗ್ಲೀಷಿನ **ಬೋಚ್**, ಜರ್ಮನ್ **ಬುಕ್**, ಇತರ ಉತ್ತರ ಯುರೋಪಿಯನ್ ಭಾಷೆಗಳ **ಬೋಕ್**, **ಬೋಗ್**, **ಬೋಕ್**, **ಬುಕ್** ಇತ್ಯಾದಿ ನಾಮಾಂಕಿತವಾದ ಮರದ ತೊಗಟೆ ಅಥವಾ ತೆಳ್ಳನ್ನ ಹಲಗೆಯ ಮೇಲೆ ದಾಖಲೆ ಬರೆದಿಡುತ್ತಿದ್ದುದರಿಂದ ಅದರ ಹೆಸರೇ ಪುಸ್ತಕಕ್ಕೆ ಬಿತ್ತೆಂದು ಭಾವಿಸಲಾಗಿದೆ.

**ಕಾಗದ** ಮತ್ತು **ಕಲಮು** (ಲೇಖನಿ) ಇವೆರಡೂ ಸಂಸ್ಕೃತದಲ್ಲಿ ಒಂಭತ್ತನೇ ಶತಮಾನದಿಂದ ಈಚೆಗೆ ತೋರಿ ಬಂದ ಪದಗಳು. ಈಗ ಹೆಚ್ಚುಕಡಿಮೆ ಎಲ್ಲ ಭಾರತೀಯ ಭಾಷೆಗಳಲ್ಲಿ **ಕಾಗದ** ಇದೆ. ಬಟ್ಟೆ ಚಿಂದಿ ಮೊದಲಾದವುಗಳಿಂದ ಕಾಗದ ತಯಾರಿಸುವುದನ್ನು ಕ್ರಿಸ್ತಶಕಾರಂಭದ ಹೊತ್ತಿಗೆ ಚೀನೀಯರು ಕಂಡುಹಿಡಿದಿದ್ದರೂ ಆ ಕಲೆ, ಕ್ರಿ. ಶ. ಎಂಟನೇ ಶತಮಾನದಲ್ಲಿ ಅರಬರಿಗೂ ಚೀನೀಯರಿಗೂ ಸಮರ್‌ಕಂದ್ ಬಳಿ ನಡೆದ ಸಮರದ ನಂತರ ಅರಬರಿಗೆ ತಿಳಿದು ಇರಾಣಕ್ಕೆ ಹಬ್ಬಿತು. ಇರಾಣದಲ್ಲಿ ಚಿಂದಿ ಮತ್ತು ಒಂದು ಜಾತಿಯ ಅಗಸೆಯ ದೇಟಿನಿಂದ ಧಾರಾಳವಾಗಿ ಕಾಗದ ತಯಾರಾಗತೊಡಗಿತು. ಮೊದಲು ತುರ್ಕರ ಮೂಲಕ ಚೀನದಿಂದ ಬರುತ್ತಿದ್ದ ಈ ಪದಾರ್ಥಕ್ಕೆ ಇದ್ದ **ಕಾಗಜ್** ಎಂಬ ತುರ್ಕಿ ಶಬ್ದವೇ ಪಾರಸೀಕ ಭಾಷೆಗೂ ದಾಟಿ ಭಾರತದಲ್ಲಿ ಅದು **ಕಾಗದ**ವಾಯಿತು. ಬೇರೆ ಬೇರೆ ಭಾರತೀಯ ಭಾಷೆಗಳಲ್ಲಿ **ಕಾಗಜ**, **ಕಾಗದ**, **ಕೌಗತ**, **ಕಾಕಾಜ** ಇತ್ಯಾದಿ ರೂಪಗಳಲ್ಲಿ ಅದು ಇದೆ. ನೇಪಾಳಿ ಭಾಷೆಯಲ್ಲಿ **ಕಾಯುಗತ** ಎಂಬ ಒಂದು ಹಸ್ತಲಿಖಿತ ಪುಸ್ತಕವೇ ಇದ್ದು ಅದು **ಕಾಗದ**ದ್ದೇ ಅವತಾರವೆಂದು ಸುನೀತಿ ಚಟರ್ಜಿ ಹೇಳುತ್ತಾರೆ.

**ಕಲಮು** ಕನ್ನಡದಲ್ಲಿ ಅಷ್ಟಾಗಿ ಬೇರು ಇಳಿಸದಿದ್ದರೂ **ಕಲಮುದಾನಿ** ಇತ್ಯಾದಿ ಕುಲನಾಮಗಳಲ್ಲಿ ಅದು ಉಳಿದುಕೊಂಡಿದೆ. ಸಂಸ್ಕೃತದಲ್ಲಿ ಕಾಶ್ಮೀರಿ ಕವಿಗಳು ಅದನ್ನು ಧಾರಾಳವಾಗಿ ಬಳಸಿದ್ದಾರೆ. **ಕಲಮು** ಎಂದರೆ ಲೇಖನಿ. ಉರ್ದುಕೋಶಗಳು ಅದು ಅರಬ್ಬಿ ಪದವೆಂದು ಹೇಳುತ್ತವೆ. ಇಂಗ್ಲೀಷಿನಲ್ಲಿ Colamos ಇದೆ; ಅದು ಗ್ರೀಕ್ **ಕಲಮೊಸ್**ನಿಂದ ಲ್ಯಾಟಿನ್ ಮೂಲಕ ಆ ಭಾಷೆಗೆ ಬಂದದ್ದು. **ಕಲಮೊಸ್** ಎಂದರೆ ಕತ್ತರಿಸಿ **ಲೇಖನಿ**ಗಾಗಿ ಉಪಯೋಗಿಸುತ್ತಿದ್ದ ಒಂದು ಬಗೆಯ **ಗಲಗು** ಅಥವಾ **ಗಲಕು**- ಎಂಬ ದಪ್ಪನೆಯ ಹುಲ್ಲು. ಈ **ಗಲಗು** ಕೂಡ ಕನ್ನಡ ಪದವಿದ್ದಂತೆ ಕಾಣೆ. ತೆಲುಗಿನಲ್ಲಿ **ಕಲುಗು** ಎಂಬ ರೂಪದಲ್ಲಿದೆ. ಏನಿದ್ದರೂ **ಕಲಮು** ನಮಗೆ ಬಂದದ್ದು ಪಾರಸೀಕ ಭಾಷೆಯ ಮೂಲಕ ಅರಬ್ಬಿಯಿಂದ.

ಇನ್ನು **ಲಿಪಿ**- (ಬರವಣಿಗೆ). ಇದನ್ನು ಸಂಸ್ಕೃತದ ಕೋಶಗಳು **ಲಿಪ್** (ಹಚ್ಚು, ತೊಡೆ) ಧಾತುವಿನ ಕೆಳಗೆ ಕೊಡುತ್ತವೆ (ಪದಾರ್ಥ ಚಿಂತಾಮಣಿ—೨೫). ಪಾಣಿನೀಯ ಸೂತ್ರದಲ್ಲಿ ಲಿಖಿತ ಎಂಬರ್ಥದಲ್ಲಿ **ಲಿಪಿ**, **ಲಿಬಿ** ಬರುವುದರಿಂದ ಸಂಸ್ಕೃತದಲ್ಲಿ ಅದು ಕನಿಷ್ಠ ೨೪೦೦ ವರ್ಷ ಹಳೆಯ ಶಬ್ದ. ಆದರೆ ಅಶೋಕನ ಶಾಸನಗಳಲ್ಲಿ **ಲಿಪಿ**ಯೊಡನೆ **ದಿಪಿ** ಎಂಬ ರೂಪವೂ ಕಾಣಿಸುತ್ತದೆಂದೂ **ದಿಪಿ**ಯದೇ ಒಂದು ರೂಪ **ಲಿಪಿ**ಯಾಗಿದ್ದು ಅದು ಹಳೇ ಪಾರಸೀಕ ಭಾಷೆಯ ದಾನವೆಂದೂ ಸುನೀತಿ ಚಟರ್ಜಿ ಹೇಳುತ್ತಾರೆ. ಕಾಶ್ಮೀರಿ ಸಂಸ್ಕೃತ ಕವಿಗಳು **ದಿವಿರ** ಎಂಬ ಪದವನ್ನು **ಸರಕಾರಿ ಲೇಖಾಧಿಕಾರಿ**, ಕರಣಿಕಯೆಂಬರ್ಥದಲ್ಲಿ ಕ್ರಿ. ಶ. ೧೦ನೇ ಶತಮಾನದಲ್ಲಿ ಬಳಸಿದ್ದಾರೆ. ಇದು ಹಳೇ ಪಾರಸೀಕ ಭಾಷೆಯ **ದಿಪಿವರ**, (ಹೊಸ ಪಾರಸೀಕ ಭಾಷೆಯ **ದಬೀರ್**) ಸಂಸ್ಕೃತೀಕರಣ ಹೊರತು ಬೇರೆ ಅಲ್ಲ. ಹಳೇ ಪಾರಸೀಕ ಭಾಷೆಯಲ್ಲಿ **ನಿಪಿಸ್ತ** (ಲಿಖಿತ) ಪದವಿದೆ. ನಮ್ಮ **ಲಿಪಿ**ಗೆ ಈ **ನಿಪಿಸ್ತ** ಮೂಲವಾಗಿರಲೂಬಹುದು.

—**ಪಾವೆಂ.**

# ಸ್ಟೇಟ್ ಬ್ಯಾಂಕ್‌ನಲ್ಲಿ ಉಳಿತಾಯ – ನಿಮ್ಮ ಭಾಗ್ಯದ ಬಾಗಿಲು ತೆರೆಯಲು ಸರಳೋಪಾಯ!




ನಮ್ಮ 6000 ಕ್ಕಿಂತಲೂ ಹೆಚ್ಚು ಶಾಖೆಗಳಲ್ಲಿ ನಿಮ್ಮ ಸಮೀಪದ ಶಾಖೆಗೆ ಬನ್ನಿರಿ— ನಿಮ್ಮ "ಆರ್ಥಿಕ ಯೋಜನೆ"ಗೆ ನಮ್ಮಲ್ಲಿ ಬೇರೆ ಎಷ್ಟೆಲ್ಲ ವಿಧಾನಗಳಿವೆ ನೋಡಿರಿ.





ಸ್ಟೇಟ್ ಬ್ಯಾಂಕ್

CHAITRA.SBI.88) LAD



# ತುಳುನಾಡಿನ ಕೋಳಿ ಅಂಕ

**ಬಿ. ನಾಮನರಾವ್**

ಮೂಡಣ ಸಹ್ಯಾದ್ರಿಯ ಅಡಿಯಿಂದ ಪಡುವಣ ಕಡಲ ತಡಿಯವರೆಗೂ ವಿಶಾಲವಾಗಿ ಹಬ್ಬಿರುವ ನಾಡೇ ಪರಶುರಾಮನ ಕ್ಷೇತ್ರಗಳಲ್ಲೊಂದಾದ ತುಳುನಾಡೆಂದೆನಿಸಿದ ದಕ್ಷಿಣ ಕನ್ನಡ ಜಿಲ್ಲೆ. ಈ ಜಿಲ್ಲೆಯ ಸೌಂದರ್ಯದ ಖನಿಯನ್ನು ವೀಕ್ಷಿಸಲು ಹೊರನಾಡಿನಿಂದ ಹೊಸಬರಾಗಿ ಬಂದವರಿಗೆ ಅಚ್ಚರಿಯನ್ನುಂಟುಮಾಡುವಂತೆ ಕಣ್ಣಿಗೆ ಕೋಳಿ ಅಂಕದ ಅಂದದ ನೋಟವೇ ಮೊತ್ತ ಮೊದಲಾಗಿ ಕಾಣುವುದು. ಇಲ್ಲಿ ವಾಸಿಸುವ ಗ್ರಾಮೀಣ ಜನರ ಹಲವಾರು ಪ್ರತಿಷ್ಠೆಯ ಮನರಂಜನೆಗಳಲ್ಲಿ ಕೋಣಗಳ ಓಟದ (ಕಂಬಳ) ಸ್ಪರ್ಧೆಯಂತೆಯೇ ಕೋರಿಕಟ್ಟ, ಕೋಳಿ ಕಟ್ಟ ಅಥವಾ ಕೋಳಿ ಅಂಕ ಕೂಡ ಒಂದು ಸೊಗಸಿನ ಸ್ಪರ್ಧಾತ್ಮಕವಾದ ಆಟವಾಗಿದೆ. ನಾಡಿನಲ್ಲಿ ಸಾಂಪ್ರದಾಯಿಕವಾಗಿ ಸುಯ್ ಎಂದು ಬೀಸುವ ಬಿರುಗಾಳಿಯೊಂದಿಗೆ ಬಿರಬಿರನೆ ಸುರಿಯುವ ಮಳೆಯೊಂದಿಗೆ ಸಿಡಿಲ್ಮಿಂಚುಗಳ ಅರ್ಭಟಗಳು ಕ್ರಮೇಣ ಕುಗ್ಗಿದೊಡನೆ ಜನರ ಕಣ್ಮುಂದೆ ಮುಂಬರುವ ಹಬ್ಬ ಹರಿದಿನಗಳು ಓಡೋಡಿ ಬರುವಂತೆ ಭಾಸವಾಗುವುದು. ಕಾಲಕ್ಕೆ ತಕ್ಕಂತೆ ಬೆಳೆಯ ನಿಷ್ಪೈಯಿಂದ ತನ್ನ ಕಿರುವಾಲಿಗೆಯನ್ನು ಹೊರಚಾಚಿದೊಡನೆ ಜನರ ಉತ್ಸಾಹವು ಒಮ್ಮಿಂದೊಮ್ಮೆಗೆ ಇಮ್ಮಡಿಸುವುದು. ಈ ಹುಮ್ಮಸ್ಸಿನ ಉತ್ಸಾಹವನ್ನು ಅನುಭವಿಸುವುದರೊಂದಿಗೆ ಅದರ ಸವಿಯನ್ನು ಉಣ್ಣಲು ಗ್ರಾಮೀಣ ಜನಸಮೂಹದೊಂದಿಗೆ ತುಳುನಾಡಿನ ಜನರ ಪರಂಪರೆಯಲ್ಲಿ ಹಾಸು ಹೊಕ್ಕಾಗಿರುವ ಕಂಬಳ ಮತ್ತು ಕೋಳಿ ಅಂಕಗಳು ನಾಡಿನಾದ್ಯಂತ ಪ್ರಾರಂಭವಾಗುವುವು.

ಕೋಳಿ ಅಂಕ ದಕ್ಷಿಣ ಕನ್ನಡ ಜಿಲ್ಲೆಗೆ ಮಾತ್ರ ಸೀಮಿತವಾಗಿರದೆ ಉತ್ತರ ಕನ್ನಡ ಜಿಲ್ಲೆಯ ಕರಾವಳಿ ಪ್ರದೇಶದಲ್ಲೂ ಈಗ ಕೇರಳದಲ್ಲಿರುವ ಮೊದಲು ತುಳುನಾಡಿನ ಭಾಗವಾದ ಕಾಸರಗೋಡು ತಾಲೂಕಿನಲ್ಲೂ ಮತ್ತು ಸಹ್ಯಾದ್ರಿಯ ಸರಹದ್ದಿನಲ್ಲಿ ಹುದುಗಿರುವ ಮಲೆನಾಡಿನ ಮರೆಯಲ್ಲೂ ನೋಡುವವರಿಗೆ ಕಣ್ಣಿಗೆ ಆನಂದವನ್ನುಂಟು ಮಾಡಿ, ಮನದಣಿಸುವ ಒಂದು ಸೊಗಸಿನ ಆಟ. ಮೊದ ಮೊದಲು ಬಂಟ ಸಮಾಜದ ಕೃಷಿಕ ವರ್ಗದವರು ತಮ್ಮ ಬಿಡು ದಿನಗಳಲ್ಲಿ

ಈ ಸೊಬಗಿನ ಸ್ಪರ್ಧೆಯನ್ನು ಜಿಲ್ಲೆಯ ಗ್ರಾಮೀಣ ಪ್ರದೇಶಗಳಲ್ಲಿ ಯಾವ ಸಾಮಾಜಿಕ ಕಟ್ಟುಪಾಡುಗಳೂ ಇಲ್ಲದೆ ಜರುಗಿಸುತ್ತಿದ್ದರು. ಇತರ ಸಮಾಜದ ಕೃಷಿಕರು ಕೂಡ ಹೆಚ್ಚಿನ ಆಸಕ್ತಿಯಿಂದ ಸಕ್ರಿಯವಾಗಿ ಕೋಳಿ ಅಂಕಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಕ್ರಿಸ್ತ ಶಕ ೧೪ನೇ ಶತಮಾನದ ಮೊದಲ್ಗೊಂಡು ೧೬ನೇ ಶತಮಾನದ ಮಧ್ಯ ಕಾಲದವರೆಗೂ ತುಳುನಾಡು ವಿಜಯನಗರ ಸಮ್ರಾಟರ ಅಧೀನದಲ್ಲಿದ್ದಾಗ ಈ ಕೋಳಿ ಅಂಕ ನಾಡಿನಾದ್ಯಂತ ಜನರ ಅಚ್ಚು ಮೆಚ್ಚಿನ ಮನರಂಜನೆಗಳಲ್ಲಿ ಒಂದಾಗಿತ್ತು ಎಂಬುದಾಗಿ ಇತಿಹಾಸದ ಪುಟಗಳಲ್ಲಿ ಎದ್ದು ಕಾಣುತ್ತದೆ.

"ಕಲ್ಕತ್ತಾ ರಿವ್ಯೂ"ವಿನಲ್ಲಿ ಒಬ್ಬ ಬರಹಗಾರರನು ಕೋಳಿ ಅಂಕವನ್ನು ವೀಕ್ಷಿಸಿ ಅಚ್ಚರಿಪಟ್ಟು ಆ ದರ್ಶನದ ಲಾಭವನ್ನು ಈ ರೀತಿಯಾಗಿ ವರ್ಣಿಸಿರುವನು: "ಹೊರನಾಡಿನಿಂದ ಈ ಜಿಲ್ಲೆಯ (ತುಳುನಾಡು) ನಂದನವನದ ಸೌಂದರ್ಯದ ಸೊಬಗನ್ನು ಉಣ್ಣಲು ಆಗಮಿಸಿದವರು ಮೊತ್ತ ಮೊದಲಾಗಿ ಇಲ್ಲಿ ಸಾಂಪ್ರದಾಯಿಕವಾಗಿ ಜರಗುತ್ತಿರುವ ಕೋಳಿ ಅಂಕವನ್ನು ವೀಕ್ಷಿಸಿದಲ್ಲಿ ವಿಸ್ಮಯ ಪಡದೆ ಇರಲಾರರು. ಕೋಳಿ ಅಂಕದ ನಿಶ್ಚಿತ ದಿನದಂದು ಜರಗುವ ಸ್ಪರ್ಧೆಯಲ್ಲಿ ಪಾಲ್ಗೊಳ್ಳುವರು ಬಹಳಷ್ಟು ಜಾತಿಯ ಬಣ್ಣ ಬಣ್ಣದ ಕೋಳಿಗಳನ್ನು ಒಂದೆಡೆ ಒಟ್ಟುಗೂಡಿಸುವರು. ಕೆಲವರಂತೂ ಸ್ಪರ್ಧೆಗಾಗಿಯೇ ಅವುಗಳನ್ನು ಕೊಂಡುಕೊಳ್ಳುವರು. ಕೋಳಿ ಅಂಕ ಪ್ರಾರಂಭವಾದೊಡನೆ ನೆರೆದ ಜನ ಉತ್ಸಾಹ, ಕಾತರ, ಕುತೂಹಲದಿಂದ ತಮ್ಮ ಬೆನ್ನು ಬಾಗಿಸಿ ಎರಡು ಹುಂಜಗಳ ತುರುಸಿನ ಕಾದಾಟವನ್ನು ವೀಕ್ಷಿಸುವುದರಲ್ಲಿ ತಲ್ಲೀನರಾಗುವರು. ಕೋಳಿ ಅಂಕಗಳು ಸಾಮಾನ್ಯವಾಗಿ ಹಬ್ಬ ಹರಿದಿನಗಳಾದ ಗೋಕುಲಾಷ್ಟಮಿ, ವಿನಾಯಕ ಚತುರ್ಥಿ, ಸಂಕ್ರಾಂತಿ ಮತ್ತು ದಸರಾ ದೀಪಾವಳಿಗಳ ಮರು ದಿನಗಳಲ್ಲಿ ಹಳ್ಳಿಯ ಒಂದು ಮೂಲೆಯಲ್ಲಿ ಏರ್ಪಡುತ್ತವೆ. ಸ್ಪರ್ಧಿಸಲಿಕ್ಕಿರುವ ಹುಂಜದ ಕಾಲಿಗೆ ಚೂಪಾದ ಕತ್ತಿ (ಬಾಳು)ಯನ್ನು ಕಟ್ಟುವರು. ಕೋಳಿ ಅಂಕದಲ್ಲಿ ಜಯ ಹೊಂದಿದ ಕೋಳಿಯ ಯಜಮಾನನಿಗೆ ಸೋತು ಹೋದ ಅಥವಾ ಸತ್ತುಹೋದ ಕೋಳಿಯು ಸಿಗುವುದು."

ಮಂದ ಬುದ್ಧಿಯುಳ್ಳ ಕೋಣವನ್ನು ದಿನಂಪ್ರತಿ ಪಳಗಿಸುವುದರೊಂದಿಗೆ ತರಬೇತುಗೊಳಿಸಿ ಅವುಗಳ ಬುದ್ಧಿಯನ್ನು ಮುಮ್ಮಡಿಸಿ ಕಂಬಳದ ಸ್ಪರ್ಧೆಗೆ ಅಣಿಗೊಳಿಸುವಂತೆ ಹೆಚ್ಚಿನ ಕೃಷಿಕರು ಹುಂಜವನ್ನು ಕೋಳಿ ಅಂಕಕ್ಕೆಂದೇ ಮೀಸಲಾಗಿರಿಸುವುದೂ ಉಂಟು. ಕೋಳಿ ಅಂಕದಲ್ಲಿ ಹುಂಜವು ತನ್ನ ಉಳಿವಿಗಾಗಿ ಸಾಕಷ್ಟು ಮುಂದಾಲೋಚನೆಯನ್ನು ಉಪಯೋಗಿಸಿ ಪ್ರತಿಷ್ಠೆಯ ಅಂಕದಲ್ಲಿ ಗೆದ್ದು ತನ್ನ ನೆಚ್ಚಿನ ಯಜಮಾನನ ಮೆಚ್ಚುಗೆಗೂ ಪ್ರೀತಿಗೂ ಪಾತ್ರವಾಗುವುದು. ಕಂಬಳಕ್ಕೆಂದೆ ಮೀಸಲಾಗಿರುವ ಕೋಣಗಳನ್ನು ಪುಷ್ಟಿಯಾಗಿ ಸಾಕಿ ಸಲಹಿ ಓಟಕ್ಕೆ ಅಣಿ ಮಾಡುವಂತೆ ಹುಂಜನನ್ನು ಮುದ್ದಾದ ಗಿಣಿಯಂತೆ (ಪಂಜರದಲ್ಲಿರಿಸದೆ) ಮನೆಯ ಜಗಲಿ ಅಥವಾ ಚಾವಡಿಯ ಒಂದು ಕಿರು ಮೂಲೆಯಲ್ಲಿ ಕಟ್ಟಿ ಹಾಕಿ, ಚೆನ್ನಾಗಿ ಪುಷ್ಟಿಗೊಳಿಸಿ 'ಜಂಬದ ಕೋಳಿ'ಯನ್ನಾಗಿ ಪರಿವರ್ತಿಸುವರು. ಕೋಳಿ ತಿನ್ನದ ಆಹಾರವಿಲ್ಲ. ಆದರೆ ಅಂಕದ ಕೋಳಿಗೆ ಮಾತ್ರ ದಿನಂಪ್ರತಿ ಭತ್ತದೊಂದಿಗೆ ಒಂದಿಷ್ಟು ಕುಡಿಯಲು ಶುದ್ಧವಾದ ನೀರನ್ನೂ ಒದಗಿಸುವರು. ಸದಾ ಕಾಲ ಅಂಕದ ಸ್ಪರ್ಧೆಗೆ ಅಳವಡಿಸಲು ಕಟ್ಟಿ ಹಾಕಿದ ಹುಂಜದ ರಕ್ತ ಚಲನೆಯು ಚೆನ್ನಾಗಿ ವೃದ್ಧಿಸಲು ಊರಲ್ಲಿ ತಯಾರಿಸಿದ ಒಳ್ಳೆ ಒಲೆ ಬೆಲ್ಲ ಮತ್ತು ನೀರುಳ್ಳಿಯನ್ನು ಕೂಡ ತಿನ್ನಿಸುವುದಿದೆ. ಅಂಕದ ಕೋಳಿಗೆ ಅನ್ನದ ಮಿತಿ ಇದೆ. ಹೆಚ್ಚು ಅನ್ನ ನೀಡಿದರೆ ಹುಂಜವು ಗುಂಡುಕಲ್ಲಿನಂತೆ ಬೊಜ್ಜಾಗಿ ಬೆಳೆದು ಅಂಕಗಳಲ್ಲಿ ಸಜ್ಜಾಗಿ ಕಾದಾಡಲು ಅನರ್ಹವಾಗುವುದು ಎಂದೆಣಿಸಲಾಗುತ್ತದೆ.

ಕೋಳಿಗಳನ್ನು ಆಹಾರಕ್ಕೆಂದೇ ಪೋಷಿಸದೆ ಅವುಗಳ ಅಂತರಂಗದ ಶಕ್ತಿಯನ್ನು ಅರಿತ ನುರಿತ ಕೃಷಿಕರು ಮೊಟ್ಟೆಯಿಂದಲೂ ಅಕ್ಕರೆಯಿಂದ ಬೆಳೆಸಿ ಅವುಗಳನ್ನು ಕೋಳಿ ಅಂಕಗಳ ಅಖಾಡಕ್ಕೆ ಇಳಿಸುವರು.

ಕೋಳಿಗರ್ವೆಂಬ ನಾಣ್ಣುಡಿಯೊಂದು ತುಳು

ನಾಡಿನಲ್ಲಿ ಬೆಳೆದು ಬಂದಿದೆ. ಕೋಳಿಗಳಲ್ಲಿ ಹಲವಾರು ತರಹದ ಜಾತಿ ಮತ್ತು ಒಂದನ್ನೊಂದು ಮೀರಿಸುವ ಬಣ್ಣ ಬಣ್ಣದ ಚುಕ್ಕಿಗಳಿಂದ ಕೂಡಿದ್ದಾಗಿದೆ. ತುಳು ಭಾಷೆಯಲ್ಲಿ ಹುಂಜಕ್ಕೆ ಕೆಮ್ಮೈರ್ಯೆ (ಕೆಂಪು, ಕಪ್ಪು ಮಿಶ್ರಿತ ಬಣ್ಣದು) ಬೊಳ್ಳೆ (ಬಿಳಿ ಬಣ್ಣದ್ದು) ಜಾತಿ ಬೊಳ್ಳೆ, ಗೆಂದ ಬೊಳ್ಳೆ, ಕಡಲೆ, ಗಿಡಿಯೆ (ಚುಕ್ಕಿಯುಳ್ಳದ್ದು) ಕೆಂಪು ಕಡಲೆ, ಕಪ್ಪು ಕಡಲೆ, ಪಾಹಿಪೆ, ಮಂಜಳೆ, ಕೆಂಪು ಕಾಪೆ, ನೀತಿ, ಕುಪ್ಪುಳಿ, ಪಂಚಣಿ ಮರಿಯೆ, ಪರ್ಡಿಂಗೆ ಮುಂತಾದ ಹೆಸರುಗಳಿಂದ ಕರೆಯಲ್ಪಡುವ ಜಾತಿಯ ಕೋಳಿಗಳಿವೆ. ಅವುಗಳಲ್ಲಿ ಕೆಮ್ಮೈರ್ಯೆ ಮತ್ತು ಕಡಲೆ ಜಾತಿಯ ಹುಂಜಗಳು ಗರ್ವಿಷ್ಟ ಹಾಗೂ ಜಗಳಗಂಟ ಜಾತಿಯವು.

ಹೇಂಟೆಯನ್ನು ಸಂತಾನಾಭಿವೃದ್ಧಿಗಾಗಿ ಸಾಕಿ ಸಲಹುವುದಿದ್ದರೆ, ಹುಂಜವನ್ನು ಪಚ್ಚಾಗಿ ಕೋಳಿ ಅಂಕಗಳಿಗಾಗಿಯೇ ಪೋಷಿಸಿ ಮೀಸಲಾಗಿರಿಸುವರು. ಮುದ್ದಿನ ಮಕ್ಕಳನ್ನು ಅಕ್ಕರೆಯ ಹೆಸರಿನಿಂದ ಕರೆಯುವಂತೆ ಹುಂಜಗಳನ್ನು ಅವುಗಳ ಯಜಮಾನರು ರಾಮಾಯಣ ಮತ್ತು ಮಹಾಭಾರತದ ವೀರ ಪುರುಷರ ಹೆಸರಿಟ್ಟು ಕರೆಯುವುದುಂಟು. ಪ್ರೀತಿಯಿಂದ ಸಾಕಿ ಬೆಳೆಸಿದ ಹುಂಜದ ಕಿವಿಗಳಿಗೆ ಹೊಳೆಯುವ ಹೊನ್ನಿನ ಒಂಟಿಗಳನ್ನು ಸಿಕ್ಕಿಸುವವರೂ ಇದ್ದರಂತೆ. ಆದರೆ ಇಂದು ಹೊನ್ನಿನ ಕ್ರಯವು ಗಗನಕ್ಕೇರಿರುವುದರಿಂದ ಬೆಳ್ಳಿಯಿಂದ ಮಾಡಿದ ಒಂಟಿಗಳನ್ನು ಕಿವಿಗೆ ತೊಡಿಸುವದಿದೆ. ಹುಂಜದ ಸೌಂದರ್ಯವನ್ನು ಮುಮ್ಮಡಿಸಲು ಅದಕ್ಕೆ ಹುಟ್ಟಿನಿಂದಲೂ ಬಂದಿರುವ ಜುಟ್ಟನ್ನು ಅಚ್ಚುಕಟ್ಟಾಗಿ ಕತ್ತರಿಸುವವರೂ ಇದ್ದಾರೆ. ಹುಂಜದ ಜುಟ್ಟಿಗೆ ನಾಮ ಕೊಟ್ಟು, ಇರೆ ಕೊಟ್ಟು, ಕತ್ತಿ ಕೊಟ್ಟು ಮತ್ತು ಅಚೆಲು ಕೊಟ್ಟು ಎಂಬ ಹೆಸರುಗಳಿವೆ. ಕತ್ತರಿಸಿದ ಜುಟ್ಟನ್ನು ಅದೇ ಹುಂಜಕ್ಕೆ ಆಹಾರ ರೂಪದಲ್ಲಿ ಉಣ್ಣಿಸಿದಲ್ಲಿ ಅದರ ಗರ್ವ ಹೆಚ್ಚುವುದೆಂದು ನಂಬಿಕೆ ಇಲ್ಲಿಯ ಜನರಲ್ಲಿದೆ.

ಕೋಳಿ ಅಂಕಗಳು ಸರ್ವಸಾಮಾನ್ಯವಾಗಿ ಹಬ್ಬ ಹುಂದಿನಗಳಲ್ಲದೆ, ಪರ್ಷಪ್ರತಿ ಜರುಗುವ ಊರ ಜಾತ್ರೆ, ಭೂತದ ಕೋಲದ ಹರಕೆಯಾದ ಮರು ದಿನ ಊರ ಗುರಿಕಾರರ ಅಥವಾ ಸಮಾಜದ ಗಣ್ಯ ವ್ಯಕ್ತಿಗಳ ಸಮಕ್ಷಮದಲ್ಲಿಯೇ ನಡೆಯುವುದು ರೂಢಿ. ಹಿಂದೆ ಸಿನೆಮಾ, ನಾಟಕಗಳ ಗಂಧ ಗಾಳಿಯನ್ನರಿಯದ ಗ್ರಾಮೀಣ ಜನರಿಗೆ ವರ್ಷಪ್ರತಿ ನಡೆಯುವ ಜಾತ್ರೆ ಮತ್ತು ದೈವದ ಕೋಲ ಮತ್ತು ನೇಮವೇ ಮುಂತಾದವುಗಳು ಸಂಭ್ರಮದ ದಿನಗಳಾಗಿದ್ದವು. ಅವುಗಳನ್ನು ವೀಕ್ಷಿಸಲು ಊರು ಪರವೂರುಗಳಿಂದ ನೆಂಟರಿಷ್ಟರು, ಆಪ್ತ ಮಿತ್ರರು ಅತಿಥಿಯಾಗಿ ಒಂದು ಹಳ್ಳಿಯಿಂದ ಇನ್ನೊಂದು ಹಳ್ಳಿಗೆ ಪದಾರ್ಪಣೆಗೈಯುವ ಸಂಪ್ರದಾಯವಿದ್ದಿತು. ಮನೆಗೆ ಬಂದಿಳಿದಿರುವ ಅತಿಥಿ ಮತ್ತು ಬಂಧು ಬಳಗದವರನ್ನು ಉಪಚರಿಸುವುದು ಚಿಕ್ಕ ಸಂಸಾರದ ಮನೆಯ ಯಜಮಾನನ ಆದ್ಯ ಕರ್ತವ್ಯಗಳಲ್ಲೊಂದು. ಹಳ್ಳಿಯ ಹಳೆ ಮನೆಗೆ ಬಂದಿರುವ ಅತಿಥಿಗಳನ್ನು ಸತ್ಕರಿಸಲು ಒಳ್ಳೆಯ ಕೋಳಿಪಲ್ಯದೊಂದಿಗೆ ರೊಟ್ಟಿ ಒಲೆಯಿಂದ ಎಲೆಗೆ ಬೀಳದಿದ್ದರೆ, ಬಂದಿಳಿದಿರುವ ಅತಿಥಿಗೂ, ಮನೆಯ ಒಡೆಯನಿಗೂ ಏನೊಂದು





ಸಮಾಧಾನವಾಗುತ್ತಿರಲಿಲ್ಲ. ಹೇಗೂ ಅಂಕಕ್ಕೆಂದು ಅಕ್ಕರೆಯಿಂದ ಸಾಕಿದ ಹುಂಜವಿದೆ. ಮರುದಿನವೇ ಅವನ್ನೇ ಕೋಳಿ ಅಂಕಕ್ಕೆ ಒಯ್ಯುವರು. ಆಚಾರಕ್ಕೂ ಆಯಿತು, ಸುಖಕ್ಕೂ ಆಯಿತು ಎಂಬ ನೆಲೆಯಲ್ಲಿ ಕೋಳಿ ಅಂಕದಲ್ಲಿ ಅದು ಸೋತರೆ ಆಗುವ ನಷ್ಟವು ಒಂದು ಕೋಳಿಯಾದರೂ, ಹುಂಜವು ಕಾದಾಡಿ ಗೆದ್ದರೆ, ಒಂದೆರಡು ಕೋಳಿಗಳು ತಮ್ಮ ಬಗಲಿಗೆ ಬೀಳುವುದು. ಅದರಿಂದಾಗಿ ವರ್ಷಂಪ್ರತಿ ಸಾಂಪ್ರದಾಯಿಕವಾಗಿ ನಡೆಯುವ ಊರಿನ ಜಾತ್ರೆ ಮತ್ತು ಕೋಲಗಳು ಮುಗಿದೊಡನೆ ಕೋಳಿ ಅಂಕಗಳಲ್ಲಿ, ಹಳ್ಳಿಗಳಲ್ಲಿ ಹತ್ತು ಸಮಸ್ತರು ಪಾಲುಗೊಳ್ಳುವ ರೂಢಿಯೂ ಬೆಳೆದು ಬಂದಿದೆ.

ಹಿಂದೆ, ನಾಡು ಕಗ್ಗಾಡಿನಿಂದ ಆವರಿಸಿದ್ದಾಗ, ಹೆಚ್ಚಿನ ಕೋಳಿ ಅಂಕಗಳು ಗ್ರಾಮೀಣ ಪ್ರದೇಶದ ಒಂದು ಕಿರುಮೂಲೆಯ ಕಳ್ಳಂಗಡಿ (ಕಳ್ಳ, ಅಂಗಡಿ) ಯ ಸಮೀಪವೇ ಜೆಕ್ಕಣೆಯ ಬಿಸಿಲಿಗೆ ಪ್ರಾರಂಭವಾಗಿ, ಬೆಳದಿಂಗಳ ಮಂದಕಾಂತಿಯು ಮೂಡುವ ವರೆಗೂ ನಡೆಯುತ್ತಿದ್ದವು. ಪ್ರತಿಷ್ಠೆಯ ಅಂಕಗಳಾಗಿದ್ದರೆ ಕತ್ತಲಾದ ಮೇಲೂ ಉರಿದ ತಾಳೆಗರಿಯ ದೀವಟಿಗೆ ಅಥವಾ ಪ್ರಕಾಶ ಬೀರುವ ಗ್ಯಾಸ್ ಲೈಟಿನ ಬೆಳಕಿನೊಂದಿಗೆ ಅಂಕವು ಮುಗಿಯುವ ವರೆಗೂ ಜರುಗುತ್ತಿದ್ದವು. ಇಂದು ಬಹುತೇಕ ಕಳ್ಳಂಗಡಿಗಳು (ಶೇಂದಿ ಅಂಗಡಿ) ರಾಜಮಾರ್ಗದ ಪಕ್ಕದಲ್ಲಿಯೇ ಇರುವುದರಿಂದ ಅಂಕಗಳು ಕಲಾತ್ಮಕವಾಗಿ ಮುಸ್ಸಂಜೆಯಲ್ಲಿ ವಿದ್ಯುದ್ದೀಪಗಳ ಮುಂಬೆಳಕಿನ ಸಹಾಯದಿಂದ ತುಳುನಾಡಿನ ಕರಾವಳಿ ಉದ್ದಕ್ಕೂ ಜರಗುವದನ್ನು ಅನತಿ ದೂರದಿಂದಲೇ ಗುರುತಿಸಬಹುದಾಗಿದೆ. ಹಳ್ಳಿಗಳಲ್ಲಿ ಜರಗುವ ಕೋಳಿ ಅಂಕಗಳನ್ನು ಹೆಣ್ಣು ಮಕ್ಕಳು ಮತ್ತು ಮಹಿಳೆಯರು ದೃಷ್ಟಿಸಲೇ ಬಾರದೆಂಬ ನಂಬಿಕೆ ಹಳ್ಳಿಗಳಲ್ಲಿ ಈಗಲೂ ಇದೆ. ಈ ಕ್ರಮವು ಮೊದಲಿನಿಂದಲೂ ರೂಢಿಯಾಗಿ ಬಂದಿರಬೇಕು. ಇಂದು ಕೂಡಾ ಕೋಳಿ ಅಂಕಗಳಲ್ಲಿ ಸಕ್ರಿಯವಾಗಿ ಪಾಲುಗೊಳ್ಳುವವರು ಮತ್ತು ಅದರ ಸವಿಯನ್ನು ಉಣ್ಣುವವರು ಗಂಡಸರೇ. ಆದರೆ ಕೋಳಿ ಪಲ್ಯವನ್ನು ಕುಟುಂಬದ ಎಲ್ಲರೂ ಒಟ್ಟಾಗಿ ಕಲೆತು ಒಟ್ಟೊಟ್ಟಿಗೆ ಅತಿ ಸಂತೋಷದಿಂದ ಉಣ್ಣಬಹುದು.

ಕೋಳಿ ಅಂಕಗಳು ನಡೆಯುವ ದಿನ, ವೇಳೆ ಮುಂತಾದವುಗಳು ಅತಿ ಶೀಘ್ರವಾಗಿ ಸುತ್ತಲಿನ ಹಳ್ಳಿಗಳಿಗೆ ತಿಳಿಯುವದು. ಅಂಕಗಳಲ್ಲಿ ಪಾಲುಗೊಳ್ಳುವವರು ಮೊಣಕಾಲಿನ ವರೆಗೂ ಬಿಳಿ ಮಲ್ಲಿನ ಅಡ್ಡ ಪಂಜೆಯನ್ನುಟ್ಟು ತಲೆಗೆ ಕೆಂಪು ಅಥವಾ ಬಿಳಿ ರುಮಾಲನ್ನು ಸುತ್ತಿ ಬಿಂಕದಿಂದ ಜಂಬದ ಕೋಳಿಯನ್ನು ಹಿಡಿದು ಹೊರಡುವರು. ಮನೆಯ ಹೊಸ್ತಿಲನ್ನು ದಾಟುವಾಗ, ಹಾದಿಗೆ ಅಡ್ಡವಾಗಿ ಓಡುವ ಬೆಕ್ಕನ್ನಾಗಲೀ ಹೆಂಗಸರು ಹೊರ ಬಾಗಿಲಿನ ಬಳಿಯಲ್ಲಿ ನಿಂತಿರುವುದನ್ನಾಗಲೀ ಅತ ವೀಕ್ಷಿಸಲೇಬಾರದು. ಕೃಷಿಕರು ನಡು ಮಧ್ಯಾಹ್ನದ ಉರಿ ಬಿಸಿಲಿನಲ್ಲಿ ಅತ್ಯುತ್ಸಾಹದಿಂದ ಗುಡ್ಡವನ್ನೇರಿ, ಇಳಿಜಾರಿನ ಬೆಟ್ಟವನಿಳಿದು ಅದರ ಅಂಚಿನಲ್ಲಿರುವ ಹಚ್ಚನೆಯ ಹಸುರು ಬಯಲು ಪ್ರದೇಶ, ತೋಡು, ಕಾಲು ದಾರಿ, ನದಿ ತೊರೆಗಳನ್ನು ತನಗರಿವಿಲ್ಲದಂತೆಯೇ ದಾಟಿ, ಅಂಕಗಳಿಗೋಸ್ಕರವೇ ತರಬೇತಿಗೊಳಿಸಿದ ಹುಂಜಗಳನ್ನು ಕಂಕುಳಲ್ಲೊ ಅಥವಾ ಮುಂಗೈಯಲ್ಲೊ ಹಿಡಿದು ಹುಮ್ಮಸ್ಸಿನಿಂದ ನಿಶ್ಚಿತ ಸ್ಥಳಕ್ಕೆ ಧಾವಿಸುವರು. ಆಯಾಸ ಪರಿಹರಿಸುವವರಿಗೆ ಸಮೀಪದ ಕಳ್ಳಂಗಡಿ ಮತ್ತು ಇನ್ನಿತರ ಸಣ್ಣ ಪ್ರಮಾಣದ ಸೋಡಾ, ಬೀಡಾ ಅಂಗಡಿಗಳು ಆಶ್ರಯವನ್ನೀಯುವುವು. ಹುಂಜದ ಕಾಲಿಗೆ ಚಿಕ್ಕ ದಾರವನ್ನು ಕಟ್ಟಿ ಹತ್ತಿರದಲ್ಲಿಯೇ ತೋರುವ ಮಮ್ಮರದ ಬೇರಿಗಾಗಲಿ ಗಿಡಬಳ್ಳಿಗಳಿಗಾಗಲಿ ಕಟ್ಟುವರು. ಜನಸಂದಣಿ ಜಾಸ್ತಿಯಾದೊಡನೆ ಪರಿಸರದ ಮೌನವನ್ನು ಮುರಿಯುವಂತೆ ಹುಂಜಗಳ ಕೂಗು ಪ್ರಾರಂಭವಾಗಿ ನಿಶ್ಶಬ್ದವಾಗಿದ್ದ ವಾತಾವರಣವು ಕಲರವದೊಂದಿಗೆ ಬೆರೆಯುವುದು. ಕೋಳಿ ಅಂಕಗಳ ಚೆಲುವನ್ನು ವೀಕ್ಷಿಸುವ ಜನ ಕೆಲವರಾದರೆ ಜೂಜು ಕಟ್ಟುವ ಜನರು ಕೋಳಿಗಳ ಮೇಲೆ ನೆಟ್ಟ ದೃಷ್ಟಿಯನ್ನಿಟ್ಟು ಮನಸ್ಸಿನಲ್ಲೇ ಮಂಡಿಗೆಯನ್ನು ತಿಂದು ಮುಂದಾಲೋಚನಾ ಮಗ್ನರಾಗಿ ಅತ್ತಿಂದಿತ್ತ ಸಂಚರಿಸುವವರು ಕೆಲವರು. ಹಲವಾರು ಪ್ರತಿಷ್ಠೆಯ ಅಂಕಗಳಲ್ಲಿ ಭಾಗವಹಿಸಿ

ವಿಜಯದುಂದುಭಿಯನ್ನು ಬಾರಿಸಿದ ಹುಂಜದ ಮೇಲೆಯೇ ಎಲ್ಲರ ನೆಟ್ಟ ದೃಷ್ಟಿ.

ಕೋಳಿ ಅಂಕಗಳಿಗೆ ಹುಂಜಗಳನ್ನು ಪೂರ್ವಭಾವಿಯಾಗಿ ಹೇಗೆ ಸಿದ್ಧಗೊಳಿಸುವುದೆಂಬುದನ್ನೂ ಅರಿಯುವುದು ಸೂಕ್ತ. ಜೂಜು ಪ್ರಾರಂಭವಾಗುವ ಮೊದಲೇ ಹುಂಜದ ಒಂದು ಗಟ್ಟಿಮುಟ್ಟಾದ ಕಾಲಿಗೆ ಅತಿ ನಾಜೂಕಾದ ಮತ್ತು ಹರಿತವಾದ ಕಿರುಗತ್ತಿಯನ್ನು ಕಟ್ಟಿ ತನಗೆದುರಾದ ಹುಂಜದೊಡನೆ ಸ್ಪರ್ಧಿಸಲು ಸಜ್ಜಾಗಿಸಿ ನಿಲ್ಲಿಸುವರು. ಕೋಳಿಯ ಕಾಲಿಗೆ ಕಿರುಗತ್ತಿ (ಬಾಳು)ಯನ್ನು ಕಟ್ಟುವಾಗ ಕೋಳಿಯನ್ನು ಮತ್ತೊಬ್ಬನು ಅಲುಗಾಡಿಸದೆ ಹಿಡಿಯುವನು. ಅಂಕದ ಕೋಳಿಯ ಕಾಲಿಗೆ ಕಟ್ಟುವ ಕತ್ತಿ ಕಾರ್ಖಾನೆಗಳಲ್ಲಿ ತಯಾರಾಗದೆ ಹಳ್ಳಿಯಲ್ಲಿಯೇ ಕುಶಲ ಕರ್ಮಿಗಳಿಂದ ನಿರ್ಮಿತವಾದದ್ದಾಗಿರುತ್ತದೆ. ಅವುಗಳಲ್ಲಿ ಕೆಲವು ವಿಷಪೂರಿತವಾಗಿರುತ್ತವೆ. ಕೋಳಿ ಅಂಕದಲ್ಲಿ ಹುಂಜವನ್ನು ಕಣಕ್ಕೆ ಬಿಡುವವರು ಕುಶಾಗ್ರಮತಿಗಳಾಗಿರುತ್ತಾರೆ. ಕೋಳಿ ಅಂಕವು ಪ್ರಾರಂಭವಾಗುವ ಮೊದಲು ಹುಂಜಗಳೆರಡು ತಮ್ಮೊಳಗೆ ಕುಟುಕುವುದಿದ್ದರೆ ಮಾತ್ರ ಅವುಗಳೆರಡು ಕಾದಾಡುವ ಸಾಮರ್ಥ್ಯವನ್ನು ಹೊಂದಿವೆ ಎನ್ನಬಹುದು. ಒಂದು ಹುಂಜವು ಇನ್ನೊಂದನ್ನು ಕುಟುಕುವುದಿಲ್ಲವಾದರೆ ಅದು ಕೋಳಿ ಅಂಕಕ್ಕೆ ಅಪ್ರಯೋಜಕ.

ಕೋಳಿ ಅಂಕದಲ್ಲಿ ಒಟ್ಟೆ ಬಾಳು ಮತ್ತು ದೂಡು ಬಾಳು ಎಂಬ ಎರಡು ಮುಖ್ಯ ಪಂದ್ಯಗಳಿವೆ. ಒಟ್ಟೆ ಬಾಳಿನಲ್ಲಿ ಸ್ಪರ್ಧಿಸುವ ಹುಂಜಗಳಿಗೆ ಗಾಯವಾಗಿ ರಕ್ತ ಸೋರುವುದಿದ್ದರೂ ಅದು ಯಾವ ತರದ ಪ್ರಥಮ ಚಿಕಿತ್ಸೆಗೂ ಒಳಪಡುವುದಿಲ್ಲ. ಅವುಗಳೆರಡರ ಮೈ ಗಾಯಗಳಿಂದ ತುಂಬಿ ರಕ್ತ ಸೋರುತ್ತಿದ್ದರೂ ಅವುಗಳಲ್ಲಿ ಒಂದು ಬಿದ್ದು ಸಾಯುವವರೆಗೂ ಸ್ಪರ್ಧಿಸಲಿಕ್ಕೆ ಅಣಿ ಮಾಡುವರು. ಆದರೆ ದೂಡು ಬಾಳಿನಲ್ಲಿ ಮಾತ್ರ ಹುಂಜಗಳಿಗಾದ ಗಾಯವನ್ನು ಹೊಲಿದು ಪುನಃ ಸ್ಪರ್ಧಿಸಲಿಕ್ಕೆ ಬಿಡುವರು.

ಬಾಳು ಕಟ್ಟಿ ತಯಾರಾದ ಹುಂಜವನ್ನು ಕಾದಾಟದ ಕಣಕ್ಕೆ ಬಿಡುವಷ್ಟರಲ್ಲಿ ಕೋಳಿಯ ಯಜಮಾನನು ಜನರನ್ನು ಹಿಂದೆ ಸರಿಸಿ ಬಿಡುವವನ ಬೆನ್ನನ್ನು ಪ್ರೀತಿಯಿಂದ ತಟ್ಟುವನು. ಹುಂಜವನ್ನು ನೆಲದಲ್ಲಿ ಮುಂಗೈಯಲ್ಲಿ ಹಿಡಿದವನು ಹಿಂದಕ್ಕೂ ಮುಂದಕ್ಕೂ ಆಡಿಸುವಂತೆ ನಟಿಸಿ ಹಿಂಗೈಯಲ್ಲಿ ಅದರ ಪುಕ್ಕವನ್ನು ಹಿಡಿದು ಜಾಗರೂಕತೆಯಿಂದ ಬಿಟ್ಟು ಹಿಂದೆ ಸರಿಯುವನು. ಕ್ಷಣಾರ್ಧದಲ್ಲಿ ಎದುರು ಹುಂಜವು ಅತಿ ರೋಷದಿಂದ ಮುನ್ನಡೆದು ಕಾದಾಡಲು ಸನ್ನದ್ಧವಾಗುವುದು. ನುರಿತ ಕೋಳಿಯು ಕೆಲವೊಮ್ಮೆ ಎದಿರು ಹುಂಜವನ್ನು ಕಂಡೊಡನೆ ಉಪಾಯದಿಂದ ಅಪಾಯವನ್ನು ಎದುರಿಸಲು ನಾಲ್ಕು ಹೆಜ್ಜೆ ಮುಂದೆ ಸಿಡಿದು, ಅಲ್ಲಿಯೇ ತಟಸ್ಥವಾಗಿ ನಿಂತು ಸಮಯಾವಕಾಶ ನೋಡಿ,ಒಂದೆ ಸಲ ಎದಿರು ಹುಂಜದ ಮೇಲೆ ಹಾರಿ ಬಲವಾದ ಒದೆತ ಕೊಡುವುದು. ಇನ್ನೂ ಕೆಲವು ಹುಂಜಗಳು ಅಂಕದ ಕಣದಲ್ಲಿ ಬಿಟ್ಟೊಡನೆಯೆ ಎದುರಾಳಿಯ ಮೇಲೆ ನೇರವಾಗಿ ಹಾರಿ ಒಂದೆರಡು ಬಲವಾದ ಒದೆತಗಳನ್ನು ಕೊಟ್ಟು ಕಾದಾಡುವವು. ಇನ್ನೂ ಕೆಲವು ಮೆಲ್ಲಮೆಲ್ಲನೆ ಕಳ್ಳ ಹೆಜ್ಜೆಯನ್ನಿಟ್ಟು ಕುತ್ತಿಗೆಯನ್ನು ಮುಂದಕ್ಕೆ ಚಾಚಿ ಸ್ಪರ್ಧಿಯೊಡನೆ ದ್ವಂದ್ವ ಯುದ್ಧ ಮಾಡುವವು. ಪಂದ್ಯದಲ್ಲಿ ಕೆಲವು ಅಸಮರ್ಥ ಹುಂಜಗಳು ಎದುರಾಳಿಯ ಪ್ರಭಾ



ಆಧಾರಗಳಿಂದ ಮಾತ್ರ ಹುಂಜವು ಅಂಕದಲ್ಲಿ ಸೋತಿದೆ ಎಂದು ನಿರ್ಣಯಿಸಬಹುದು. ಹಿಂಡಿತರ ಪ್ರಥಮ ಚಿಕಿತ್ಸೆಯಿಂದ ಚೇತರಿಸಿದ ಹುಂಜವು ತನಗೊದಗಿದ ಅವಮಾನಕರ ಸೋಲಿನ ಸೇಡನ್ನು ತೀರಿಸಲು ತನಗಿದಿರಾದ ಹುಂಜದೊಡನೆ ಕಾದಾಡಲು ಬಹಳಷ್ಟು ತುರುಸಿನಿಂದ ಮುಂದಡಿಯಿಡುವುದು. ಮುಂದಡಿಯಿಟ್ಟ ಹುಂಜವು ಎಷ್ಟು ನೆಗೆದು ಮುಂದೆ ಬಂದು ಹಾರಿದರೂ ಪ್ರಥಮಾರ್ಧದಲ್ಲಿಯೇ ಚೇತರಿಸಲಾರದ ಹೊಡೆತ ತಿಂದ ಹುಂಜವು ತನಗೆದುರಾದ ಹುಂಜದ ಕಾಲಿಗೆ ಕಟ್ಟಿದ ಹರಿತವಾದ ಕತ್ತಿಗೆ ಜೀವತೆತ್ತು ಭೂಮಿಗೆ ಉರುಳುವುದು. ಕೆಲವೊಮ್ಮೆ ಅಪರೂಪವಾಗಿ ಇದಿರುಗೊಂಡ ಹುಂಜವನ್ನು ಸಮರ್ಥವಾಗಿ ಎದುರಿಸಿ, ಘಟ ಘಟ ನಾಲ್ಕು ಒದೆತ ಕೊಟ್ಟು ಅದನ್ನು ಕೆಡಹುವುದೂ ಇದೆ ಇನ್ನು ಕೆಲವು ಸಂದರ್ಭಗಳಲ್ಲಿ ಎದುರಾಳಿ ಹುಂಜದ ಪರಾಕ್ರಮಕ್ಕೆ ಬೆದರಿ ಮೊದಲೇ ಚೆನ್ನಾಗಿ ದಣಿದಿದ್ದ ಹುಂಜವು ಪಲಾಯನ ಸೂತ್ರವನ್ನು ಪಾಲಿಸುವುದಿದೆ. ಉಪಾಯದಿಂದ ಓಡಿಹೋದ ಹುಂಜವನ್ನು ಎದಿರು ಹುಂಜವು ಬೆನ್ನಟ್ಟಿ ಹಾಗುದೊಮ್ಮೆ ಅದನ್ನು ತನ್ನ ಕಾಲಿಗೆ ಕಟ್ಟಿದ ಬಾಳಿನಿಂದ ತಿವಿದು ಕೊಲ್ಲುವುದು. ಕೋಳಿ ಅಂಕಗಳಲ್ಲಿ ಸ್ಪರ್ಧೆಗೆ ಇಳಿದ ಎರಡು ಹುಂಜಗಳಿಗೂ ಚೇತರಿಸಲಾಗದ ಹೊಡೆತ ತಿಂದು ಗಾಯವಾಗಿ ನಿಲ್ಲಲು ಅಸಮರ್ಥವಾಗಿದ್ದಲ್ಲಿ ಅವೆರಡನ್ನೂ ಎದುರು ಬದಿರಾಗಿ ನಿಲ್ಲಿಸಿ, ಗಾಳಿ ಹಾಕಿ, ಅವು ತಲೆ ಎತ್ತುವಂತೆ ಪ್ರಯತ್ನಿಸುವರು. ಅದರಲ್ಲಿ ಯಾವುದಾದರೂ ಒಂದು ಹುಂಜ ಸರಿಯಾಗಿ ಕಾದಾಡುವಂತೆ ತಲೆ ಎತ್ತಿದರೆ ಅದೇ ಸ್ಪರ್ಧೆಯಲ್ಲಿ ಗೆದ್ದಿತು ಎಂದು ತೀರ್ಮಾನಿಸುವರು. ಸ್ಪರ್ಧೆಯಲ್ಲಿ ಗೆದ್ದ ಹುಂಜದ ಯಜಮಾನ ಮುಖದಲ್ಲಿ ಕಿರುನಗೆಯೊಂದು ಮಿಂಚಿಸಿ ಸತ್ತ ಕೋಳಿಯನ್ನು ಎತ್ತಿ ತನ್ನ ಕೈ ಚೀಲದಲ್ಲಿ ತುಂಬಿಸುವನು. ಪ್ರತಿಷ್ಠೆಯ ಅಂಕವಾಗಿದ್ದಲ್ಲಿ ಗೆದ್ದ ಕೋಳಿಗೆ ಬಹುಮಾನವಾಗಿ ಒಳ್ಳೆ ಕೆಮ್ಮಣ್ಣಿನಲ್ಲಿ ಬೆಳೆದ ರಸಬಾಳೆಯ ಹಣ್ಣಿನ ಗೊನೆ, ಎಣೆಲು, (Khariff) ಅಕ್ಕಿಯ ಮುಡಿ ಮತ್ತು ಪಳಪಳನೆ ಮಿಂಚುವ ಪವನು ಚಿನ್ನವನ್ನು ನೀಡುವರು.

ಕೋಳಿ ಅಂಕದ ಮೇಲೆ ಪ್ರಾಣಿದಯಾ ಕಾನೂನಿನಂತೆ ಸರಕಾರದವರು ಕ್ರಮ ಕೈಕೊಳ್ಳುವ ಸಂದರ್ಭಗಳು ಅಲ್ಲಲ್ಲಿ ಕಂಡು ಬಂದಿವೆಯಾದರೂ, ಗ್ರಾಮೀಣ ಜನರ ಪ್ರತಿಷ್ಠೆಯ ಮನರಂಜನೆಯ ಸ್ಪರ್ಧಾಭಾವವು ಇಂದಿಗೂ ನಶಿಸದೆ ಉಳಿದಿದೆ. ಅನಾದಿ ಕಾಲದಿಂದಲೂ ತುಳು ನಾಡಿನ ಸಂಸ್ಕೃತಿಯೊಂದಿಗೆ ಮಿಳಿತವಾದ ಈ ಸ್ಪರ್ಧೆಯು ಇಂದಿಗೆ ಹೆಮ್ಮರವಾಗಿ ಬೆಳೆದು, ಮನರಂಜನೆ ಹೆಸರಿನಲ್ಲಿ, ಈ ನವ ನಾಗರಿಕತೆಯ ಕಾಲದಲ್ಲಿ, ಜೂಜಾಟವಾಗಿ ಬೆಳೆಯುತ್ತಿದೆಯೋ ಎಂಬ ಸಂದೇಹಕ್ಕೆ ಎಡೆಕೊಟ್ಟಿದೆ. ★



**ಖ್ಯಾತ ಸಂಪಾದಕರೊಬ್ಬರು ದೊಡ್ಡ ಆಸ್ಪತ್ರೆಯಲ್ಲಿ ದಾಖಲಾಗಿ ಮಲಗಿರುವುದನ್ನು ಕಂಡ ಅವರ ಮಿತ್ರನಿಗೆ ಅಚ್ಚರಿ – ಗಾಬರಿ ಎರಡೂ ಒಮ್ಮೆಲೇ ಉಂಟಾದವು.**

**ಮಿತ್ರ:** ಯಾಕೆ ? ಹೀಗೆ ಹೇಗಾಯಿತು ?

**ಸಂಪಾದಕ:** ಜಾಹಿರಾತು......

**ಮಿತ್ರ:** ಆಂ ? ಜಾಹಿರಾತಾ ?

**ಸಂಪಾದಕ:** ಹೌದಪ್ಪಾ ಜಾಹಿರಾತು...... 'ಭೀಮಸೇನ ಪೈಲವಾನ ಛಾಪ ಅಗರ ಬತ್ತಿ'ಯ ಜಾಹಿರಾತು...

**ಮಿತ್ರ:** ಹೂಂ— ಏನಾಯಿತು ?

**ಸಂಪಾದಕ:** ಏನ್ಹೇಳ್ಲಿ? ನಿನ್ನೆ ಪತ್ರಿಕೇಲಿ 'ಅಗರಬತ್ತಿ ಛಾಪ ಭೀಮಸೇನ' ಅಂತ ಪ್ರಕಟವಾಗಿ ಬಿಡ್ತು.



೧೪೦೦೦ ಅಡಿ ಎತ್ತರದ ಮೇಲೆ ವಿರಾಜಮಾನನಾದ ವಿನಾಯಕ →

# ರೂಪಕುಂಡದ ಯಾತ್ರೆ

ವಿಪಿನಚಂದ್ರ ಶಾಹ

ಸಮುದ್ರ ದಡದಿಂದ ಹದಿನಾರು ಸಾವಿರ ಅಡಿ ಎತ್ತರದಲ್ಲಿರುವ ಒಂದು ಸರೋವರ ನಿರ್ಮಾಣವಾದಷ್ಟೆ ರಹಸ್ಯಮಯವೂ ಆಗಿದೆ. ಅದರ ಗರ್ಭದಲ್ಲಿ ಹುದುಗಿದ ರಹಸ್ಯಗಳನ್ನು ಹೊರದೆಗೆಯಲು ತಮ್ಮ ಪ್ರಾಣವನ್ನೇ ಪಣವಾಗಿಟ್ಟ, ತಮ್ಮ ಜೀವನವನ್ನೇ ಸವೆಸಿದ ಇತಿಹಾಸಕಾರರಿಗೂ ಪರ್ವತಾರೋಹಿಗಳಿಗೂ ಮಾನವಶಾಸ್ತ್ರಜ್ಞರಿಗೂ ಲೆಕ್ಕವೇ ಇಲ್ಲ.

ಈ ರಹಸ್ಯಮಯ ಸರೋವರವೇ ಇಂದು ರೂಪಕುಂಡವೆಂಬ ಹೆಸರಿನಿಂದ ವಿಖ್ಯಾತವಾಗಿದೆ. ಅದಕ್ಕೆ ಈ ಹೆಸರು ಬರಲು ಒಂದು ಪೌರಾಣಿಕ ಕಾರಣವೂ ಉಂಟು. ಭಗವಾನ್ ಶಂಕರನು ಪಾರ್ವತಿಯನ್ನು ವಿವಾಹವಾಗಿ ಅವಳನ್ನು ತನ್ನ ಮನೆಗೆ ಕರೆದುಕೊಂಡು ಹೋಗುವಾಗ ಮಾರ್ಗ ಮಧ್ಯದಲ್ಲಿ ಅವಳಿಗೆ ಬಾಯಾರಿಕೆಯಾಯಿತಂತೆ. ಸುತ್ತಲೆಲ್ಲೂ ನೀರಿರಲಿಲ್ಲ. ಇದನ್ನು ಕಂಡ ಪರಮೇಶ್ವರ ತನ್ನ ತ್ರಿಶೂಲವನ್ನು ಭೂಮಿಯಲ್ಲಿ ಊರುವುದೊಂದೇ ತಡ ನೀರು ಕಾರಂಜಿಯಾಗಿ ಪುಟಿದು ಒಂದು ಸರೋವರವೇ ನಿರ್ಮಾಣವಾಯಿತಂತೆ. ಪಾರ್ವತಿಯು ಆ ಸರೋವರದ ನೀರು ಕುಡಿಯಲು ಕೆಳಗೆ ಬಗ್ಗಿದಾಗ ನೀರಿನಲ್ಲಿಯ ಪ್ರತಿಬಿಂಬವನ್ನು ನೋಡಿ ತನ್ನ ರೂಪರಾಶಿಗೆ ಮಾರುಹೋಗಿ ಆ ಸರೋವರಕ್ಕೆ ರೂಪಕುಂಡವೆಂಬ ಹೆಸರಿಟ್ಟಳಂತೆ.

ಚಮೋಲಿ ಜಿಲ್ಲೆಯ ಆಗ್ನೇಯಕ್ಕಿರುವ ಈ ಸರೋವರದಲ್ಲಿ ಆಗಾಗ ಶವಗಳು ತೇಲಿ ಬರುವುದನ್ನು ಅರಣ್ಯಾಧಿಕಾರಿಯೊಬ್ಬ ೧೯೪೨ರಲ್ಲಿ ಅಂದಿನ ಬ್ರಿಟಿಷ್ ಸರಕಾರಕ್ಕೆ ತಿಳಿಸಿದಾಗ ರೂಪಕುಂಡ ಬೆಳಕಿಗೆ ಬಂತು. ಸರಕಾರಕ್ಕೆ ಈ ವಿಷಯ ಇದಕ್ಕಿಂತ ಮೊದಲು ಗೊತ್ತಿರಲಿಲ್ಲವೆಂದೇನೂ ಅಲ್ಲ. ಆದರೆ ಅದಾವ ಕಾರಣದಿಂದಲೋ ಈ ವಿಷಯವನ್ನು ಜನರಿಂದ ಮರೆಮಾಚಿತ್ತು. ಆ ಅರಣ್ಯಾಧಿಕಾರಿ ಸರಕಾರಕ್ಕೆ ತಿಳಿಸಿದ ವಿಷಯ ಸಾಕಷ್ಟು ಪ್ರಚುರಗೊಂಡಾಗ ಬಹುಶಃ ಸುಭಾಷ ಚಂದ್ರ ಬೋಸರ ಆಜಾದ್ ಹಿಂದ್ ಸೈನಿಕರು ಚೀನದ ಮೂಲಕ ಕದ್ದುಮುಚ್ಚಿ ಭಾರತವನ್ನು ಪ್ರವೇಶಿಸಲು ಪ್ರಯತ್ನಿಸಿದಾಗ ಅವರು ಹಿಮದಡಿಯಲ್ಲಿ ಸಿಕ್ಕು ಸತ್ತುಹೋಗಿರಬೇಕು; ಹಿಮ ಕರಗಿ ನೀರಾದಾಗ ಈ ಶವಗಳು ಪ್ರವಾಹದ ಗುಂಟ ತೇಲಿ ಬಂದು ಸರೋವರದಲ್ಲಿ ಶೇಖರಗೊಂಡಿರಬೇಕು ಎಂದು ಹೇಳಿ ನುಣುಚಿಕೊಳ್ಳಲು ಪ್ರಯತ್ನಿಸಿದರೂ ಸರಕಾರದ ಹೇಳಿಕೆ ತೀರಾ ನಿರಾಧಾರವೆಂದು ಸಿದ್ಧವಾಗಲು ತಡವಾಗಲಿಲ್ಲ. ಆದರೆ ಇಷ್ಟರಲ್ಲಿಯೇ ರೂಪಕುಂಡದ ಬಗ್ಗೆ ಸಾರ್ವಜನಿಕರಲ್ಲಿ ಸಾಕಷ್ಟು ಜಿಜ್ಞಾಸೆ ಉತ್ಪನ್ನವಾಗಿತ್ತು.

೧೮೪೧ ರಲ್ಲಿ ಜೋರಾವರಸಿಂಹನು ಟಿಬೇಟನ್ನು ಜಯಿಸಲು ಹೋಗಿ ಅದು ಸಾಧ್ಯವಾಗದೆ ಕೈ ಸೋತು ಹಿಂದಿರುಗುತ್ತಿದ್ದಾಗ ಭಾರತದ ಗಡಿಯಲ್ಲಿ ರಕ್ಷಣೆ ಪಡೆಯಲು ಯತ್ನಿಸಿ ಅಪಘಾತಕ್ಕೀಡಾದ ಸೈನಿಕರ ಶವಗಳು ಇವಾಗಿರಬೇಕು ಎಂದು ಕೆಲವರು ವಾದಿಸಿದರೆ, ಚೀನದ ಮೇಲೆ ಮಹಮ್ಮದ ತುಘಲಕನು ಆಕ್ರಮಣವೆಸಗಿ ಹಿಂದಿರುಗುತ್ತಿದ್ದಾಗ ಪ್ರಕೃತಿ ಪ್ರಕೋಪದಿಂದಾಗಿ ದಾರಿಯಲ್ಲೇ ಸತ್ತ ಸೈನಿಕರ ಶವಗಳೇ ಇವು ಎಂದು ವಾದಿಸಿದವರೂ ಕೆಲವರು. ಹಿಂದೆ ಕನೋಜದ ರಾಜ ಜಸಧವಲನು ನಂದಾದೇವಿಯ ಯಾತ್ರೆಯನ್ನು ಮುಗಿಸಿಕೊಂಡು ಮರಳುತ್ತಿರುವಾಗ ಅವನ ಜೊತೆಗಿದ್ದ ಯಾತ್ರಿಕರು ದುರ್ಘಟನೆಗೀಡಾದರು. ಅವರ ಶವಗಳೇ ಇವು ಎಂದು ವಾದಿಸಿದವರೂ ಕಡಿಮೆಯಿಲ್ಲ.

ಉತ್ತರ ಖಂಡದಲ್ಲಿ (ಹಿಮಾಲಯದ ಒಂದು ಭಾಗ) ಬಹು ಹಿಂದಿನಿಂದಲೂ ನಡೆದುಕೊಂಡು ಬಂದ ಒಂದು ಸಂಪ್ರದಾಯವನ್ನು ಗಮನಿಸಿದರೆ ಅವರ ಈ ವಾದದಲ್ಲಿ ಸ್ವಲ್ಪವಾದರೂ ತಥ್ಯವಿದ್ದೀತು ಎಂಬ ಭಾವನೆ ಯಾರಿಗಾದರೂ ಬರುವುದು ಸ್ವಾಭಾವಿಕವೇ. ಪ್ರತಿ ಹನ್ನೆರಡು ವರ್ಷಗಳಿಗೊಮ್ಮೆ ಸೆಪ್ಟೆಂಬರ್ ತಿಂಗಳಲ್ಲಿ ನೌಟಿ ಗ್ರಾಮದಿಂದ ಹೊರಟು ರೂಪಕುಂಡದ ಆಚೆಗಿರುವ ಹೋಮಕುಂಡದ ವರೆಗೆ (೨೭೪ ಕಿಲೋ ಮೀಟರುಗಳು) ಬರಿಗಾಲಿನಲ್ಲಿ ಯಾತ್ರೆ ಮಾಡುವುದು ಅಲ್ಲಿನ ದೇವಿಯ ಭಕ್ತರಲ್ಲಿ ಮೊದಲಿನಿಂದಲೂ ನಡೆದುಕೊಂಡು ಬಂದ ಪದ್ಧತಿ. ದಾರಿ ಬಹು ದುರ್ಗಮವಾದದ್ದು. ಪ್ರತಿ ಹನ್ನೆರಡು ವರ್ಷಗಳಿಗೊಮ್ಮೆ ಅಲ್ಲಿನ ಯಾವುದಾದರೂ ಗ್ರಾಮದಲ್ಲಿ ನಾಲ್ಕು ಕೋಡಿನ ಆಡು ಹುಟ್ಟುತ್ತದೆ. ಆದರ ಯಜಮಾನ ದೇವಿಗೆ ಅದನ್ನು ಬಲಿಗೊಡಲು ತಯಾರಾಗುವವರೆಗೆ ಆ ಆಡು ಇದ್ದಲ್ಲಿ ಹುಲಿ ಬರುತ್ತಾ ಇರುತ್ತದೆ ಎಂಬ ಭಾವನೆ ಆ ಪ್ರದೇಶದಲ್ಲಿ ಸಾರ್ವತ್ರಿಕವಾಗಿ ಪ್ರಚುರವಾಗಿದೆ. ಯಾತ್ರೆ ಪ್ರಾರಂಭವಾಗುವಾಗ ದೇವಿಯ ಭಕ್ತರು ಅದನ್ನು ಹೋಮಕುಂಡದ ಮಾರ್ಗದಲ್ಲಿ ಬಿಟ್ಟು ದೇವಿಯ ಪಲ್ಲಕ್ಕಿಯನ್ನು ಹೊರುತ್ತಾ ಅದನ್ನು ಅನುಸರಿಸಿ ಕೊಂಡು ನಡೆಯತೊಡಗುತ್ತಾರೆ. ಮಾರ್ಗದಲ್ಲಿನ ಅನೇಕ ಹಳ್ಳಿಗಳ ಭಕ್ತರೂ ತಮ್ಮ ತಮ್ಮ ಇಷ್ಟದೇವತೆಯ ಪಲ್ಲಕ್ಕಿಯೊಡನೆ ಈ ಮೇಳದಲ್ಲಿ ಸೇರಿಕೊಳ್ಳುತ್ತಾರೆ. ಅವರು ವಾಣಗ್ರಾಮವನ್ನು ಮುಟ್ಟುವ ವೇಳೆಗೆ ೨೯೪ ಪಲ್ಲಕ್ಕಿಗಳು ಈ ಮೇಳದಲ್ಲಿರುವವು. ಇಲ್ಲಿಂದ ಮುಂದೆ ಸಿಗುವುದು 'ರಿಣಾಮ ಕೀ ಧಾರಾ' ಎನ್ನುವ ಸ್ಥಳ.

ಪಾದರಕ್ಷೆಯನ್ನಾಗಲೀ ಸಂಗೀತವಾದ್ಯಗಳನ್ನಾಗಲಿ ಇಲ್ಲಿಂದ ಮುಂದೆ ಒಯ್ಯುವಂತಿಲ್ಲ. ಭಕ್ತರು ದೇವಿಯ ಹೆಸರನ್ನು ಘೋಷಿಸುತ್ತಾ ಆಡನ್ನು ಅನುಸರಿಸಿಕೊಂಡು ಬರಿಗಾಲಿನಲ್ಲಿ ನಡೆದು ಹೋಮಕುಂಡವನ್ನು ತಲುಪುತ್ತಾರೆ. ಅಲ್ಲಿ ನಂದಾದೇವಿಯ ಪೂಜೆಯನ್ನೂ ಯಜ್ಞವನ್ನೂ ಮಾಡುತ್ತಾರೆ. ಅನಂತರ ಆಡು ದೇವಿಯ ಪ್ರೇರಣೆಯಿಂದಲೋ ಏನೋ ಎನ್ನುವಂತೆ ಹದಿನೈದು ಸಾವಿರ ಅಡಿಗಳಿಗಿಂತಲೂ ಎತ್ತರ



**ರೂಪಕುಂಡದ ಕಡೆಗೆ**

ವಾಗಿರುವ ನಂದಾದೇವಿಯು ಶಿಖರವನ್ನೇರ ತೊಡಗಿದ್ದು ಹಿಂದಿರುಗಿ ಬರುವುದೇ ಇಲ್ಲ!

ರೂಪಕುಂಡದ ಸುತ್ತ ಹೆಣೆದ ಕೊಂಡ ಪೌರಾಣಿಕ ಕಥೆಯಷ್ಟೆ ಅದಕ್ಕೆ ಸಂಬಂಧಿಸಿದ ವೈಜ್ಞಾನಿಕ ವಿಷಯವೂ ಸ್ವಾರಸ್ಯಕರವಾಗಿದೆ. ಸ್ವಾಮಿ ಪ್ರಣವಾನಂದರು ಈ ಸ್ಥಳದಲ್ಲಿ ಕೆಲ ಕಾಲ ಇದ್ದು ರೂಪಕುಂಡದಲ್ಲಿ ಆಗಾಗ ದೊರೆಯುವ ಮೂಳೆಗಳನ್ನು, ಅಸ್ಥಿಪಂಜರಗಳನ್ನು ಇತರ ಹಳೆಗಾಲದ ಅವಶೇಷಗಳನ್ನು ಸಂಗ್ರಹಿಸಿ ಲಖನೌ ಹಾಗೂ ಕಲಕತ್ತಾ ವಿಶ್ವವಿದ್ಯಾಲಯಗಳ ವಿದ್ವಾಂಸರಿಗೆ ಕಳುಹಿಸಿದಾಗ ಅವರು ಕಾಲ ನಿರ್ಣಯ-ಕಷ್ಟಕರ ಇವುಗಳನ್ನು ಪರದೇಶಗಳಿಗೆ ಕಳುಹಿಸಿದರು. ಈ ಅವಶೇಷಗಳನ್ನು ಕಾರ್ಬನ್-೧೪ರ ಪರೀಕ್ಷೆಗೆ ಕಳುಹಿಸಿದಾಗ ತಜ್ಞರು ಅವು ಬಹಳ

ಬಹುದೆಂಬ ನಿಷ್ಕರ್ಷೆಗೆ ಬಂದರು. ಸ್ವಾಮಿ ಪ್ರಣವಾನಂದರು ಸಂಗ್ರಹಿಸಿದ ವಸ್ತುಗಳಲ್ಲಿ ಅಸ್ಥಿಪಂಜರಗಳ ಜೊತೆಗೆ ಪೂಜಾಸಾಮಗ್ರಿಗಳು ಸ್ತ್ರೀಯರು ಧರಿಸುವ ಆಭರಣಗಳಿದ್ದವೇ ಹೊರತು ಒಂದು ಚೂರೂ ಶಸ್ತ್ರಾಸ್ತ್ರವಿದ್ದಿಲ್ಲ. ಹೀಗಾಗಿ ಕನೋಜದ ರಾಜಾ ಜಸಧವಲನಿಗೆ ಸಂಬಂಧಿಸಿದ್ದ ಘಟನೆಯಷ್ಟೆ ಸತ್ಯ, ಉಳಿದೆಲ್ಲವೂ ಸುಳ್ಳು ಎಂಬುದು ನಿರ್ಣಯವಾಗಿ ಈ ಬಗ್ಗೆ ಬಹುಕಾಲದಿಂದ ನಡೆದಿದ್ದ ಚರ್ಚೆಗೆ ತೆರೆ ಬಿದ್ದಂತಾಯಿತು. ರೂಪಕುಂಡ ಪ್ರಸಿದ್ಧಿಗೆ ಬಂದನಂತರ ಜಿಜ್ಞಾಸುಗಳು ದೂರದೂರದಿಂದ ಇಲ್ಲಿಗೆ ಬಂದು ಅಸ್ಥಿಪಂಜರಗಳನ್ನು ಸಂಗ್ರಹಿಸಿಕೊಂಡು ಹೋಗಿದ್ದರಿಂದ ಅವು ಈಗ ಅಲ್ಲಿ ಮೊದಲಿನ ಹಾಗೆ ದೊರೆಯುವುದಿಲ್ಲ. ಬಹಳವೆಂದರೆ ಅಲ್ಲಲ್ಲಿ ನೆಲವನ್ನು ತೋಡಿದಾಗ ಒಂದೆರಡು ಎಲುಬಿನ ಚೂರುಗಳು ದೊರೆಯಬಹುದಷ್ಟೆ. ಜುಲೈ ಆಗಸ್ಟ್ ತಿಂಗಳುಗಳಲ್ಲಿ ರೂಪಕುಂಡದಲ್ಲಿ ನೀರು ಇದ್ದು ಉಳಿದೆಲ್ಲ ಸಮಯದಲ್ಲಿ ಸರೋವರ ಹಿಮಾಚ್ಛಾದಿತವಾಗಿರುತ್ತದೆ.

ನಂದಾ ಘುಂಟಿ ಹಾಗೂ ತ್ರಿಶೂಲ ಶಿಖರಗಳ ಅಡಿಯಲ್ಲಿ ರೂಪಕುಂಡವಿದೆ. ಅಲ್ಲಿಗೆ ಹೋಗಬೇಕೆಂದರೆ ಅಲ್ಮೋಡಾ ರಾನಿಖೇತ ಅಥವಾ ನೈನಿತಾಲಿನಿಂದ ಗ್ವಾಲದಮ್ಮಿಗೆ ಬಸ್ಸಿನಿಂದ ಹೋಗಿ ಅಲ್ಲಿಂದ ಸುಮಾರು ಐದು ದಿನಗಳವರೆಗೆ ನಡೆಯಬೇಕು. ನೈನಿತಾಲಿನ ಪರ್ವತಾರೋಹಣ ಕ್ಲಬ್ಬಿನ ದಿನೇಶ ಬಿಷ್ಟ ಹಾಗೂ ದೀಪ ಸಾಹರೊಡನೆ ರೂಪಕುಂಡದ ಪ್ರವಾಸವನ್ನು ಯೋಜಿಸುವ ಸಮಯದಲ್ಲಿ ಹವಾಮಾನ ಚೆನ್ನಾಗಿರಲಿಲ್ಲ. ಆದರೂ ಅಕ್ಟೋಬರ್ ಕೊನೆಯಲ್ಲಿ ಪ್ರವಾಸವನ್ನಾರಂಭಿಸಿದಾಗ ಅಷ್ಟೇನೂ ತೊಂದರೆಯಾಗಲಿಲ್ಲ. ಅದ್ಭುತ ಅನುಪಮ ಪುಷ್ಪಗಳ, ಅಸಂಖ್ಯ ಸಸ್ಯಗಳ ಸೌಂದರ್ಯವನ್ನು ಸವಿಯಬೇಕೆಂದರೆ ಆ ಭಾಗದಲ್ಲಿ ಸೆಪ್ಟೆಂಬರಿನಲ್ಲಿ ಸಂಚರಿಸಬೇಕು. ಅಕ್ಟೋಬರಿನಲ್ಲಿ ಬೀಳುವ ಹಿಮದಿಂದಾಗಿ ಸಸ್ಯಗಳು ಮುರುಟಿಕೊಳ್ಳುತ್ತವೆ. ಮುಂದೆ ಸಮಯ ಕಳೆದ ಹಾಗೆಲ್ಲ ಹಿಮಪಾತ ಹೆಚ್ಚಾಗ

ಹೋಗುತ್ತವೆ. ನಾವು ಪ್ರವಾಸವನ್ನಾರಂಭಿಸಿದ್ದು ಇಂಥ ಕಾಲದಲ್ಲಿಯೆ.

ನಾವು ಗ್ವಾಲದಮ್‌ನಲ್ಲಿ ಒಂದು ರಾತ್ರಿ ತಂಗಿದ್ದು ಮರುದಿನ ಸೂರ್ಯೋದಯಕ್ಕೆ ಮೊದಲೇ ಎದ್ದು ಪಿಂಡರ ನದೀ ತೀರದ ಗುಂಟ ಇರುವ ರಸ್ತೆಯಲ್ಲಿ ಹನ್ನೆರಡು ಕಿಲೋಮೀಟರು ನಡೆದು ದೇವಾಲವನ್ನು ಮುಟ್ಟಿದೆವು. ಹಾಗೆ ನೋಡಿದರೆ ಈ ಸ್ಥಳವನ್ನು ನಡೆದುಕೊಂಡೇ ತಲುಪಬೇಕೆಂದೇನೂ ಇಲ್ಲ; ಥರಾಲಿಯಿಂದ ಮೋಟರನ್ನೇರಿಯೂ ಬರಬಹುದು. ಆದರೆ ಆ ದಾರಿಯನ್ನು ಆಶ್ರಯಿಸಿದರೆ ತುಂಬಾ ಸುತ್ತು ಬಳಸಿಕೊಂಡು ದೇವಾಲವನ್ನು ತಲುಪಬೇಕಾಗುತ್ತದೆ. ಮೇಲಾಗಿ ಗ್ವಾಲದಮ್‌ನಿಂದ ಹೊರಡುವ ದಾರಿ ತುಂಬಾ ಕಮ್ಮಿ. ಹೀಗಾಗಿ ರೂಪಕುಂಡಕ್ಕೆ ಹೊರಡುವ ಜನ ಸಾಮಾನ್ಯವಾಗಿ ಗ್ವಾಲದಮ್‌ನಿಂದ ಹೊರಡುವುದೇ ಹೆಚ್ಚು.

ರೂಪಕುಂಡದಿಂದ ಹಿಂದಿರುಗುವಾಗ ಒಂದು ದಿನದ ಮಟ್ಟಿಗೆ ನಾವಿಲ್ಲಿ ತಂಗಿದೆವು. ಅಂದು ದಸರೆ. ಆ ಹಳ್ಳಿಯವರು 'ರಾವಣವಧೆ'ವನ್ನು ಆಡಲಿದ್ದಾರೆಂದು ತಿಳಿದು ಅಲ್ಲಿಗೆ ಹೋದರೆ ಗದ್ದಲವೋ ಗದ್ದಲ. ಇಂಥದರಲ್ಲಿ ನುಸುಳಿಕೊಂಡು ಹೋಗಿ ನಾಟಕವನ್ನು ಹೇಗಪ್ಪಾ ನೋಡುವುದು? ಎಂದು ಚಿಂತಿಸುತ್ತಿದ್ದಾಗ ಆ ಹಳ್ಳಿಯಲ್ಲಿಯ ಅಧ್ಯಾಪಕನಾದವನೊಬ್ಬ ತಂತಾನೆ ನಮ್ಮ ನೆರವಿಗೆ ಬಂದಿದ್ದರಿಂದ ನಾವೆಲ್ಲ ನಾಟಕವನ್ನು ನೋಡುವಂತಾಯಿತು. ಅಲ್ಲಿನ ಜನಕ್ಕೆ ಮನೋರಂಜನದ ಸಾಧನಗಳಾವೂ ಇಲ್ಲ. ಆದ್ದರಿಂದ ರಾಮಲೀಲೆಯ ಸಮಯದಲ್ಲಿ ಇಂಥ ನಾಟಕಗಳು ಅವರನ್ನು ಸಾಕಷ್ಟು ರಂಜಿಸುತ್ತವೆ. ಎಲ್ಲರೂ ಒಂದೆಡೆ ಕಲೆಯಲು, ಕಲೆತು ತಮ್ಮಲ್ಲಿನ ವೈರ, ವೈಮನಸ್ಯಗಳನ್ನು ಮರೆಯಲು ಇದೊಂದು ಸುವರ್ಣಾವಕಾಶ. ಈ ಸಮಯದಲ್ಲೇ ಹಳ್ಳಿಗರು ತಮ್ಮ ತಮ್ಮಲ್ಲಿನ ವ್ಯಾಜ್ಯಗಳನ್ನು ಬಗೆಹರಿಸಿಕೊಳ್ಳುತ್ತಾರೆ ಎಂದು ಆ ಅಧ್ಯಾಪಕ ನಮಗೆ ಹೇಳಿದ.

ದೇವಾಲದಲ್ಲಿ ವಿಶ್ರಾಂತಿಯನ್ನು ಪಡೆದನಂತರ ನಾವು ಮುಂದೋಲಿಗೆ ಹೊರಟೆವು. ಇದು ದೇವಾಲದಿಂದ ಕೇವಲ ಹನ್ನೆರಡು ಕಿಲೋಮೀಟರುಗಳಷ್ಟು ದೂರದಲ್ಲಿಯೆಂದು ಹೇಳಲಾಗುತ್ತಿದೆಯಾದರೂ ಈಗ ತಯಾರಾಗಿರುವ ಮೋಟರು ಮಾರ್ಗದ ಮೂಲಕವಾಗಿ ಹೋದರೆ ವಾಸ್ತವಿಕವಾಗಿ ಎಂಟು ಕಿಲೋಮೀಟರಿನಷ್ಟು ಹೆಚ್ಚು ನಡೆಯಬೇಕಾಗುತ್ತದೆ. ಈ ಪ್ರಯಾಣ ತುಂಬಾ ಬೇಸರ ತರಿಸುವಂಥಾದ್ದು. ಆದರೂ ನಾವು ನಡೆದುಕೊಂಡೇ ಮುಂದೋಲಿಗೆ ಹೋದೆವು. ಅಲ್ಲಿಗೆ ಹೋದಾಗ ಆಗಲೆ ರಾತ್ರಿಯಾಗಿತ್ತು. ಇನ್ನೂ ಎರಡು ಎರಡೂವರೆ ಕಿಲೋಮೀಟರಿನಷ್ಟು ನಡೆದರೆ ಲೋಹಾರಜಂಗ್ ಬರುತ್ತದೆ. ಗುಡ್ಡದ ಮೇಲಿರುವ ಆ ಹಳ್ಳಿಯಲ್ಲಿ ಇನ್ನೂ ಅರ್ಧಮರ್ಧ ಕಟ್ಟಿರುವ ಡಾಕ್ ಬಂಗಲೆಯನ್ನು ಬಿಟ್ಟರೆ ಇಳಿದುಕೊಳ್ಳಲು ಬೇರೆ ಸ್ಥಳವಿಲ್ಲ. ಮುಂದೋಲಿಯ ಬದಲಿ ಲೋಹಾರಜಂಗಿನಲ್ಲಿ ತಂಗಿದರೆ ಬೆಳಗ್ಗೆದ್ದ ಕೂಡಲೆ ಗುಡ್ಡವನ್ನು ಏರುವುದಾದರೂ ತಪ್ಪುತ್ತದೆ ಅಂದುಕೊಂಡು ಮುಂದೋಲಿಯಲ್ಲಿ ತಂಗದೆ ಸೀದಾ ಲೋಹಾರಜಂಗಿನತ್ತ ಕಾಲೆಳೆಯುತ್ತಾ ಸಾಗಿದೆವು.

ಲೋಹಾರಜಂಗ್ ತಲುಪಿದಾಗ ನಮ್ಮ ಸುಖ ನೋಡುವಂತಹದಾಗಿತ್ತು. ಮನೋಬಲವೊಂದಿದ್ದರೆ ಸಾಕೆಂದು ಶರೀರವನ್ನು ಸಾಕಷ್ಟು ದಂಡಿಸಿದ್ದರ ಪರಿಣಾಮ ಈಗ ಕಾಣತೊಡಗಿತ್ತು. ತಲೆ ಭಾರವಾಗಿತ್ತು. ಮಲಗಿದಾಗ ಕಾಲನ್ನು ಸ್ವಲ್ಪ ಅಲ್ಲಾಡಿಸಿದರೂ ಸಾಕು, ಜೀವವೇ ಹೋದಂತಾಗುತ್ತಿತ್ತು. ಇಷ್ಟಾದರೂ ನಿದ್ದೆ ಬಂದೇಬಿಟ್ಟಿತು. ಕಣ್ಣು ತೆರೆದಾಗ ಆಗಲೆ ಬೆಳಗಾಗಿತ್ತು. ನಾವು ಕಾಲೆಳೆಯುತ್ತಾ ನಂದಾಘುಂಟಿಯನ್ನು ನೋಡಲು ಹೊರಟಾಗ ಕುತೂಹಲವಶರಾಗಿ ಅಲ್ಲಿನ ಜನ ನಮ್ಮನ್ನು ಹಿಂಬಾಲಿಸಿದರು. ಹಿಮಾಚ್ಛಾದಿತ ಬೆಟ್ಟಗಳ ಮಧ್ಯೆ ನಂದಾಘುಂಟಿ ಶಿಖರ ರಾರಾಜಿಸುತ್ತಿತ್ತು. ಸೂರ್ಯ ಪ್ರಕಾಶದಲ್ಲಿ ಅದನ್ನು ಎಷ್ಟು ನೋಡಿದರೂ ಕಡಿಮೆಯೇ ಎನ್ನಿಸುವಂತಿತ್ತು. ನಾಲ್ಕಾರು ಫೋಟೋ ತೆಗೆದುಕೊಂಡು ನಾವು ಇಳಿದುಕೊಂಡಲ್ಲಿಗೆ ಮರಳಿದೆವು.

ನಮ್ಮ ಮುಂದಿನ ಪ್ರಯಾಣ ವಾಣದತ್ತ. ಈ ದಾರಿಯಲ್ಲಿ ಕರಡಿಗಳ ಕಾಟ ಬಹಳ. ಹೀಗಾಗಿ ಸ್ವಲ್ಪ ಹೊತ್ತೇರಿದ ನಂತರವೇ ಪ್ರಯಾಣಿಸು

ವುದು ಒಳ್ಳೆಯದು. ಆದ್ದರಿಂದ ನಾವು ಬೆಳಗಿನ ಒಂಭತ್ತು ಗಂಟೆಗೆ ಪ್ರಯಾಣವನ್ನಾರಂಭಿಸಿದೆವು. ೧೯೦೧ರಲ್ಲಿ ಲಾರ್ಡ್ ಕರ್ಜನ್ನನು ಇಲ್ಲಿಗೆ ಭೇಟಿ ಕೊಟ್ಟಾಗ ಅವನ ಅನುಕೂಲಾರ್ಥವಾಗಿ ಲೋಹಾರಜಂಗಿನಿಂದ ವಾಣಕ್ಕೆ ಹೋಗುವ ದಾರಿಯನ್ನು ನಿರ್ಮಿಸಲಾಯಿತಂತೆ. ರಸ್ತೆ ಇಳಿಜಾರಾಗಿರುವುದರಿಂದ ಏನೂ ಶ್ರಮವಾಗುತ್ತದೇ ಇಲ್ಲ. ಸಮುದ್ರ ಪಾತಳಿಯಿಂದ ಎಂಟು ಸಾವಿರ ಅಡಿ ಎತ್ತರದಲ್ಲಿರುವ ವಾಣ ಪರ್ವತಾವಳಿಯಿಂದ ಸುತ್ತುವರಿಯಲ್ಪಟ್ಟು ನೋಡಲು ಬಹು ರಮ್ಯವಾಗಿದೆ. ಊರೂ ದೊಡ್ಡದು, ಜನಸಂಖ್ಯೆಯೂ ಬಹಳ. ಇಲ್ಲಿಯ ಸಾಮಾಜಿಕ ರೀತಿನೀತಿಗಳು ನಮಗಿಂತ ಭಿನ್ನವಾಗಿದ್ದು, ಸ್ವಲ್ಪ ವಿಚಿತ್ರವಾಗಿ ತೋರುತ್ತವೆ. ಉದಾಹರಣೆಗೆ ಹೇಳುವುದಾದರೆ ವರದಕ್ಷಿಣೆಯ ಪದ್ಧತಿ ಇಲ್ಲಿಲ್ಲ. ಬದಲು ವರನೆ ಕನ್ಯಾಶುಲ್ಕವನ್ನು ತೆತ್ತು ಮದುವೆಯಾಗಬೇಕು. ಹೀಗಾಗಿ ಹೆಣ್ಣು ಹುಟ್ಟಿದರೆ ಇಲ್ಲಿಯವರಿಗೆ ಸಂತೋಷವಾಗುವುದು ಸ್ವಾಭಾವಿಕವಿದೆ. ವಿವಾಹಿತಳಾದ ಹುಡುಗಿ ಬೇಕಾದರೆ ಗಂಡನನ್ನೇ ಬದಲಿಸಬಹುದು. ಆದರೆ ಹೊಸದಾಗಿ ಮದುವೆಯಾಗುವಾತ ಹಳೇ ಗಂಡನಿಗೆ ತೃಪ್ತಿಯಾಗುವ ಹಾಗೆ ಹಣ ಕೊಡಬೇಕು. ಹುಟ್ಟಿದ ಹೆಣ್ಣುಗಳೆಲ್ಲವೂ ಅವಳ ಆಸ್ತಿ; ಗಂಡುಗಳೆಲ್ಲವೂ ಹಳೆಯ ಗಂಡನ ಆಸ್ತಿ. ಸಾಧಾರಣವಾಗಿ ಒಂದು ಹುಡುಗಿಗೆ ಮೂರು ಸಾವಿರದಿಂದ ಐದು ಸಾವಿರದ ವರೆಗೂ ಕನ್ಯಾಶುಲ್ಕವನ್ನು ಇತ್ತು ತೆರಬೇಕಾಗುತ್ತದೆ.

ದೇವದಾರು ವೃಕ್ಷಗಳಿಂದ ಆವೃತವಾದ ದಿನ್ನೆಯ ಮೇಲೆ ಇಲ್ಲಿನ ಅರಣ್ಯ ವಿಭಾಗದವರು ಒಂದು ವಿಶ್ರಾಂತಿ ಗೃಹವನ್ನು ಕಟ್ಟಿಸಿದ್ದಾರೆ. ಅದರ ಪಕ್ಕದಲ್ಲಿಯೇ ಒಂದು ರಸ್ತೆ, ಹದಿನಾಲ್ಕು ಕಿಲೋಮೀಟರಿನಷ್ಟು ಉದ್ದ



ನಂದಾ ಘುಟಿ ಪರ್ವತದ ಮೇಲೆ. ಮಧ್ಯದಲ್ಲಿ ನಿಂತಿರುವವರೇ ವಿಪಿನಚಂದ್ರ ಶಾಹ

ತರ್ಕವನ್ನವಲಂಬಿಸಿ ನಾವು ಮುಂದೆ ಸಾಗಬೇಕಾಗುತ್ತಿತ್ತು. ಹಿಮದ ಮೇಲೆ ನಡೆಯುವುದು ಅಷ್ಟು ಸುಲಭವಲ್ಲ. ಮೇಲಿಂದ ಮೇಲೆ ಕಾಲು ಜಾರುತಿತ್ತು. ಹೀಗಾಗಿ ಒಂದು ಕಿಲೋಮೀಟರಿನಷ್ಟು ದಾರಿಯನ್ನು ಸವೆಸಲು ಒಂದು ಗಂಟೆಯೇ ಹಿಡಿಯಿತು. ಒಂದು ವಿಶಾಲವಾದ ಬಂಡೆಗಲ್ಲು ಹಿಮದಿಂದ ಹೊರಗೆ ಇಣುಕುತ್ತಿತ್ತು. ಪಾಗ್ವಾಸಾ ಎಂಬ ಹೆಸರಿನ ಪ್ರಸಿದ್ಧವಾದ ಗುಹೆ ಬಹುಶಃ ಇದೇ ಎಂದು ಭಾವಿಸಿ ಅದನ್ನು ಸೂಕ್ಷ್ಮವಾಗಿ ಗಮನಿಸಿದಾಗ ನಾವು ಭಾವಿಸಿದ್ದು ಸರಿಯಾಗಿದೆಯೆಂಬುವುದು ಮನದಟ್ಟಾಯಿತು.

ಅದರ ಪ್ರವೇಶದ್ವಾರ ಬಂದಾಗಿತ್ತು. ನಮ್ಮಲ್ಲಿ ಒಬ್ಬಾತ ಅಲ್ಲಲ್ಲಿ ಅಷ್ಟಿಷ್ಟು ಹಿಮವನ್ನು ಕೊರೆದು ಪ್ರವೇಶದ್ವಾರವನ್ನು ಹುಡುಕಿಯೇ ಬಿಟ್ಟ. ನಾವೆಲ್ಲರೂ ಸೇರಿ ಹಿಮವನ್ನು ಕಡಿದು ಗುಹೆಯಲ್ಲಿ ಪ್ರವೇಶಿಸಿದೆವು. ಚಳಿಯಿಂದಾಗಿ ಶರೀರ ನಡುಗುತ್ತಿತ್ತು. ಕಾಲಿಗೆ ಲಕ್ವ ಬಡಿದಂತಾಗಿತ್ತು. ಹೊರಗೆ ಹಿಮ ಬೀಳುತ್ತಲೇ ಇತ್ತು. ಯಾವಾಗ ಮತ್ತೆ ಗುಹಾದ್ವಾರ ಮುಚ್ಚಿಕೊಳ್ಳುವುದೋ ಎನ್ನುವುದು ನಿಶ್ಚಿತವಿದ್ದಿಲ್ಲ. ಆದ್ದರಿಂದ ಅಲ್ಲಿ ಬೀಳುವ ಹಿಮವನ್ನು ಮೇಲಿಂದ ಮೇಲೆ ತೆಗೆಯುವ ಕೆಲಸವನ್ನು ಒಬ್ಬರಿಗೊಬ್ಬರು ವಹಿಸಿಕೊಂಡೆವು.

ಹಿಮಪಾತ ಯಾವಾಗ ನಿಂತಿತೆನ್ನುವುದು ಗೊತ್ತಾಗಲಿಲ್ಲ. ಬೆಳಿಗ್ಗೆ ಪ್ರವೇಶ ದ್ವಾರ ತೆರೆದೇ ಇತ್ತು. ನಾವು ಸ್ವಲ್ಪ ಹಿಮವನ್ನು ಕರಗಿಸಿ ನೀರನ್ನು ಸಂಗ್ರಹಿಸಿಕೊಂಡು ಪ್ರವಾಸದ ಕೊನೆಯ ನಿಟ್ಟಿನತ್ತ ನಡೆದೆವು. ಹಿಮವನ್ನು ತುಳಿಯುತ್ತಾ



ರೂಪಕುಂಡದ ದಾರಿಯಲ್ಲಿ

ಆಗಾಗ ಹಾರಿ ಹೋಗುತ್ತಾ ಅಂತೂ ಇಂತೂ ಎರಡು ಗಂಟೆಗಳ ಕಾಲ ಬರ್ಫದ ಮೇಲೆ ನಡೆದು ರೂಪಕುಂಡವನ್ನು ತಲುಪಿದೆವು.

ಸಮುದ್ರ ತಟದಿಂದ ಹದಿನಾರು ಸಾವಿರ ಅಡಿ ಎತ್ತರದಲ್ಲಿರುವ ರೂಪಕುಂಡದ ಒಂದು ಬದಿಯಲ್ಲಿ ಭಾರೀ ಪ್ರಪಾತ. ಇನ್ನೊಂದು ಬದಿಯಲ್ಲಿ ವಿಶಾಲವಾದ ಹಿಮಾಚ್ಛಾದಿತ ಬಯಲು ಪ್ರದೇಶ. ಹಿಂದಿನ ಕಾಲದಲ್ಲಿ ಜನರು ಈ ಪ್ರಪಾತದಲ್ಲಿ ಹಾರಿ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದರಂತೆ. ಆದರೆ ಆತ್ಮಹತ್ಯೆ ಮಾಡಿಕೊಳ್ಳಲು ಅವರೆಲ್ಲ ಇಷ್ಟು ದೂರ ಏಕೆ ಬರಬೇಕು ಎನ್ನುವುದು ನನಗೆ ಇಂದಿಗೂ ಅರ್ಥವಾಗುತ್ತಿಲ್ಲ.

ಮುನ್ನೂರು ಅಡಿ ಆಳವಾದ ರೂಪಕುಂಡ ನಾವು ಬಂದಾಗ ಹೆಪ್ಪುಗಟ್ಟಿತ್ತು. ಎಲ್ಲಿಯಾದರೂ ಸ್ವಲ್ಪ ನೀರು ದೊರೆಯಬಹುದೇ? ಎಂದು ನಾವು ಹುಡುಕುತ್ತಿದ್ದಾಗ ಒಂದೆಡೆ ಮಾನವ ಶರೀರದ ಎಲುಬು ಸಿಕ್ಕಿತ್ತು. ಅದಕ್ಕೆ ಅಂಟಿಕೊಂಡ ಮಾಂಸ ಮುದುಡಿಕೊಂಡು ಕಂದು ಬಣ್ಣಕ್ಕೆ ತಿರುಗಿತ್ತು. ಬೇರೆ ಮಾನವ ಅವಶೇಷಗಳೇನಾದರೂ ದೊರೆಯಬಹುದೇ? ಎಂದು ನನ್ನ ಮಿತ್ರರು ರೂಪಕುಂಡದಲ್ಲಿ ಹುಡುಕುತ್ತಿದ್ದಾಗ ಇಂಥಾ ನಿಸರ್ಗದಲ್ಲಿ ಇವರಿಗೇನು ದೊರಕೀತು ಎಂದು ನಾನು ಬಂಡೆಗಲ್ಲೊಂದರ ಮೇಲೆ ಕುಳಿತು ರೂಪಕುಂಡದ ಇತಿಹಾಸವನ್ನು ಮೆಲುಕುಹಾಕತೊಡಗಿದೆ. ಹೌದು, ನಾನು ಭಾವಿಸಿದ್ದು ಸರಿಯಾಗಿಯೇ ಇತ್ತು. ನನ್ನ ಮಿತ್ರರಿಗೆ ಹೇಳಿಕೊಳ್ಳುವಂಥ ಅವಶೇಷಗಳಾವುವೂ ದೊರೆಯಲಿಲ್ಲ. ಅಲ್ಲಿಂದ ಶಿಲಾ ಸಮುದ್ರದ ಮೂಲಕವಾಗಿ ಹೋಮಕುಂಡಕ್ಕೆ ಹೋಗಬೇಕೆಂದು ನಾವೆಲ್ಲ ಅಂದುಕೊಂಡಿದ್ದರೂ ಅಗಾಧವಾದ ಹಿಮಪಾತವನ್ನು ಲಕ್ಷಿಸಿದಾಗ ಹಾಗೆ ಮಾಡುವುದು ಮೃತ್ಯುವಿಗೆ ಆಮಂತ್ರಣವಿತ್ತಂತೆಯೇ ಎಂದು ಅನ್ನಿಸಿದ್ದರಿಂದ ಆ ಸಾಹಸಕ್ಕೆ ಮಾತ್ರ ನಾವು ಇಳಿಯಲಿಲ್ಲ. ✿

('ನವನೀತ' ಹಿಂದಿ ಡೈಜೆಸ್ಟಿನಿಂದ)

---

**ಅಸಂಖ್ಯೈರಪಿ ನಾತ್ಮೀಯೈರಲ್ಪೈರಪಿ ಪರಸ್ಥಿತೈಃ ।**
**ಗುಣೈಃ ಸಂತಃ ಪ್ರಹೃಷ್ಯಂತಿ ಚಿತ್ರಮೇಷಾಂ ವಿಚೇಷ್ಟಿತಮ್ ॥**

ತಮ್ಮಲ್ಲಿ ಬೇಕಾದಷ್ಟು ಒಳ್ಳೆಯ ಗುಣಗಳಿದ್ದರೂ, ಬೇರೆಯವರಲ್ಲಿರುವ ಕೆಲವೇ ಗುಣಗಳನ್ನು ತಿಳಿದು ಸತ್ಪುರುಷರು ಆನಂದಿಸುತ್ತಾರೆ. ಇವರ ವರ್ತನೆ ವಿಚಿತ್ರ.

**ಅಸಹಾಯಃ ಪುಮಾನೇಕಃ ಕಾರ್ಯಾಂತಂ ನಾಧಿಗಚ್ಛತಿ ।**
**ತುಷೇಣಾಪಿ ವಿನಿರ್ಮುಕ್ತಸ್ತಂಡುಲೋ ನ ಪ್ರರೋಹತಿ ॥**

ಇತರರ ಸಹಾಯವಿಲ್ಲದೆ ಮನುಷ್ಯನು ಕಾರ್ಯಸಿದ್ಧಿಯನ್ನು ಪಡೆಯಲಾರ. ಹೊಟ್ಟಿನ ಸಹಾಯವಿಲ್ಲದಿದ್ದರೆ ಬರಿಯ ಅಕ್ಕಿ ಮೊಳೆಯುವುದಿಲ್ಲ.

**ಅಶ್ವಂ ನೈವ ಗಜಂ ನೈವ ವ್ಯಾಘ್ರಂ ನೈವ ಚ ನೈವ ಚ ।**
**ಅಜಾಪುತ್ರಂ ಬಲಿಂ ದದ್ಯಾದ್ದೇವೋ ದುರ್ಬಲಘಾತಕಃ ॥**

ಕುದುರೆಯನ್ನಲ್ಲ, ಆನೆಯನ್ನಲ್ಲ, ಹುಲಿಯನ್ನಂತೂ ಸರ್ವಥಾ ಅಲ್ಲ. ಮೇಕೆಮರಿಯನ್ನು ಬಲಿಯಾಗಿ ಕೊಡಬೇಕಂತೆ! ದೇವರೂ ದುರ್ಬಲರನ್ನೇ ಕೊಲ್ಲುತ್ತಾನೆ.

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ.

ಇಲ್ಲಿ ಪ್ರತಿ ತಿಂಗಳೂ ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. ತೇಜಿ
(ಅ) ಬೆಲೆಗಳ ಏರಿಕೆ (ಆ) ದ್ರಾವಕ (ಇ) ಹುಳಿ ಪದಾರ್ಥ (ಈ) ತ್ಯಾಗ

೨. ಜಖಂ
(ಅ) ಪಿಶಾಚಿ (ಆ) ಹಲಸಿನಕಾಯಿ (ಇ) ಕಚಗುಳಿ (ಈ) ಗಾಯ

೩. ಜಕಣಿ
(ಅ) ಹಕ್ಕಿ (ಆ) ಒಂದು ಪಿಶಾಚಿ (ಇ) ಆಕಾರ ಹೊಂದ (ಈ) ಭವಿಷ್ಯ ಹೇಳುವವ

೪. ತೇಜಃಪುಂಜ
(ಅ) ತೀಕ್ಷ್ಣವಾದ ದ್ರಾವಕ (ಆ) ಬಣ್ಣ ಬಣ್ಣದ ಕೋಳಿ (ಇ) ಬೆಳಕಿನ ರಾಶಿ (ಈ) ವೇಗವಾದ ವಾಹನ

೫. ರೊಪ್ಪ
(ಅ) ಹೊಡೆತ (ಆ) ಪಕ್ಷಿಯ ಗರಿ (ಇ) ದೊಡ್ಡಿ (ಈ) ಹೊರೆ

೬. ಲಕೋಟೆ
(ಅ) ಪತ್ರದ ಕವರು (ಆ) ಧ್ವಂಸ (ಇ) ಲಗ್ಗೆ (ಈ) ಇಟ್ಟುಕೊಂಡ ಹೆಂಗಸು

೭. ಬಿಂಗತಿ
(ಅ) ಒಂದು ಕೀಟ (ಆ) ಚಿಗರೆ ಹುಡು (ಇ) ವಿಷ (ಈ) ಪಚ್ಚೆದಾರು

೮. ಜಘನ್ಯ
(ಅ) ಪ್ರಸಿದ್ಧ (ಆ) ಕೀಳು (ಇ) ಕೊಲೆಗಡಕ (ಈ) ಕುಂಟ

೯. ಶಪಥ
(ಅ) ಬೈಗಳು (ಆ) ಪ್ರತಿಜ್ಞೆ (ಇ) ಅಡ್ಡದಾರಿ (ಈ) ಹುಲ್ಲು

೧೦. ವಾಸ್ತವ್ಯ
(ಅ) ಸತ್ಯ ಸಂಗತಿ (ಆ) ಬಿಡಾರ (ಇ) ಶಿಲ್ಪಕಲೆ (ಈ) ಕಪ್ಪುರ

೧೧. ಚುನಾಯಿಸಿಗೆ
(ಅ) ಚೌಕಾಸಿ (ಆ) ಪ್ರಚೋದನೆ (ಇ) ಸಣ್ಣದ ಸೀರೆ (ಈ) ಸೊನ್ನೆ

೧೨. ಮಾಸ್ತಿ
(ಅ) ಶಾಸನದ ಕಲ್ಲು (ಆ) ಉದ್ದಿನ ಹೊಟ್ಟು (ಇ) ಮದ (ಈ) ಸಹಗಮನ ಮಾಡಿದವಳು



೧. **ತೇಜಿ** (ಅ) ಬೆಲೆಗಳು ರಭಸವಾಗಿ ಏರುವುದು; ತುಟ್ಟಿ; (ರಭಸದಿಂದ ಓಡುವ) ಕುದುರೆ. ಉದಾ:— ಸಾಮಾನುಗಳು ತೇಜಿಯಲ್ಲಿವೆ. [ಪಾರಸೀಕ — ತೇಜ್ = ವೇಗವಾದ]

೨. **ಜಖಂ** (ಈ) ಗಾಯ; ಪೆಟ್ಟು; ಮುರಿಯುವಿಕೆ. ಉದಾ:— ಅಪಘಾತದಲ್ಲಿ ಕಾರು ಜಖಂ ಆಯಿತು. [ಪಾರಸೀಕ — ಜಖ್ಮ್]

೩. **ಜಕಣಿ** (ಅ) ಒಂದು ಬಗೆಯ ಹೆಣ್ಣು ಪಿಶಾಚಿ, ದೆವ್ವ. ಉದಾ:— ಜಕಣಿ ಹಿಡಿದಂತೆ ಕುಣಿಯುತ್ತಾನೆ. [ಸಂ. ಯಕ್ಷಿಣಿ]

೪. **ತೇಜಃಪುಂಜ** (ಇ) ಬೆಳಕಿನ ರಾಶಿ; ತುಂಬಾ ಕಾಂತಿಯುಳ್ಳ ವಸ್ತು. ಉದಾ:- ತೇಜಃಪುಂಜವಾದ ಮುಖ. [ಸಂ. ತೇಜಃ = ಬೆಳಕು; ಪುಂಜ = ಸಮೂಹ]

೫. **ರೊಪ್ಪ** (ಇ) ದೊಡ್ಡಿ, ಕುರಿ ಹಂದಿ ಮೊದಲಾದವುಗಳನ್ನು ಕೂಡ ಹಾಕುವ ಆವರಣ, ಆಶ್ರಯ ಸ್ಥಾನ. [ಕನ್ನಡ]

೬. **ಲಕೋಟೆ** (ಅ) ಪತ್ರವನ್ನು ಕಳಿಸಲು ಉಪಯೋಗಿಸುವ ಚೀಲ; ಕವರು. ಉದಾ:— ಟಪಾಲು ಲಕೋಟೆ ಬೆಲೆ ಹೆಚ್ಚಿದೆ. [ಮರಾಠಿ — ಲಖೋಟಾ]

೭. **ಮಿಗತೆ** (ಈ) ಹೆಚ್ಚಿನದು; ಕೆಲಸಕ್ಕಾಗಿ ಉಳಿದದ್ದು; ಉಳಿಕೆ. ಉದಾ:— ಮಿಗತೆ ಧಾನ್ಯ ಮಾರಿದರು. [ಕನ್ನಡ. ಮಿಗು = ಹೆಚ್ಚಾಗು, ಉಳಿ + ತೆ]

೮. **ಜಘನ್ಯ** (ಅ) ಕೀಳು, ನೀಚವಾದ್ದು ಕಳಪೆಯಾದ್ದು; ಕೊನೆಯದು. ಉದಾ:— ಜಘನ್ಯವಾದ ಕೃತಿ. [ಸಂ.]

೯. **ಶಪಥ** (ಆ) ಪ್ರತಿಜ್ಞೆ, ಆಣೆ ಮಾಡುವುದು. ಉದಾ:— ಆಡಳಿತವನ್ನು ಶುದ್ಧ ಮಾಡುವ ಶಪಥ ತೊಟ್ಟಿದ್ದಾನೆ. [ಸಂ. ಶಪ್ = ಗಟ್ಟಿಯಾಗಿ ಹೇಳು + ಥ]

೧೦. **ವಾಸ್ತವ್ಯ** (ಆ) ಬಿಡಾರ, ವಸತಿ, ತಂಗಿದ ಸ್ಥಳ, ವಾಸಕ್ಕೆ. ಉದಾ:— ರಾಜಧಾನಿಯ ವಾಸ್ತವ್ಯದಲ್ಲಿ ಮಂತ್ರಿಯನ್ನು ಕಂಡೆ. [ಸಂ.]

೧೧. **ಚುನಾಯಿಸಿಗೆ** (ಅ) ಚೌಕಾಸಿ, ಯಾವುದಾದರೂ ಪದಾರ್ಥದಲ್ಲಿ ಅತಿಯಾದ ಗುಣ ವಿಮರ್ಶೆ ಮಾಡುವುದು, ಜಿಕೀರಿ. ಉದಾ:— ತಿಂಡೀ ವಿಷಯದಲ್ಲಿ ಅವನಿಗೆ ಬಹಳ ಚುನಾಯಿಸಿದೆ. [ಹಿಂದಿ — ಚುನ್ = ಆರಿಸು]

೧೨. **ಮಾಸ್ತಿ** ಈ ಗಂಡ ಸತ್ತಾಗ ಸಹಗಮನ ಮಾಡಿದವಳು; ಮಹಾಸತಿ; ಹಾಗೆ ಸತಿಯಾದ ಸ್ಥಳ. ಉದಾ:— ಮಾಸ್ತಿ ಕಲ್ಲು [ಸಂ. ಮಹಾ ಸತಿಯಿಂದ]

●

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

| | | | |
|---|---|---|---|
| ೬—೮ | ಸರಿಯಿದ್ದರೆ | ... | ಸಾಧಾರಣ |
| ೯—೧೦ | ,, | ... | ಉತ್ತಮ |
| ೧೧—೧೨ | ,, | ... | ಅತ್ಯುತ್ತಮ |

●

# ಟ್ರೋಜನ್ ಕುದುರೆ

ಗೌರೀಶ ಕಾಯ್ಕಿಣಿ

ಹೋಮರ್ ಮಹಾಕವಿಯು ಗ್ರೀಸ್ ದೇಶದ ವಾಲ್ಮೀಕಿ. ಅವನ ಈಲಿಯಡ್ ಜಗತ್ಪ್ರಸಿದ್ಧ ಮಹಾಕಾವ್ಯಗಳಲ್ಲಿ ಒಂದು. ಈಲಿಯಡ್ ಕಾವ್ಯವನ್ನು ಅನುಕರಿಸಿ ರೋಮದ ಮಹಾಕವಿ ವರ್ಜಿಲ್ ತನ್ನ ಜನಾಂಗದ ಮೂಲ ಪುರುಷರ ವಿಷಯದ ಒಂದು ಮಹಾಕಾವ್ಯವನ್ನು ರಚಿಸಿದನು. ಅದರ ಹೆಸರೇ ಈನಿಡ್. ವರ್ಜಿಲ್ ಮಹಾಕವಿಯು ಕ್ರಿಸ್ತಶಕದ ಮೊದಲನೆಯ ಶತಮಾನದಲ್ಲಿ ಆಗಿ ಹೋದನು. ಆತನು ೫೧ ವರ್ಷ ಪ್ರಾಯದಲ್ಲಿಯೇ ತನ್ನ ಇಹಲೋಕ ಯಾತ್ರೆಯನ್ನು ಮುಗಿಸಿದನು. ಹೋಮರನ ಕುರಿತು ನಮಗೆ ಯಾವ ಸಂಗತಿಗಳೂ ಗೊತ್ತಿಲ್ಲ. ಆದರೆ ವರ್ಜಿಲ್ ಹಾಗಲ್ಲ. ಅವನ ಚರಿತ್ರದ, ಇತರ ಕೃತಿ ರಚನೆಯ ಬಗೆಗೆ ಅನೇಕ ವಿವರಗಳು ಗೊತ್ತಾಗಿವೆ. ಆತನು ಎಲ್ಲೆಲ್ಲಿ ವಾಸಿಸಿದ್ದನೆಂಬುದೂ ತಿಳಿದುಬಂದಿದೆ.

ವರ್ಜಿಲನ ಈನಿಡ್ ಕಾವ್ಯ ಒಂದು ರೀತಿ ಹೋಮರನ ಈಲಿಯಡ್ ಮಹಾಕಾವ್ಯದ್ದೇ ಮುಂದುವರಿದ ಕಥೆ ಎನ್ನಬಹುದು. ಈ ಕಾವ್ಯದ ಕಥಾನಾಯಕ ಈನಿಯಸ್. ಇವನೂ ಟ್ರಾಯ್ ನಗರದ ಒಬ್ಬ ಧೀರೋದಾತ್ತ ವೀರ. ಟ್ರಾಯ್ ನಗರದ ಪತನದ ನಂತರ ಆತ ಪಾರಾಗಿ ಇಟಲಿಗೆ ಬಂದು ಅಲ್ಲಿಯ ಮೂಲ ನಿವಾಸಿಗಳನ್ನು ಗೆದ್ದು ಹೊಸ ರಾಜ್ಯವನ್ನು ಕಟ್ಟಿದನು. ಈ ರಾಜ್ಯವೇ ಮುಂದೆ ಇತಿಹಾಸ ಪ್ರಸಿದ್ಧ ರೋಮನ್ ಸಾಮ್ರಾಜ್ಯವಾಯಿತು.

ಈ ಟ್ರೋಜನ್ ಮಹಾವೀರ ಈನಿಡ್ ಪಾರಾಗಿ ಹೋಗುವ ಪೂರ್ವದ ದುರಂತ ಘಟನೆ ಟ್ರಾಯ್‌ದ ಪತನ. ಆ ಪತನಕ್ಕೆ ಕಾರಣವಾದ ಒಂದು ತಂತ್ರಗಾರಿಕೆ ಯಾಂತ್ರಿಕ ಕುದುರೆಯದು. ಆ ಯಾಂತ್ರಿಕ ಕುದುರೆ ಮುಂದೆ ಸಾಹಿತ್ಯದಲ್ಲಿಯೂ ರಾಜಕೀಯ ಇತಿಹಾಸದಲ್ಲಿಯೂ "ಟ್ರೋಜನ್ ಹಾರ್ಸ್" ಎಂದು ಪ್ರಸಿದ್ಧವಾಗಿದ್ದ. ಇಂದಿಗೂ ಈ ತಂತ್ರವು ಒಂದಿಲ್ಲೊಂದು ರೂಪದಲ್ಲಿ ಪ್ರಪಂಚದ ರಾಜಕಾರಣದಲ್ಲಿ ಚೆನ್ನಾಗಿ ಕೈಕಾಣಿಸುತ್ತದೆ. ಸಾರ್ವತ್ರಿಕ ಚುನಾವಣೆಗಳಂಥ [illegible] ಕಟ್ಟಿನ ಹೊತ್ತಿಗೆ ಒಂದು ಪಕ್ಷವೋ ಸಂಘಟನೆಯೊ ಇದ್ದಕ್ಕಿದ್ದಂತೆ ಇನ್ನೊಂದನ್ನು [illegible] ಮತಾಂತರವಾದಂತೆ ನಟಿಸಿ, ಪ್ರವೇಶಿಸಿದರೆ, ಇನ್ನೊಂದರಲ್ಲಿ ವಿಲೀನವಾದರೆ ಅದೊಂದು "ಕೀಲು ಕುದುರೆ"ಯ [illegible] ರೂಪ.

ಏಕೆಂದರೆ ಮೂಲದಲ್ಲಿ ವರ್ಜಿಲನ ಮಹಾಕಾವ್ಯದಲ್ಲಿ ಟ್ರಾಯ್‌ನಗರದ ಭೇದಕ್ಕಾಗಿ ಈ ಕೀಲುಕುದುರೆಯ ಕಾಯಕ ನಡೆದದ್ದು. ಆ ಕಾಯಕದ ಒಂದು ಕಥಾ ಸಂದರ್ಭ ಇಂತಿದೆ.

ಪ್ಯಾರಿ. ಟ್ರಾಯ್ ನಗರರಾಜ್ಯದ ಒಬ್ಬ ರಾಜಪುತ್ರ. ಆತ ಗ್ರೀಸದ ಇನ್ನೊಂದು ಪ್ರಾಂತ್ಯದ ಸ್ಪಾರ್ಟಾಕ್ಕೆ ಅಲ್ಲಿಯ ದೊರೆ ಮೆನೆಲಾಸನ ಮಿತ್ರನೆಂದು ಭೇಟಿ ಕೊಟ್ಟನು. ಆಗ ಮೆನೆಲಾಸನ ಹೆಂಡತಿ ಹೆಲನಳನ್ನು ಪ್ಯಾರಿ ಕಂಡನು.



ಕುದುರೆಯ ಗರ್ಭದಿಂದ ಹೊರಬರುತ್ತಿರುವ ಸೈನಿಕ

ದ್ವೀಪಕ್ಕೆ. ಕೇವಲ ಕುದುರೆಯ ಒಡಲೊಳಗೆ ಕೂತ ಅವರ ವೀರ ಬಾಂಧವರಿಗೆ ಅವಶ್ಯಕತೆ ಬಿದ್ದೊಡನೆ ಈ ಸೈನ್ಯ ತಿರುಗಿ ಬರಲು ಅಲ್ಲಿ ಕಾಯುತ್ತಿತ್ತು. ಟ್ರೋಜನ್ ವೀರರಿಗೆ ಈ ಕಪಟ ನಾಟಕ ಅರ್ಥವಾಗಲೇ ಇಲ್ಲ. ಗ್ರೀಕ್ ಹಡಗುಗಳು ಹಾಯಿ ಬಿಚ್ಚಿ ಕಡಲಿಗೆ ಇಳಿದದ್ದು ಕಂಡು ಅವರೆಲ್ಲರೂ ಹರ್ಷ ಪಟ್ಟರು. ಹಗೆಯನ್ನು ಹೊಡೆದಟ್ಟಲಾಯಿತೆಂದು ಹೆಮ್ಮೆ ಪಟ್ಟರು.

ಕೆಲಕಾಲ ತಡೆದು ನಗರದ ಕೋಟೆಯ ಅಗಸೆಯ ಬಾಗಿಲನ್ನು ತೆರೆದು ನಾಗರಿಕ ಆಬಾಲವೃದ್ಧ ಸ್ತ್ರೀ ಪುರುಷರೆಲ್ಲರೂ ಹೊರಗೆ ಕಡಲ ಬೇಲೆಯವರೆಗೆ ಬಂದು ಹಗೆ ಹಡಗುಗಳು ದೂರ ಹಾಯುವುದನ್ನು ಹಾಯಾಗಿ ನೋಡಲು ನಿಂತರು. ಈ ಮುತ್ತಿಗೆ ಎಂಬುದು ಅವರಿಗೂ ದೊಡ್ಡ ಬಂಧನವಾಗಿತ್ತು. ಒಂದಲ್ಲ, ಎರಡಲ್ಲ, ಒಂದೇ ಸವನೆ ಹತ್ತು ವರ್ಷ ಆ ನಾಗರಿಕರು ನಗರದ ಹೊರಗೆ ಹೆಜ್ಜೆ ಇಟ್ಟಿದ್ದಿಲ್ಲ, ಸೆರೆಯಲ್ಲಿ ಇದ್ದಂತೆ ಕೋಟೆಯೊಳಗೇ ಬದುಕು ಹಿಡಿದುಕೊಂಡು ಇದ್ದರು. ಈಗಲೇ ಅವರಿಗೆ ಬಿಡುಗಡೆ ಅಪಿಸಿದ್ದು. ಬಯಲಲ್ಲಿ ಬಿಸಿಲಲ್ಲಿ ಮೈಚೆಳಿ ಬಿಟ್ಟು ಅಲೆದಾಡಲಿಕ್ಕೆ.

ಆಗ ಬಯಲಲ್ಲಿ ಬಂದು ಅಲೆದಾಡುವಾಗ ಥಕ್ಕನೆ ಅವರು ಈ ಬೆಟ್ಟದಂಥ ಕಟ್ಟಿಗೆಯ ಕುದುರೆಯನ್ನು ಕಂಡರು. ಕೂಡಲೆ ಜನ ಜಂಗುಳಿ ಆ ಕುದುರೆಯನ್ನು ಮುತ್ತಿತು. ಪ್ರತಿಯೊಬ್ಬರೂ ಅದರ ಬಗೆಗೆ ತನ್ನದೇ ಆದ ತರ್ಕ ಕಟ್ಟಿ ಮಾತಾಡ ಹತ್ತಿದರು. ಕೆಲವರು ಮಾತಾಡದೆ ಆ ಕುದುರೆ ಬೆನ್ನೆ ಹತ್ತಿದರು. ಆದರೆ ಅದಕ್ಕೆ ಜೀವವಿಲ್ಲ. ಚಲನವಲನವಿಲ್ಲ. ಕೊನೆಗೆ ಒಬ್ಬ ಜಾಣ ಅದರ ಇತ್ಯರ್ಥವನ್ನು ಮಾಡಿ ಹೇಳಿದನು. ಈ ಕುದುರೆಯನ್ನು ಗ್ರೀಕರು ಬಿಟ್ಟು ಹೋದದ್ದು ಯಾವದೋ ದೇವರಿಗೆ ಹರಕೆಯ ಕಾಣಿಕೆಯೆಂದು.

ಸರಿ ಹಾಗಾದರೆ ಇದನ್ನು ಸಡಗರದಿಂದ ನಗರದ ಒಳಗೆ ಒಯ್ಯಬಾರದೇಕೆ? ಗ್ರೀಕರನ್ನು ಸೋಲಿಸಿ ಓಡಿಸಿದ್ದಕ್ಕೆ ಇದೊಂದು ಸ್ಮಾರಕವಾಗಲಿ

ಕೂಡಲೆ ಆ ಜನ ಸ್ತೋಮ ಹರ್ಷದ ಕೋಲಾಹಲದಲ್ಲಿ ಆ ಮರದ ಮಹಾಮೂರ್ತಿಯನ್ನು ನಗರದ ಮಹಾದ್ವಾರದತ್ತ ಎಳೆದೊಯ್ದಿತು. ಅವರು ಅದನ್ನು ಕೋಟೆಯೊಳಗೇ ಒಯ್ದು ನಗರದ ಮಧ್ಯದಲ್ಲಿ ಟ್ರೋಜನ್ನರ ಪ್ರಧಾನ ದೇವತೆಯ ಗುಡಿಯ ಮುಂದೆ ತಂದು ನಿಲ್ಲಿಸಿದರು. ಮರು ದಿನ ಮುಂಜಾನೆ ಆ ಯಂತ್ರಾಶ್ವವನ್ನು ಆ ದೇವತೆಗೆ ಬಲಿ ಕೊಡುವ ನಿರ್ಧಾರ ಮಾಡಿ ಜನ ತಮ್ಮ ತಮ್ಮ ಮನೆಗೆ ತೆರಳಿದರು.

ಆದರೆ ಆ ಕುದುರೆಯು ಬೆಂಕಿಗೆ ಬಲಿಯಾಗುವ ಮೊದಲು ಟ್ರಾಯ್ ನಗರವೇ ಮರುದಿನ ಸುಟ್ಟು ಭಸ್ಮವಾಯಿತು. ಮಧ್ಯ ರಾತ್ರಿಯಲ್ಲಿ ಒಳಗೆ ಅವಿತುಕೂತ ಗ್ರೀಕ್ ಭಟರೆಲ್ಲ. ಕುದುರೆಯ ಒಡಲ ಕದಗಳನ್ನು ತೆರೆದು ಸದ್ದಿಲ್ಲದೆ ಹೊರಬಿದ್ದರು. ಹೊರ ಬಂದೊಡನೆ ಅವರು ಓಡಿ ಹೋಗಿ ನಗರ ಕೋಟೆಯ ಬಾಗಿಲನ್ನು ತೆರೆದರು. ದ್ವೀಪದಲ್ಲಿ ಹೋಗಿ ಕಾಯುತ್ತಿದ್ದ ಸೈನ್ಯ ಅಷ್ಟರಲ್ಲಿ ಮರಳಿ ಬಂದಿತ್ತು. ಅವರ ಪಡೆಗಳು ಭರದಿಂದ ಒಳ ನುಗ್ಗಿ ಬಂದವು. ಒಳಗಿನ ಹಗೆ ಹೊರಗಿನ ಹಗೆಯೊಂದಿಗೆ ಕೈಗೂಡಿಸಿದರು. ಹತ್ತು ವರ್ಷಕಾಲ ಕಾಯುತ್ತಿದ್ದ ಪರ್ವಣಿಯು ಕೈಗೂಡಿತು. ಅವರೆಲ್ಲರೂ. ವಿಜಯಾನಂದದಲ್ಲಿ ಮೈಮರೆತು ಮಲಗಿದ್ದ ಟ್ರಾಯ್ ನಗರಕ್ಕೆ ಬೆಂಕಿ ಇಕ್ಕಿದರು.

ಟ್ರೋಜನರು ಭಯಚಕಿತರಾಗಿ ಎದ್ದರು. ಹೌಹಾರಿ ಬಿದ್ದರು. ಮುಂದುಗೆಟ್ಟು ಬೀದಿಕೇರಿಗಳಲ್ಲಿ ಹುಚ್ಚರಂತೆ ಓಡಾಡಿದರು. ಗ್ರೀಕ್ ಭಟರು ಅವರನ್ನು ಕಂಡಲ್ಲಿ ಸಿಕ್ಕಲ್ಲಿ ಕೊಂದು ಕಡಿದು ಚೆಲ್ಲಿದರು. ಕೆಲವರು ಹೇಗೋ ನಗರದಿಂದ ಪಾರಾಗಿ ಹೋದರು. ಹಾಗೆ ಪಾರಾದವರಲ್ಲಿ ಈನಿಡ್ ಮಹಾಕಾವ್ಯದ ನಾಯಕ ಈನಿಯಸ್ ಒಬ್ಬ.

ಆದರೆ ಅವನ ಕಥೆ ನಮಗೆ ಇಲ್ಲಿ ಪ್ರಸ್ತುತವಲ್ಲ. "ಮರದ ಯಾಂತ್ರಿಕ ಕುದುರೆ"ಯನ್ನು ಜಡ ಬೊಂಬೆಯೆಂದು ಒಳಗೆ ಬರಮಾಡಿಕೊಂಡು ಟ್ರಾಯಿನ ಜನ ತಮ್ಮ ನಗರದ ರಾಜ್ಯದ ಸರ್ವನಾಶವನ್ನು ಹೇಗೆ ಮಾಡಿಕೊಂಡರೆಂಬುದು ಮಾತ್ರ ಇಲ್ಲಿ ಗಮನಿಸ ಬೇಕಾದ ಅಂಶವು.

ಇದೇ ಕಪಟ ಕಲ್ಪನೆಯನ್ನು ಭಾಸ ಕವಿಯು "ಸ್ವಪ್ನ ವಾಸವದತ್ತ" ನಾಟಕದಲ್ಲಿ ಉಲ್ಲೇಖಿಸಿದ್ದು ಕೌತುಕದ ಸಂಗತಿ. ಉಜ್ಜಯಿನಿಯ ಅರಸ ಮಹಾಸೇನ ಪ್ರದ್ಯೋತನು ಕೌಶಾಂಬಿಯ ರಾಜ ಉದಯನನನ್ನು ಸೆರೆ ಹಿಡಿದು ತರಲು ಹೀಗೆಯೇ ಕೃತಕ ಗಜವನ್ನೊಂದು ನಿರ್ಮಿಸಿ ನಾಗವನದಲ್ಲಿ ಇರಿಸುತ್ತಾನೆ. ಬೇಟೆಯ ಹುಚ್ಚಿನ ವತ್ಸರಾಜ ಉದಯನನು ಕೆಲವೇ ಕಾಲಾಳುಗಳೊಂದಿಗೆ ನಾಗವನಕ್ಕೆ ಬಂದು, ತನ್ನ ಘೋಷವತಿಯೆಂಬ ವೀಣೆಯನ್ನು ನುಡಿಸತೊಡಗುವನು. ಆಗ ಆ ಯಾಂತ್ರಿಕ ಆನೆ ಅವನ ಹತ್ತಿರ ಬರಲು ಕೂಡಲೇ ಅದರೊಳಗಿಂದ ಸೈನಿಕರು ಹೊರಗೆ ಧುಮುಕಿ ಉದಯನನ್ನು ಬಂಧಿಸಿ ಒಯ್ಯುವರು.

ವರ್ಜಿಲ್ ಮಹಾಕವಿಗೂ ಭಾಸ ಕವಿಗೂ ಒಂದೇ ಕಲ್ಪನೆ ಹೊಳೆದದ್ದು. Great minds think alike. ಹಿರಿಯ ಮನಸ್ಸುಗಳೆಲ್ಲ ಒಂದೇ ರೀತಿ ವಿಚಾರ ಮಾಡುವವು ಎಂಬ ಗಾದೆ ಮಾತಿಗೆ ಚೆನ್ನಾದ ದ್ಯೋತಕ. ಆದರೆ ಕೃತಕ ಗಜವು "ಟ್ರೋಜನ್ ಕುದುರೆ"ಯಷ್ಟು ಪ್ರಸಿದ್ಧವಾಗಲಿಲ್ಲ. ಪ್ರತಾಪವನ್ನೂ ಬೀರಲಿಲ್ಲ. ✡



ಪ್ಯಾರಿಸ್ಸಿನ ಪತ್ರಿಕೆಯೊಂದರಲ್ಲಿ ಪ್ರಕಟವಾದ ಒಂದು ಜಾಹಿರಾತು:

"ನಾನು ಧೂಮಪಾನ ಬಿಡಬೇಕಾಗಿದೆ. ಕಾರಣ ನನಗೊಂದು ನೌಕರಿಯ ಅವಶ್ಯಕತೆಯಿದೆ- ಧೂಮಪಾನ ಬಿಟ್ಟು ಬಿಡಲು ಯೋಗ್ಯವಾದಂಥ ಪೆಟ್ರೋಲ್ ಬಂಕು, ಇಲ್ಲವೆ ಶೀಘ್ರ ಉರಿ ತಗುಲಿಕೊಳ್ಳುವಂಥ ಕಾರಖಾನೆಗಳಲ್ಲಿ. ಬೇಕಾದವರು ಕೆಳಗಿನ ವಿಳಾಸಕ್ಕೆ ಬರೆದುಕೊಳ್ಳಿ ..."

# ಪಾವ್ಲ್ ಸೆಜಾನ್

## ನವ್ಯ ಕಲೆಯ ಪಿತಾಮಹ

**ಬಿ. ಪಿ. ಬಾಯಿರಿ**

ತರುಣಿಯು ದುಃಖ ಕ್ರೋಧಗಳಿಂದ ಕೇಳುತ್ತಿದ್ದಳು, "ನನ್ನನ್ನು ಹೀಗೇಕೆ ರೇಗಿಸುತ್ತಿ? ಕಲಾ ಪ್ರಜ್ಞೆ ನನಗಿದೆ. ಚಿತ್ರದಲ್ಲಿ ಬಹುಮಾನ ಗಳಿಸಿದ್ದೆ. ಇಲ್ಲಿ ನಿಲ್ಲಲಾರೆ. ಹೊರಗೆ ಹೋಗುತ್ತೇನೆ ನನ್ನನ್ನು ಬಿಟ್ಟುಬಿಡು." ಸೆಜಾನನು ರಚಿಸಿದ್ದ 'ಮೀಯುತ್ತಿರುವವರು' (The Bathers) ಮತ್ತು ಇತರ ಚಿತ್ರಗಳನ್ನು ನೋಡುತ್ತಿರಬೇಕೆಂದು ಆಕೆಯ ಪತಿರಾಯ ಆಕೆಯನ್ನು ಹಿಡಿದು ನಿಲ್ಲಿಸಿದ್ದ. ಕಾರಣವನ್ನು ಹೇಳಿದ, "ಗಂಡನನ್ನು ತುಚ್ಛೀಕರಿಸಬಾರದು, ಗೌರವದಿಂದ ನೋಡಬೇಕು ಎಂಬ ಬುದ್ಧಿಯನ್ನು ಕಲಿತುಕೊ. ಅದಕ್ಕಾಗಿ ನಿನಗೆ ನಾನು ವಿಧಿಸುವ ಶಿಕ್ಷೆ ಇದು."

ಸೆಜಾನನು ನವ್ಯ ಕಲೆಗೆ ನಾಂದಿ ಹಾಡಿದ ಚಿತ್ರಗಾರ. ಆತನ ಇಪ್ಪತ್ತೈದು ಕೃತಿಗಳನ್ನು ವೊಲ್ಲಾರ್ಡ್ ಎಂಬವನು ಸಂಗ್ರಹಿಸಿ ಪ್ರದರ್ಶನವನ್ನೇರ್ಪಡಿಸಿದ್ದ, ಜನರ ಪ್ರತಿಕ್ರಿಯೆಗಳನ್ನು ಗಮನಿಸಿದ. ಆ ಸಂದರ್ಭದಲ್ಲಿ ಮೇಲಿನಂತೆ ಆಕೆಯ ಅರಚುವಿಕೆಯನ್ನು ಬಾಗಿಲ ಮೂಲಕ ಕೇಳಿದ. ಸೆಜಾನನ ಚಿತ್ರಗಳನ್ನು ನೋಡುತ್ತಿರುವುದೇ ಒಂದು ಹಿಂಸೆ ಎಂಬ ಭಾವನೆ ಆ ಕಾಲದಲ್ಲಿ ಇತ್ತು. ಸೆಜಾನ್ ಶ್ರೀಮಂತ ಬ್ಯಾಂಕರನ ಏಕಮಾತ್ರ ಪುತ್ರ. ಇಲ್ಲವಾದರೆ ಆತನನ್ನು ಹುಚ್ಚನೆಂದು ಹೀಗಳೆಯುತ್ತಿದ್ದರು. ಆತ ಪ್ಯಾರಿಸ್ಸಿನಲ್ಲಿ ಮಿತ್ರರಿಗೂ ಬಂಧುಗಳಿಗೂ ಪೌರರಿಗೂ ಸಮಸ್ಯೆಯ ವ್ಯಕ್ತಿಯಾಗಿದ್ದ. ಪ್ರದರ್ಶನಕ್ಕಾಗಿ ಚಿತ್ರಗಳನ್ನು ಆಯ್ಕೆ ಮಾಡುವವರು ಆತನ ಕೃತಿಗಳನ್ನು ತಿರಸ್ಕರಿಸುತ್ತಿದ್ದರು. ಆತ ಆಕ್ಷೇಪಿಸಿ ಅವರ ಮೇಲೆ ರೇಗಾಡುತ್ತಿದ್ದ. ಅವನಿಗೆ ತಲೆ ಚೆಮರ್ಜದ ವ್ಯಕ್ತಿ ಅಥವಾ ಚೆಮರ್ಜ ಇಲ್ಲದ ವ್ಯಕ್ತಿ ಎಂಬ ಅರ್ಥ ಹೆಸರಿನಿಂದ ಅವಹೇಳನ ಮಾಡುತ್ತಿದ್ದರು. ಬದುಕಿನುದ್ದಕ್ಕೂ ವಿಮರ್ಶಕರ ಟೀಕೆಗೆ ಆತ ಗುರಿಯಾಗಿದ್ದ.

ಪಾವ್ಲ್ ಸೆಜಾನನು ೧೮೩೯ನೆಯ ಇಸವಿ ಜನವರಿ ೧೯ರಂದು ಐಕ್ಸ್ ಎಂಬಲ್ಲಿ ಜನಿಸಿದ. ತಂದೆಯ ಮೂಲಸ್ಥಾನ ಇಟಲಿ. ತಾಯಿ ಆ ಶ್ರೀಮಂತನ ಮನೆಯಲ್ಲಿ ನೌಕರಳಾಗಿದ್ದಳು. ಆತ ೧೮೪೪ರಲ್ಲಿ ಆಕೆಯನ್ನು ವಿವಾಹವಾದನೆಂದು ಫ್ರೆಂಚ್ ವಿಮರ್ಶಕ ಟ್ರಿಸ್ಟನ್ ಕ್ಲಿಂಗ್ಸರ್‌ನ ಅಭಿಪ್ರಾಯ.

ಚಿಕ್ಕಂದಿನಲ್ಲಿ ಸೆಜಾನನಿಗೆ ತಂದೆ ಮಾರ್ಗ ಬದಿಯ ಚಿಲ್ಲರೆ ವ್ಯಾಪಾರಿಯೊಬ್ಬನಿಂದ ಬಣ್ಣದ ಕಡ್ಡಿಗಳ ಪೆಟ್ಟಿಗೆಯೊಂದನ್ನು ತಂದುಕೊಟ್ಟ. ಅದು ಚಿತ್ರಕಲಾ ಪ್ರಪಂಚದತ್ತ ಒಯ್ದು ಸೆಜಾನನ ಭವಿಷ್ಯ ಜೀವನವನ್ನು ನಿರ್ಧರಿಸಿತು. ಐಕ್ಸ್ ನಗರ ಸಂಗ್ರಹಾಲಯದ ಚಿತ್ರ ಸ್ಪರ್ಧೆಯಲ್ಲಿ ದ್ವಿತೀಯ ಬಹುಮಾನ ಗಳಿಸಿದ. ಮಗ ವ್ಯಾಪಾರ ಅಥವಾ ವಕೀಲಿ ಹುದ್ದೆಯನ್ನು ಅವಲಂಬಿಸಬೇಕೆಂದು ತಂದೆಯ ಇಚ್ಛೆಯಾಗಿತ್ತು. ಆದುದರಿಂದ ಚಿತ್ರ ಕಲಿಯಲು ಆತಂಕಿಸಿದ. ಫ್ರಾನ್ಸಿನ ಖ್ಯಾತ ಲೇಖಕ ಎಮಿಲಿ ಜೋಲಾ ಸೆಜಾನನ ಬಾಲ್ಯ ಮಿತ್ರನಾಗಿದ್ದ. ಆತ ಕೊನೆ ತನಕವೂ ಸೆಜಾನ್ನ

ಪ್ರೇಕ್ಷಕರಿಗೆ ವಸ್ತುವಿನ ಗಟ್ಟಿತನ, ಘನತ್ವದ ಕಲ್ಪನೆ ಮೂಡಿಸಬೇಕು ಎಂಬುದು ಆತನ ಉದ್ದೇಶ. ಅದನ್ನು ಸಾಧಿಸಲು ನವೀನ ರಚನಾ ಶೈಲಿಯನ್ನು ಶೋಧಿಸಿದ. ಪ್ರಕೃತಿಯಲ್ಲಿ ಸ್ತಂಭ, ಶಂಕು, ಕೋನ ಗೋಲ ಮೊದಲಾದ ಜ್ಯಾಮಿತಿ ಆಕೃತಿಗಳನ್ನೇ ಮೂಲವಾಗಿ ಹೊಂದಿದೆ ಎಂದು ಕಂಡುಕೊಂಡ. ಆದುದರಿಂದ ಚಿತ್ರಿಸುವಾಗ ಚೌಕ, ಕೋನ ಮೊದಲಾದ ಭೂಮಿತಿ ಆಕೃತಿಯಲ್ಲೇ ಕುಂಚ ಆಡಿಸಿದ ಘನಾಕೃತಿ ಕಲೆಯ (Cubismನ) ಆದ್ಯ ಪ್ರವರ್ತಕನಾದ. ತೈಲ ಹಾಗೂ ಜಲವರ್ಣಗಳೆರಡರಲ್ಲೂ ಚಿತ್ರ ರಚಿಸುತ್ತಿದ್ದ. ಮೈಕೆಲ್ ಏಂಜಲೋ, ರ್‍ಯಾಫೆಲ್ಲರಂತೆ ತಾನು ಕೂಡ ಅಮರವಾದ ಕಲಾಕೃತಿಗಳನ್ನು ರಚಿಸಬೇಕೆಂದು ಅಪೇಕ್ಷಿಸಿದ.

"ಒಂದು ಕೃತಿ ತೃಪ್ತಿಕರವಾಗದಿದ್ದರೆ ಬೆಂಕಿ ಹಾಕು. ಮತ್ತೊಂದನ್ನು ಪ್ರಾರಂಭಿಸು" ಎನ್ನುತ್ತಿದ್ದ. ತಾನು ಹಾಗೆಯೇ ನಡೆಯುತ್ತಿದ್ದ ಇಸ್ಪೀಟು ಆಟಗಾರರು ಎಂಬ ವಿಷಯದ ಮೇಲೆ ಅನೇಕ ವರ್ಣಚಿತ್ರಗಳನ್ನು ರಚಿಸಿದ. ಪ್ರಯೋಗ ಮಾಡುತ್ತಾ ಅದರಲ್ಲಿ ವ್ಯಕ್ತಿಗಳ ಸಂಖ್ಯೆಯನ್ನು ಕಡಿಮೆಗೊಳಿಸಿದ. ಕೊನೆಗೆ ೫ ಕೃತಿಗಳನ್ನು ಮಾತ್ರ ಉಳಿಸಿಕೊಂಡು ಮಿಕ್ಕವುಗಳನ್ನು ನಾಶಮಾಡಿಬಿಟ್ಟ.

ನಿಧಾನವಾಗಿ ಕೆಲಸ ಮಾಡುತ್ತಿದ್ದ. ಚಿತ್ರದಲ್ಲಿ ಸಂಬಂಧ ಪಟ್ಟ ವ್ಯಕ್ತಿಯು ದೀರ್ಘಕಾಲ ಒಂದೇ ರೀತಿ ಕುಳಿತುಕೊಳ್ಳ ಬೇಕಾಗುತ್ತಿತ್ತು. "ನೀನು ಸೇಬು ಹಣ್ಣಿನಂತೆ ನಿಶ್ಚಲವಾಗಿ ಕುಳಿತಿರಬೇಕು. ಸೇಬು ಹಣ್ಣು ಚಲಿಸುತ್ತಿದೆಯೇ?" ಎನ್ನುತ್ತಿದ್ದ. ಆ ಕಾರಣದಿಂದ ಆತನಿಗೆ ರೂಪದರ್ಶಿಗಳು ಸಿಗುವುದು ಕಷ್ಟವಾಗುತ್ತಿತ್ತು. ಹಣ್ಣು ಕುರ್ಚಿ ಮೊದಲಾದ ನಿಶ್ಚಲ ವಸ್ತುಗಳನ್ನೇ ಹೆಚ್ಚಾಗಿ ಚಿತ್ರಿಸ ತೊಡಗಿದ. ಆತನಿಗೆ ಮೇಜಿನ ಮೇಲೆ ಹಣ್ಣು ಮತ್ತು ಕರವಸ್ತ್ರಗಳಂತಹ ವಸ್ತು ಸಮೂಹ ಕೂಡ ಮನುಷ್ಯ ಮುಖ ಅಥವಾ ಸಮುದ್ರ ಸಮೇತ ದೃಶ್ಯದಷ್ಟೇ ಮಹತ್ವದ್ದಾಗಿತ್ತು. ಆತನು ಚಿತ್ರಗಳಲ್ಲಿ ಆಕಾರ, ಬಣ್ಣ, ಮೊರೆ ಮೈ ರಚನೆಗಳ ಹೊಂದಾಣಿಕೆಗೆ ಹೆಚ್ಚು ಮಹತ್ವ ನೀಡುತ್ತಿದ್ದ.

ಆತನ ಚಿತ್ರಕೃತಿಗಳನ್ನು ಪ್ರಥಮವಾಗಿ ಮೆಚ್ಚಿದವರಲ್ಲಿ ಒಬ್ಬಾತ ರೆನ್ವಾರ್ ಎಂಬವನು ಆತನ ಪ್ರೇರಣೆಯಿಂದ ೧೮೭೪ ಮತ್ತು ೧೮೭೭ರಲ್ಲಿ ಸಮಷ್ಟಿ ಪರಿಣಾಮ ಪದ್ಧತಿ Impressionist ಚಿತ್ರಗಾರರ ಕೃತಿಗಳೊಡನೆ ತನ್ನ ಚಿತ್ರಗಳನ್ನು ಪ್ರದರ್ಶಿಸಿದ. ಪ್ರೇಕ್ಷಕರು ಮೆಚ್ಚಲಿಲ್ಲ. ಕುಚೋದ್ಯ ಮಾಡಿದರು. ೧೮೯೫ರಲ್ಲಿ ಜರುಗಿದ ಕಲಾಪ್ರದರ್ಶನದಲ್ಲಿ ಕೂಡ ಆತನ ಕೃತಿಗಳು ನಗೆಗೀಡಾದುವು. ಸಮಷ್ಟಿ ಪರಿಣಾಮ ಪದ್ಧತಿ ಕೃತಿಗಳ ಒಂದು ಸಂಗ್ರಹವನ್ನು ಲಕ್ಸಂಬರ್ಗ್ ಪೆಲೇಸಿನ ಕಲಾಸಂಗ್ರಹಾಲಯಕ್ಕೆ ದಾನವಾಗಿ ನೀಡಿದರು. ಸರಕಾರವು ಆ ಕೊಡುಗೆಯನ್ನು ತಿರಸ್ಕರಿಸಿತು. ತನ್ನ ಕಲೆಯ ಕುರಿತು ಜನರ ವಿರೋಧಗಳನ್ನು ಆತ ಎದುರಿಸಬೇಕಾಯಿತು. ಕಲಾ ಪ್ರಪಂಚದ ಈ ಗೊಂದಲಗಳ ದೆಸೆಯಿಂದ ದೂರವಾಗಿ ಬದುಕಲು ಆಶಿಸಿದ. ಪ್ರಾವೆನ್ಸ್‌ನಲ್ಲಿ ತನ್ನದೇ ಆಸ್ತಿಯಲ್ಲಿ ಖಾಯಮ್ಮಾಗಿ ನೆಲೆಸಲು ತೆರಳಿದ.

ತಾನು ಚಿತ್ರಗಾರ ಮಾತ್ರ ಎಂದು ಆತ ಹೇಳುತ್ತಿದ್ದ. ಜನರೊಡನೆ ಸಂಪರ್ಕ ಗಳಿಸಲಿಲ್ಲ. ನೆರೆಹೊರೆಯ ಕೃಷಿಕರು ಬೀಜ ಬಿತ್ತುವುದಕ್ಕಾಗಿ, ಫಸಲನ್ನು ಕೊಯ್ಯುವುದಕ್ಕಾಗಿ ಹೋಗುತ್ತಿರುವಂತೆ ಈತ ತನ್ನ ಬಣ್ಣ, ಕುಂಚ, ಕ್ಯಾನ್ವಾಸುಗಳನ್ನು ಶ್ರದ್ಧೆಯಿಂದ ಹೊತ್ತುಕೊಂಡು ಬಯಲು, ಕಾಡು, ಗುಡ್ಡಗಳ ಕಡೆ ನಡೆಯುತ್ತಿದ್ದ. ಆದರೆ ಫಲವು ಅನಿಶ್ಚಿತವಾಗಿತ್ತು. ಕೆಲವೊಮ್ಮೆ ತನ್ನ ಚಿತ್ರಗಳನ್ನು ಕತ್ತರಿಸಿ ಮಗನಿಗೆ ಕೊಡುತ್ತಿದ್ದ. ಬಾಲಕನು ಸಮಸ್ಯಾಪೂರ್ತಿ ಮಾಡುವವನಂತೆ ಆ ಚೂರುಗಳನ್ನು ಜೋಡಿಸಿ ಯಥಾಪೂರ್ವ ಪೂರ್ಣ ಚಿತ್ರ ಮಾಡಿಕೊಡಬೇಕೆಂದು ನಿರೀಕ್ಷಿಸುತ್ತಿದ್ದ. ಒಮ್ಮೊಮ್ಮೆ ತನ್ನ ಕೃತಿಗಳನ್ನು ಐಕ್ಸ್‌ನ ಜನರಿಗೆ ಕೊಟ್ಟುಬಿಡುತ್ತಿದ್ದ. ಒಬ್ಬ ಶ್ರೀಮಂತನ ಕೊಡುಗೆ ಇದು, ನಿರಾಕರಿಸಬಾರದು ಎಂದು ಜನರು ಅವುಗಳನ್ನು ಸ್ವೀಕರಿಸುತ್ತಿದ್ದರು. ಬಂಗಾರ ವಿದ್ದರೂ ಉಪಯೋಗ ಮಾಡಲು ತಿಳಿಯದವನಂತೆ ತನ್ನ ಪಾಡು ಆಗಿದೆ ಎಂಬುದಾಗಿ ಆತ ವಿಷಾದದಿಂದ ನುಡಿಯುತ್ತಿದ್ದ.

ಆತನ ನಿಧನಕ್ಕಿಂತ ಮೂರು ವರುಷ ಮುಂಚೆ ಆತನ ಕೃತಿಗಳು ಅಮೂಲ್ಯವಾದುವುಗಳೆಂದು

**ಸೆಜಾನನ ಇನ್ನೊಂದು ಮಹತ್ವದ ಕೃತಿ ಮೌಂಟಸೈ ವಿಕ್ಟ್ಯಯರ್**

ಕೆಲವು ಪರಿಣತ ವಿಮರ್ಶಕರು ಗುರುತಿಸತೊಡಗಿದರು. ನಮ್ಮ ಕಲೆಯ ಕಡೆಗೆ ಗಮನ ಸೆಳೆಯಲು ಇತರರಿಗಿಂತ ಆತನ ಕಾಣಿಕೆ ಹಿರಿದಾಗಿತ್ತು. ವೊಲ್ಲಾರ್ಡ್ ಎಂಬಾತನು ಆಗ ಕಲಾಕೃತಿಗಳ ಮಾರಾಟಗಾರನಾಗಿದ್ದ. ನಂತರ ಸೆಜಾನನ ಇತಿಹಾಸಕಾರನಾದ. ಆತ ಸೆಜಾನನ ಕೃತಿಗಳಿಗೆ ಭವಿಷ್ಯತ್ಕಾಲದಲ್ಲಿ ಬಂಗಾರದ ಬೆಲೆ ಬರುವುದೆಂದು ಊಹೆ ಮಾಡಿ ಅವುಗಳನ್ನು ಸಂಗ್ರಹಿಸಲು ಪ್ರೊವೆನ್ಸ್‌ಗೆ ತೆರಳಿದ. ರೈತಾಪಿ ಜನರನ್ನು ಸಂದರ್ಶಿಸಿ ಕೇಳಿದ. "ಆ ಚಿತ್ರಗಳಿಗೆ ಹಣ ತೆತ್ತು ಕೊಂಡುಕೊಳ್ಳಲು ಪ್ಯಾರಿಸ್ಸಿನಿಂದ ಒಬ್ಬ ಹುಚ್ಚ ಬಂದಿದ್ದಾನೆ" ಎಂದು ಊರಲ್ಲೆಲ್ಲಾ ಸುದ್ದಿ ಹಬ್ಬಿತು. ಕಣಜ ಕೊಟ್ಟಿಗೆಯಲ್ಲಿ ಕುಡಿ ಮುಚ್ಚಲು ಮರೆಮಾಡಿ ಇರಿಸಿದ್ದ ಆತನ ವಸ್ತುಚಿತ್ರ, ದೃಶ್ಯ ಚಿತ್ರಗಳನ್ನೆಲ್ಲಾ ಹುಡುಕಿ ತಂದರು. ಅನಿರೀಕ್ಷಿತವಾಗಿ ಬಂದ ಭಾಗ್ಯವೆಂದು ೧೫೦ ಫ್ರಾಂಕು(೩೦ ಡಾಲರು)ಗಳ ವರೆಗೂ ಬೆಲೆ ಕೇಳಿ ಪಡೆದರು. ಸೆಜಾನನು ಸುದ್ದಿ ನಿರ್ಮಾಪಕನಾದ. ತನ್ನ ಕೃತಿಗಳನ್ನು ಮೆಚ್ಚಲು ತೊಡಗಿದ್ದಾನೆ ತನ್ನ ಕಲೆಗೆ ಬೆಲೆ ಬಂತು ಎಂಬ ವಾರ್ತೆಗಳನ್ನು ಕೇಳಿ ಆನಂದ ಪಟ್ಟ. ನಿಜ. ಆದರೆ ಮಾನ್ಯತೆಯು ಬಲು ವಿಳಂಬವಾಗಿ ಬಂತು. ಆ ಕಾಲಕ್ಕೆ ಆತ ಮುದುಕನಾಗಿದ್ದ.

ಊರ ಹೊರಗೆ ಬಯಲಿನಲ್ಲಿ ಚಿತ್ರಿಸುವುದು ಆತನಿಗೆ ಪ್ರಿಯವಾಗಿತ್ತು. ಮಳೆ ಸುರಿಯುತ್ತಿದ್ದರೂ ಲಕ್ಷಿಸಲಿಲ್ಲ. ನೆನೆಯುತ್ತಾ ಚಿತ್ರಿಸಿದ. ಜ್ವರ, ಹಿಡಿಯಿತು. ಆರೋಗ್ಯ ಕೆಟ್ಟಿತು. ೧೯೦೬ ಅಕ್ಟೋಬರ್ ೨೨ ರಂದು ಮೃತನಾದ.

ಇಂದು ಕಲಾಪ್ರಪಂಚದಲ್ಲಿ ಆತನನ್ನು ನವ್ಯ ಕಲೆಯ ಪಿತಾಮಹನೆಂದು ಕೊಂಡಾಡುತ್ತಾರೆ. ✪



ನಾವು ಆಶ್ಚರ್ಯಪಡುವಂತದ

# ಸೂಕ್ಷ್ಮಜೀವಿಗಳಲ್ಲಿ ಸಹಜೀವನ

**ಇಂದಿರಾ ಮೂರ್ತಿ**

ಪ್ರಕೃತಿಯ ಶಾಂತ ಮಡಿಲಿನಲ್ಲಿ ಪ್ರತಿಯೊಂದು ಜೀವಿಯೂ ತನ್ನ ಬೆಳವಣಿಗೆಯನ್ನು ವಂಶಾಭಿವೃದ್ಧಿಯನ್ನು ಅತ್ಯಂತ ಸಮರ್ಪಕವಾಗಿ ನಡೆಸುತ್ತಾ ಬಂದಿವೆ. ಹಾಗಿಲ್ಲದಾದಲ್ಲಿ ವಿಜ್ಞಾನಿ ಡಾರ್ವಿನ್ನನ ವಿಕಾಸವಾದದ ತತ್ವಕ್ಕನುಗುಣವಾಗಿ ಅವುಗಳ ವಂಶ ನಿರ್ವಂಶವಾಗುತ್ತದೆ. ಸ್ವಲ್ಪ ಸೂಕ್ಷ್ಮವಾಗಿ ಅವಲೋಕಿಸಿದಾಗ ಪ್ರತಿಯೊಂದು ಜೀವಿಯೂ ಇನ್ನೊಂದು ಜೀವಿಯೊಡನೆ ಹೊಂದಿರುವ ಅನ್ಯೋನ್ಯತೆಯು ಅರಿವಾಗುತ್ತದೆ. ಎಲ್ಲಾ ಜೀವಿಗಳೂ ಜೀವನವೆಂಬ ಸರಪಳಿಯ ಒಂದೊಂದು ಉಂಗುರುಗಳೆಂದರೆ ತಪ್ಪಲ್ಲ. ಇಂತಹ ಪರಿಸ್ಥಿತಿಯಲ್ಲಿ ಪರಸ್ಪರ ಸೌಹಾರ್ದತೆ ಅತ್ಯಂತ ಅವಶ್ಯಕವಾದುದು. ಸೂಕ್ಷ್ಮ ಜೀವಿಗಳನ್ನು ಮೊದಲುಗೊಂಡು ಮಾನವ ಜಾತಿಯವರೆಗೆ ಎಲ್ಲಾ ಪ್ರಾಣಿಗಳೂ ಒಂದನ್ನೊಂದು ಅವಲಂಬಿಸಿವೆ. ಈ ಪರಸ್ಪರ ಅವಲಂಬನೆಯೇ ಎಲ್ಲಾ ಜೀವಿಗಳ ವಿಕಾಸಕ್ಕೂ ಬೆಳವಣಿಗೆಗೂ ವಂಶಾಭಿವೃದ್ಧಿಗೂ ಮೂಲ ಕಾರಣ.

'ಕೂಡಿ ಬಾಳಿದರೆ ಸ್ವರ್ಗ ಸುಖ' ಎಂಬ ನಾಣ್ಣುಡಿಯನ್ನು ಯಾರು ತಾನೇ ಕೇಳಿಲ್ಲ? ಆದರೆ ಇದು ಮನುಷ್ಯನಲ್ಲಿ ಕಾರ್ಯಗತವಾಗಿರುವುದು ಸಂಶಯಾಸ್ಪದ. ಅದೇ ಸೂಕ್ಷ್ಮಜೀವಿಗಳು ಇದನ್ನು ಶೇಕಡಾ ನೂರು ಭಾಗ ತಮ್ಮ ಜೀವನದಲ್ಲಿ ರೂಢಿಸಿಕೊಂಡಿವೆ. ಈ ರೀತಿ ಮಾನವನ ಊಹೆಗೂ ಮೀರಿದ ಅವನನ್ನೇ ನಿಬ್ಬೆರಗುಗೊಳಿಸುವ ಕೆಲವು ಜೀವಿಗಳ ಸಹಜೀವನವನ್ನು ಗಮನಿಸುವಾ.

ಚಿಕ್ಕಪುಟ್ಟ ಪ್ರಾಣಿಗಳು ಸದಾ ಕಾಲ ದೊಡ್ಡದಾದ ಮತ್ತು ಬಲಿಷ್ಠವಾದ ಪ್ರಾಣಿಗಳಿಂದ ಹಿಂಸೆಗೊಳಪಡುತ್ತಿರುತ್ತವೆ. ಕೆಲವು ವೇಳೆ ಅವುಗಳ ಆಹಾರವಾಗುವುದೂ ನಿಜ. ಅವುಗಳ ಕಣ್ಣು ತಪ್ಪಿಸಿ ಅವುಗಳ ಮಧ್ಯದಲ್ಲಿಯೇ ವಾಸಿಸಬಲ್ಲ ತಾಕತ್ತನ್ನು ಪ್ರಾಣಿ ಪ್ರಪಂಚದ ಕೆಲವು ಸದಸ್ಯರು ಪಡೆದುಕೊಂಡಿದ್ದಾರೆ. ಉದಾಹರಣೆಗೆ ಗಿಡಗಳ ಮೇಲೆ ವಾಸಿಸುವ ಕೀಟಗಳು ಎಲೆಗಳಂತೆ ಬಣ್ಣ ಮತ್ತು ಆಕಾರ ಹೊಂದಿರುವುವು. ಹಸಿರು ಮಿಡತೆಗಳ (Grasshoppers) ರೆಕ್ಕೆಗಳು ಬಹುವಾಗಿ ಅವು ವಾಸಿಸುವ ಮರದ ಎಲೆಗಳಂತೆಯೇ ಕಾಣುತ್ತವೆ. ಕಡ್ಡಿಕೀಟ (Stick insect)ದ ದೇಹವು ಒಂದು ಅಂಕುಡೊಂಕಾದ ಕಡ್ಡಿಯಂತೆಯೇ ಇದ್ದು ಒಣಗಿರುವ ಕೊಂಬೆ ರೆಂಬೆಗಳ ಮೇಲಿರುವ ಇದನ್ನು ಯಾರಾದರೂ ಕಡ್ಡಿಯೆಂದು ಕೈಗೆತ್ತಿಕೊಳ್ಳುವುದು ಸಹಜವೇ ಆಗಿದೆ. ಇದಲ್ಲದೆ ಗಿಡದ ಮೇಲಿನ ಕಪ್ಪೆಗಳು (Treefrogs) ಹಾವುಗಳು ಗೋಸುಂಬೆಗಳು ತಮ್ಮ ಪರಿಸರಕ್ಕೆ ತಕ್ಕಂತೆ ದೇಹದ ವರ್ಣ ವಿನ್ಯಾಸದಲ್ಲಿ ಬದಲಾವಣೆ ಹೊಂದಬಲ್ಲವು. ಇವೆಲ್ಲಾ ಏರ್ಪಾಡುಗಳು ತಮ್ಮ ಶತ್ರುಗಳ ಕಣ್ಣಿಗೆ ಮಣ್ಣೆರೆಚುವ ತಂತ್ರಗಳು.

ಆದರೆ ಶತ್ರುಗಳನ್ನು ಮಿತ್ರರಾಗಿಸುವ ಅಥವಾ ಬಲಿಷ್ಠರೊಂದಿಗೆ ಸ್ನೇಹ ಸಂಪಾದಿಸಿ ಸ್ವಾಮಿ ಕಾರ್ಯ ಸ್ವಕಾರ್ಯ ಎರಡನ್ನೂ ಸಾಧಿಸುವ ಜಾಣತನವನ್ನು ಶೇಕಡಾ ಐವತ್ತರಷ್ಟು ಜೀವಿಗಳು ಹೊಂದಿವೆ. ಇವುಗಳ ಸಂಘಜೀವನ ಮತ್ತು ಸಹ ಬಾಳ್ವೆಯನ್ನು ಕಂಡರೆ ಎಂಥವರಿಗೂ ಅಚ್ಚರಿಯಾಗದೇ ಇರದು. ಆಫ್ರಿಕ ಮತ್ತು ಭಾರತದೇಶಗಳಲ್ಲಿ ವಾಸಿಸುವ ನಿರ್ದೇಶಕರು (indicaters) ಎಂಬ ಗುಂಪಿಗೆ ಸೇರಿದ ಮಧು ಸೂಚಕ ಎಂದೇ ಕರೆಯಲ್ಪಡುವ ಒಂದು ಪುಟ್ಟ ಹಕ್ಕಿಗಳ ಗುಂಪು ನಡೆಸುವ ಚಮತ್ಕಾರವನ್ನು ನೋಡಿ. ಈ ಹಕ್ಕಿಗಳು ಜೇನುಗೂಡಿನ ತಾಣವನ್ನು ಪತ್ತೆ ಹಚ್ಚುವದರಲ್ಲಿ ಬಹು ಸಮರ್ಥವಾಗಿವೆ. ಇವುಗಳು ಮನುಷ್ಯನನ್ನು ದೊಡ್ಡ ದೊಡ್ಡ ಜೇನುಗೂಡುಗಳಿರುವಲ್ಲಿಗೆ ಕರೆದೊಯ್ಯುತ್ತವೆ. ಇವುಗಳ ಮಾರ್ಗವನ್ನೇ ಅನುಸರಿಸುವಲ್ಲಿ ನಮಗೆ ಹೆಜ್ಜೇನುಗಳ ದರ್ಶನವಾಗುವುದರಲ್ಲಿ ಸಂಶಯವಿಲ್ಲ. ನಂತರ ಮನುಷ್ಯನು ಜೇನನ್ನು ಬೇರ್ಪಡಿಸಿ ಜೇನುಗೂಡಿನ ಮೇಣವನ್ನು ಎಸೆದಾಗ ಈ ಹಕ್ಕಿಗಳು ಅಳಿದುಳಿದ ಜೇನನ್ನು ಚಪ್ಪರಿಸುತ್ತಾ ಮೇಣವನ್ನು ನುಂಗುತ್ತವೆ.

ಆದರೆ ಈ ಮೇಣವನ್ನು ಅರಗಿಸಿಕೊಳ್ಳಬಲ್ಲ ಶಕ್ತಿ ಇವಕ್ಕಿಲ್ಲ. ಇದನ್ನು ಅವು ಬಲು ಜಾಣತನದಿಂದ ನಿರ್ವಹಿಸುತ್ತವೆ. ಅವುಗಳ ಕರುಳಿನಲ್ಲಿ ವಾಸಿಸುವ ಎರಡು ಬಗೆಯ ಸೂಕ್ಷ್ಮಜೀವಿಗಳಾದ ಮೈಕ್ರೊ ಕಾಕಸ್ ಬ್ಯಾಕ್ಟೀರಿಯಾ ಮತ್ತು ಯೀಸ್ಟ್ ಜಾತಿಗೆ ಸೇರಿದ ಕ್ಯಾಂಡಿಡಾ ಅಲ್ಬಿಕನ್ಸ್ ಎಂಬವು ಮೇಣವನ್ನು ಶಿಥಿಲೀಕರಿಸಿ ಪಕ್ಷಿಗೆ ಬೇಕಾದ ಆಹಾರ ಘಟಕಗಳಾಗಿ ಪರಿವರ್ತಿಸುತ್ತವೆ. ಬ್ಯಾಕ್ಟೀರಿಯಾ ಮತ್ತು ಯೀಸ್ಟುಗಳು ಅಲ್ಲಿ ವಾಸಿಸುವ ಗುಟ್ಟೇನು ಗೊತ್ತೆ?! ಈ ಹಕ್ಕಿಯ ಕರುಳಿನಲ್ಲಿ ಇವುಗಳ ಬೆಳವಣಿಗೆಗೆ ಬೇಕಾಗುವ ಅತಿ ಮುಖ್ಯ ಘಟಕವೊಂದು ಉತ್ಪತ್ತಿಯಾಗುತ್ತದೆ. ಈ ರೀತಿಯಾಗಿ ಇವು ತಮ್ಮ ಕಾರ್ಯ ಸಾಧಿಸಿಕೊಂಡು ಆತಿಥೇಯನಿಗೂ ಸಹಾಯಮಾಡುತ್ತವೆ. ಮರ ಕೊರೆಯುವ ಜೀರುಂಡೆಗಳು (Ambrosia beetles) ಮತ್ತು ಗೆದ್ದಲುಗಳು ತಮ್ಮ ನಿವಾಸದಲ್ಲಿ ಪುಟ್ಟ ಬೂಸ್ಟಿನ ಕೈದೋಟವನ್ನು ಹೊಂದಿರುತ್ತವೆ. ಇವನ್ನು 'ಶಿಲೀಂದ್ರವನ' (fungus gardens) ಎಂದು ಕರೆಯುತ್ತಾರೆ. ಬೂಸ್ಟಿನ ಕೋಶಗಳು ಹಕ್ಕಿಯ ಎಣೆಗಳಂತಿರುತ್ತವೆ. ಈ ಬಿಳಿಯ ಸೂಕ್ಷ್ಮವಾದ ಪುಟ್ಟ ಹುಲ್ಲುಗಾವಲಿನಲ್ಲಿ ಜೀರುಂಡೆ ಮತ್ತು ಗೆದ್ದಲು ಮರಿಗಳು ಲಾರ್ವಾಗಳು ಸಂಘಗಳು (ರೂಪಾಂತರದಲ್ಲಿ ಮೊದಲ ಹಂತ) ಮೇಯುತ್ತಿರುತ್ತವೆ. ಸಸ್ಯಕೋಶದ ಹೊರ ಕವಚ ಲಿಗ್ನಿನ್ ಮತ್ತು ಸೆಲ್ಯುಲೋಸ್ ಎಂಬ ರಾಸಾಯನಿಕಗಳಿಂದ ಆಗಿರುತ್ತವೆ. ಈ ರಾಸಾಯನಿಕ ವಸ್ತುಗಳು ಬಹು ಸ್ಥಿರತೆಯನ್ನು ಹೊಂದಿದ್ದು ಅವನ್ನು ಶಿಥಿಲಗೊಳಿಸುವುದು ಯಾವುದೇ ಪ್ರಾಣಿಗಳಿಂದ ಸಾಧ್ಯವಿಲ್ಲ. ಇದನ್ನು ಕೇವಲ ಸೂಕ್ಷ್ಮ ಜೀವಿಗಳು ನಿರ್ವಹಿಸಬಲ್ಲವು. ಬೂಸ್ಟಿನ ಕೆಲವು ಪ್ರಭೇದಗಳು ಈ ಕೆಲಸವನ್ನು ಯಶಸ್ವಿಯಾಗಿ ನೆರವೇರಿಸುತ್ತವೆ. ಗೆದ್ದಲು ಮತ್ತು ಜೀರುಂಡೆಗಳ ಮರಿಗಳಿಗೆ ಆಹಾರವಾಗುವುದಲ್ಲದೇ ಇವು ಶಿಥಿಲೀಕರಿಸಿದ ಲಿಗ್ನಿನ್ ಮತ್ತು ಸೆಲ್ಯುಲೋಸ್‌ಗಳು ಅವುಗಳಿಗೇ ಆಹಾರವಾಗುತ್ತವೆ. ಈ ಬೂಸ್ಟು ಬೆಳೆಯುವ ಆರ್ದ್ರ ಹವಾಮಾನವನ್ನು ಈ ಕೀಟಗಳು ಒದಗಿಸುತ್ತವೆ. ಇದಲ್ಲದೇ ತಮ್ಮ ಪರಂಪರೆಯು ಅವ್ಯಾಹತವಾಗಿ ನಡೆಯುವಂತೆ ಮಾಡಲು ಜೀರುಂಡೆಗಳು ಗೆದ್ದಲುಗಳು ತಮ್ಮ ರೆಕ್ಕೆಗಳಲ್ಲಿ ಹಾಗೂ ದೇಹದ ಹೊರಭಾಗದಲ್ಲಿ ಪಾತ್ರೆಯಾಕಾರದ ಕೋಶಗಳನ್ನು ಹೊಂದಿವೆ. ಈ ಕೋಶಗಳಲ್ಲಿ ಒಂದು ರೀತಿಯ ಎಣ್ಣೆ ಉತ್ಪಾದಿಸುವ ಚಿಕ್ಕ ಜೀವಕೋಶಗಳಿವೆ. ಇವು ಮರ ಕೊರೆಯುವ ಸಂದರ್ಭದಲ್ಲಿ ಪ್ರಚೋದಿಸಲ್ಪಟ್ಟು ತೈಲೋತ್ಪಾದನೆ ಹೆಚ್ಚುತ್ತವೆ.

ಈ ಕೋಶಗಳಲ್ಲಿರುವ ತೈಲದ ಸಹಾಯದಿಂದ ಬೂಸ್ಟಿನ ಸ್ಪೋರುಗಳು (ವಂಶಾಭಿವೃದ್ಧಿ ಮಾಡುವ ಸೂಕ್ಷ್ಮ ಸ್ಥಿತಿಯಲ್ಲಿನ ಕೋಶಗಳು) ಪಾತ್ರೆಯಾಕಾರದ ಪೆಟ್ಟಿಯಲ್ಲಿ ಒಯ್ಯಲ್ಪಡುತ್ತವೆ. ಇದೇ ರೀತಿ ಇವುಗಳ ಅಂದರೆ ಬೂಸ್ಟಿನ ಪ್ರಸರಣಾ ಕಾರ್ಯವೂ ಸಾಗುತ್ತದೆ. ಇದೇ ಬಾಂಧವ್ಯವು ವಂಶಪಾರಂಪರ್ಯವಾಗಿ ನಡೆಯುತ್ತದೆ. ಮನು

ಷ್ಯನು ತನ್ನ ಆಹಾರಕ್ಕಾಗಿ ಹಸು ಎಮ್ಮೆಗಳನ್ನು ಸಾಕುವಂತೆ ಈ ಗೆದ್ದಲು ಜೀರುಂಡೆಗಳು ಬೂಸ್ಟನ್ನು ಸಾಕುತ್ತವೆ.

ನಿದ್ರಾರೋಗ ಉಂಟುಮಾಡುವ ಆಫ್ರಿಕದ ತ್ಸೆ ತ್ಸೆ ನೊಣಗಳು ( glossina ) ಪಕ್ಷಿಗಳ, ಸಸ್ತನಿಗಳ ಗರ್ಭಾಶಯದಲ್ಲಿ ನೆಲೆಯಾಗಿರುತ್ತವೆ ಇವುಗಳ ಮರಿಗಳು (ಲಾರ್ವಗಳು) ಗರ್ಭಾಶಯ ದಲ್ಲಿಯೇ ಉಳಿದು ಅಲ್ಲಿ ಹಾಲೂಡುವ ಗ್ರಂಥಿಗಳ ಸಹಾಯದಿಂದ ಆಹಾರ ಪಡೆಯುತ್ತವೆ. ಇವುಗಳೊಂದಿಗೆ ಸಹಜೀವನ ನಡೆಸಬೇಕಾಗಿರುವ ಬ್ಯಾಕ್ಟೀರಿಯಾಗಳು ಈ ಗ್ರಂಥಿಗಳಲ್ಲಿ ನೆಲೆಸಿದ್ದು ಅವೂ ಆಹಾರದೊಂದಿಗೆ ಮರಿಗಳ ಹೊಟ್ಟೆ ಸೇರುತ್ತವೆ. ಈ ಪ್ರಕಾರ ಅವುಗಳ ಬಾಂಧವ್ಯ ಎಲ್ಲಿಯೂ ಮುರಿಯದೆ ಅವ್ಯಾಹತವಾಗಿ ನಡೆದು ಬರುತ್ತದೆ.

ದ್ವಿದಳ ಧಾನ್ಯಗಳಾದ ತೊಗರಿ, ಹೆಸರು, ಮೆಂತ್ಯೆ, ಅವರೆ, ಅಲಸಂದಿ ಮುಂತಾದ ಗಿಡಗಳ ಬೇರಿನಲ್ಲಿ ಮಟ್ಟ ಮಣಿಗಳನ್ನು ಕೋದಂತಿರುವ ಗಂಟುಗಳನ್ನು ನೀವು ನೋಡಿರಬಹುದಲ್ಲವೆ ? ತಿಳಿ ಗುಲಾಬಿ ಬಣ್ಣದ ವಿವಿಧ ಆಕಾರದ ಈ ಗಂಟುಗಳು ರೈಜೊಬಿಯಂ ಜಾತಿಗೆ ಸೇರಿದ ಬ್ಯಾಕ್ಟೀರಿಯಾಗಳ ನಿವಾಸಸ್ಥಾನ. ಈ ಗಂಟುಗಳನ್ನು ಹಿಸುಕಿ ಸೂಕ್ಷ್ಮದರ್ಶಕದಡಿ ನೋಡಿದಾಗ ಇದರ ಸತ್ಯತೆಯು ಅರಿವಾಗುತ್ತದೆ. ಮಸೂರದಡಿ ಇಂಗ್ಲಿಷ್ ವರ್ಣಮಾಲೆಯ ಅಕ್ಷರಗಳನ್ನು ಹೋಲುವ T, L, Y, X ಮುಂತಾದ ಆಕಾರದ ಬ್ಯಾಕ್ಟೀರಿಯಾಗಳ ಸಮೂಹವೇ ಕಂಡುಬರುತ್ತವೆ. ದ್ವಿದಳ ಧಾನ್ಯಗಳ ಗಿಡದ ಬೇರಿನ ಸುತ್ತಲೂ ಅವು ಸ್ರವಿಸುವ ಕೆಲವು ರಾಸಾಯನಿಕ ವಸ್ತುಗಳು ಹಾಗೂ ವಿಟಮಿನ್‌ಗಳು ಬ್ಯಾಕ್ಟೀರಿಯಾಗಳನ್ನು ಆಕರ್ಷಿಸುತ್ತವೆ. ಇದರಲ್ಲಿ ಪ್ರಮುಖವಾದುದು ಟ್ರಿಪ್ಟೋಫನ್

ಎಂಬ ಅಮೈನೋ ಆಮ್ಲ (ಅಮೈನೋ ಆಮ್ಲಗಳು ಪ್ರೋಟೀನ್ನಿನ ಸೂಕ್ಷ್ಮ ಘಟಕಗಳು) ಇದನ್ನು ವಿಭಜಿಸಿ ಬ್ಯಾಕ್ಟೀರಿಯಾಗಳು ಇಂಡಾಲ್ ಅಸಿಟಿಕ್ ಆಮ್ಲವನ್ನು ತಯಾರು ಮಾಡುತ್ತವೆ. ಈ ಆಮ್ಲವು ಸಸ್ಯ ಬೆಳವಣಿಗೆಗೆ ಅತ್ಯಂತ ಸಹಕಾರಿ. ಇದನ್ನು ನೀಡುವುದರ ಮೂಲಕ ಸಸ್ಯದ ಮನವೊಲಿಸಿಕೊಳ್ಳುವ ಈ ಬ್ಯಾಕ್ಟೀರಿಯಾಗಳು ನಿಧಾನವಾಗಿ ಬೇರಿನ ಮುಖಾಂತರ ಒಳ ಪ್ರವೇಶಿಸಿ ಬೀಡು ಬಿಡುತ್ತವೆ. ಬ್ಯಾಕ್ಟೀರಿಯಾಗಳ ಹೊರ ಕವಚವು ಸಸ್ಯವನ್ನು ಪ್ರಚೋದಿಸಿ ಕೋಟೆಯನ್ನು ಭೇಧಿಸುತ್ತವೆ. ನಂತರ ಒಳಹೊಕ್ಕು ಗಂಟಿನಲ್ಲಿ ಸ್ಥಿರವಾಗಿ ನೆಲಸುತ್ತವೆ. ಅಲ್ಲಿದ್ದುಕೊಂಡು ವಾತಾವರಣದ ಸಾರಜನಕವನ್ನು ಬಂಧಿಸಿ ಗಿಡಕ್ಕೆ ಒದಗಿಸುತ್ತವೆ. ಗಿಡದ ಬೆಳವಣಿಗೆಗೆ ಅತ್ಯಂತ ಪ್ರಮುಖವಾದ ಈ ಸಾರಜನಕವನ್ನು ನೀಡುವ ಬ್ಯಾಕ್ಟೀರಿಯಾಗಳನ್ನು ಹೊಂದಿರುವ ಗಿಡಗಳು ಅತ್ಯಂತ ದಷ್ಟಪುಷ್ಟವಾಗಿ ಬೆಳೆಯುತ್ತವೆ. ಇವುಗಳ ಲಾಭದಿಂದ ವಂಚಿತವಾದ ಸಸ್ಯಗಳು ಬಡಕಲಾಗಿ ಬೆಳೆಯದೇ ನಶಿಸಿ ಹೋಗುತ್ತವೆ. ಈ ಮೂಲಕ ಬ್ಯಾಕ್ಟೀರಿಯಾಗಳು ಸಸ್ಯದೊಂದಿಗೆ ಹೊಂದಿರುವ ನಿಕಟ ಸ್ನೇಹವನ್ನು ಪರಸ್ಪರ ಸಹಾಯವನ್ನು ತಿಳಿಯಬಹುದು.

ಎರಡು ಜೀವಿಗಳ ಸಹಕಾರ ಎಷ್ಟು ನಿಕಟವಾಗಿದೆಯೆಂದರೆ ಅವನ್ನು ಬೇರೊಂದು ಜಾತಿಯ ಸಸ್ಯವೆಂದೇ ಹೇಳಬಹುದು. ಇದು ಶಿಲಾವಲ್ಕ ಅಥವಾ ಕಲ್ಲು ಹೂಗಳಲ್ಲಿ ಕಂಡುಬರುವಹುದಾದ ವಿಶೇಷ. ಪಾಚಿ ಸಸ್ಯ ಮತ್ತು ಶಿಲೀಂಧ್ರ ಅಥವಾ ಬೂಸ್ಟು ಒಟ್ಟಾಗಿ ಬಾಳುವ ಪರಿ ಕಲ್ಲು ಹೂವಾಗಿ ಅರಳಿದೆ. ಇದು ಸಹಕಾರ ಜೀವನದ ಉತ್ತುಂಗತೆ. ಇಲ್ಲಿ ಎರಡನ್ನೂ ಪ್ರತ್ಯೇಕಿಸಿದರೆ ಅವು ಬಾಳಲಾರವು. ಅತ್ಯಂತ ದುಸ್ಸಹವಾದ ಪ್ರದೇಶದಲ್ಲಿ ಮಳೆಯ ಅಭಾವವಿರುವ ಬಿಸಿಲು ಹೆಚ್ಚಾಗಿರುವ ಸ್ಥಳಗಳಲ್ಲಿ ಕಲ್ಲಿನ ಸಂದುಗಳಲ್ಲಿ ಎಲೆ ಎಲೆಯಾಗಿ ಅಥವಾ ಚಿಕ್ಕ ಚಿಕ್ಕ ಗಂಟುಗಳಾಗಿ ಅಥವಾ ಉದ್ದುದ್ದ ಕೋಶಗಳಾಗಿ ಅರಳಿರುವ ಈ ಕಲ್ಲುಹೂವಿನ ಸಂಗತಿ ಆಶ್ಚರ್ಯಕರವಾದುದೇ ಸರಿ ಶಿಲೀಂಧ್ರಗಳು ಉತ್ಪಾದಿಸುವ ಕೆಲವು ಆಮ್ಲಗಳ ಸಹಾಯದಿಂದ ಅವು ಕಲ್ಲನ್ನು ಕೊರೆದು ಮಣ್ಣಾಗಿಸುತ್ತವೆ. ಈ ಮಣ್ಣಾದ ಭಾಗದಲ್ಲಿ ಅಪರೂಪಕ್ಕಾಗುವ ಮಳೆ ನೀರನ್ನು ಹಿಡಿದಿಡುತ್ತವೆ. ಇದರೊಂದಿಗೆ ಬಾಳುವ ಪಾಚಿ ಸಸ್ಯವು ಕ್ಲೋರೋಫಿಲ್ ಅಥವಾ ಹರಿತ್ತನ್ನು ಹೊಂದಿರುವದರಿಂದ ಬೆಳಕು ಮತ್ತು ನೀರಿನ ಸಹಾಯದಿಂದ ಆಹಾರವನ್ನು ಉತ್ಪಾದಿಸುತ್ತದೆ. ಈ ಗಳಿಕೆಯ ಸಮಪಾಲು ಎರಡೂ ಸದಸ್ಯರಿಗೂ ಉಂಟು. ಇವುಗಳ ಸಹಕಾರ ಜೀವನದಿಂದ ಇವೆರಡೂ ಎಂತಹ ಉಷ್ಣತೆಯನ್ನೂ ಸಹಿಸಬಲ್ಲವು ಮತ್ತು ಎಂತಹ ವಿಷಮ ವಾತಾವರಣದಲ್ಲೂ ಬೆಳೆಯಬಲ್ಲವು. ಈ ಸಂಯೋಜನೆಯಿಂದ ಅವು ವಿಶಿಷ್ಟ ಅಂಗಗಳನ್ನೂ ಕ್ರಿಯೆಗಳನ್ನು ಮತ್ತು ಅದ್ವಿತೀಯ ರಾಸಾಯನಿಕ ವಸ್ತುಗಳನ್ನು ಉತ್ಪಾದಿಸಬಲ್ಲ ಸಾಮರ್ಥ್ಯವನ್ನೂ ಪಡೆದಿವೆ. ಇವುಗಳು ಉತ್ಪಾದಿಸುವ ತ್ರಿ ಸುವಾಸಿಕ ವಸ್ತುಗಳಿಗಾಗಿ ಇವನ್ನು ಸಾಂಬಾರ ಪದಾರ್ಥದಂತೆ ಉಪಯೋಗಿಸುತ್ತಾರೆ. ಈ ಶಕ್ತಿಯು ಸಂಯೋಜನೆಯಿಂದಲೇ ದೊರೆತದ್ದಾಗಿದೆ.

ಪೊಟೋಬ್ಲೆಫೆರಾನ್ ಎಂಬ ಜಾತಿಯ ಮೀನುಗಳು ದೀಪದ ಹುಳ ಮಿಂಚುಹುಳು, ಜೀರುಂಡೆಗಳು, ಬೆಳಕು ಬೀರುವ ಸಾಮರ್ಥ್ಯವನ್ನು ಪಡೆದಿವೆ. ಮೇಲೆ ತಿಳಿಸಿದ ಮೀನುಗಳಲ್ಲಿ ಕಣ್ಣಿನ ಕೆಳ ಭಾಗದಲ್ಲಿ ವಿಶೇಷವಾಗಿ ನಿರ್ಮಿತವಾದ



ಚೀಲದಂತಹ ಅಂಗದಿಂದ ಬೆಳಕು ಸೂಸುತ್ತದೆ. ಇದಕ್ಕೆ ಕಾರಣ ಈ ಚೀಲದಲ್ಲಿ ಅಡಗಿ ಕುಳಿತಿರುವ ಕೆಲವು ಸೂಕ್ಷ್ಮಜೀವಿಗಳು ಇವು ಉತ್ಪಾದಿಸುವ ರಾಸಾಯನಿಕ ವಸ್ತುಗಳು ಬೆಳಕು ಸೂಸುವ ಗುಣಹೊಂದಿರುತ್ತವೆ. ಇದಕ್ಕೆ ಪ್ರತಿಯಾಗಿ ಈ ಸೂಕ್ಷ್ಮಜೀವಿಗಳು ಅತಿಥಿಯ ಮನೆಯಲ್ಲಿ ಸ್ಥಿರವಾಗಿ ಬೇರಿಳಿಸಿ ಅತಿಥಿಯೀ ಆಹಾರದಲ್ಲಿ ಪಾಲು ಪಡೆದು ತಮ್ಮ ವಂಶೋದ್ಧಾರ ಮಾಡಿಕೊಳ್ಳುತ್ತವೆ. ಈ ಬೆಳಕಿನಿಂದ ಮೀನುಗಳು ತಮ್ಮ ಆಹಾರವನ್ನು ಆಕರ್ಷಿಸುತ್ತವೆ. ಬೆಳಕಿನಿಂದ ಸೆಳೆಯಲ್ಪಟ್ಟ ಬಲಿಪಶುಗಳು ಸಮೀಪಿಸುತ್ತಿದ್ದಂತೆ ಇವು ಗಬಕ್ಕನೇ ನುಂಗಿಬಿಡುತ್ತವೆ. ಗಂಡು ಹೆಣ್ಣನ್ನು ಪರಸ್ಪರ ಆಕರ್ಷಿಸಲು ಸಹ ಈ ಬೆಳಕು ಉಪಯೋಗವಾಗುತ್ತದೆ. ಈ ಸೂಕ್ಷ್ಮಜೀವಿಗಳನ್ನು ಹೊಂದಿರುವ ಚೀಲದ ಮೇಲಿರುವ ಕವಾಟದಂತಹ ಪೊರೆಯು ಚೀಲವನ್ನು ಮುಚ್ಚಲು ಸಹಕಾರಿಯಾಗಿದೆ. ಈ ಕವಾಟದ ಚಲನೆಯಿಂದ ಮೀನುಗಳು ತಮ್ಮ ಬೆಳಕನ್ನು ದೀಪವನ್ನು ಹತ್ತಿಸಿ ಆರಿಸುವಂತೆ ನಿಯಂತ್ರಿಸಬಲ್ಲವು. ಈ ಸೂಕ್ಷ್ಮಜೀವಿಗಳಿಗಾಗಿ ಮೀನುಗಳು ಅತ್ಯಂತ ವಿಶೇಷ ಅಂಗಗಳನ್ನು ಬೆಳೆಸಿಕೊಂಡಿರುತ್ತವೆ. ಕೋಶಗಳು ಗಾಜಿನ ಮಸೂರದಂತೆ ವರ್ತಿಸಬಲ್ಲವು. ಬೆಳಕನ್ನು ಪ್ರತಿಫಲಿಸುವ ಶಕ್ತಿಯನ್ನು ಪಡೆದವೂ ಆಗಿರುತ್ತವೆ. ಈ ಬೆಳಕಿನ ಚೆಲ್ಲಾಟದಿಂದ ಉಳಿದ ಪ್ರಾಣಿಗಳಿಗೆ ಅದರಲ್ಲೂ ಇವುಗಳ ಆಹಾರವಾಗಿರುವ ಮರಿ ಮೀನುಗಳಿಗೆ ಪ್ರಾಣಸಂಕಟ. ಯಾರಿಗೆ ಏನೇ ಆಗಲಿ ಬ್ಯಾಕ್ಟೀರಿಯಾಗಳಿಗೆ ಮೀನುಗಳು ನೆಮ್ಮದಿಯ ಜೀವನ ಸಹ ಬಾಳ್ವೆಯ ಸುಧಾಪಾನ.

ರಕ್ಷಣೆಗಾಗಿಯೋ ವಾಸಸ್ಥಾನಕ್ಕಾಗಿಯೋ ವಂಶಾಭಿವೃದ್ಧಿಗಾಗಿಯೋ ಸಹಜೀವನವನ್ನು ಪ್ರಾಣಿಗಳು ತಪ್ಪದೆ ಪಾಲಿಸುತ್ತವೆ. ಪ್ರಕೃತಿಯ ಸೂಕ್ಷ್ಮ ಪದರಗಳಲ್ಲಿ ಇವು ನೆಲೆಸಿ ತಮ್ಮ ತಮ್ಮಲ್ಲಿ ಮಧುರ ಬಾಂಧವ್ಯವನ್ನು ಬೆಳಸಿ ಉಳಿಸಿಕೊಂಡುಬಂದಿವೆ. ಇವುಗಳ ಅನ್ಯೋನ್ಯತೆ ಎಷ್ಟರ ಮಟ್ಟಿಗೆ ಮುಂದುವರೆದಿದೆ ಎಂದರೆ ಒಂದನ್ನೊಂದು ಅಗಲಿಸಿದರೆ ಇವು ಬಾಳಲಾರವು. ವಿರಹ ಸಹಿಸಲಾರದೇ ಪ್ರಾಣತ್ಯಾಗಮಾಡುವ ಈ ಸೂಕ್ಷ್ಮಜೀವಿಗಳ ಮತ್ತು ಪ್ರಾಣಿಗಳ ಸ್ನೇಹದ ಬೆಲೆ ಕಟ್ಟಲಾದೀತೇ ? ಈ ಸಾಹಚರ್ಯದಿಂದ ನಿಜಕ್ಕೂ ಮನುಷ್ಯ ಪಾಠ ಕಲಿಯಬೇಕಾಗಿದೆ.

ಪ್ರಕೃತಿ ನೀಡಿದ್ದನ್ನೇ ಪ್ರಸಾದವೆಂದು ಸ್ವೀಕರಿಸಿ ಅದಕ್ಕನುಗುಣವಾಗಿಯೇ ಬಾಳುತ್ತಿರುವ ಈ ಜೀವಿಗಳೆಲ್ಲಿ, ತನ್ನ ಸುಖ ಸಂಪತ್ತಿಗೆ ದುರಾಶೆಯಿಂದ ಪ್ರಕೃತಿಯ ಸಮತೋಲನವನ್ನೇ ಬುಡಮೇಲು ಮಾಡುತ್ತಿರುವ ಮಾನವರೆಲ್ಲಿ? ದುರಾಶೆಯಿಂದ ಕೂಡಿದ ಮನುಷ್ಯ ಸುಲಲಿತವಾಗಿ ಸ್ವಚ್ಛಂದವಾಗಿ ಹರಿಯುತ್ತಿರುವ ನದಿಗಳಿಗೆ ತಡೆಹಾಕಿ ಅಣೆಕಟ್ಟು ಕಟ್ಟಿದ್ದಾನೆ. ಔದ್ಯೋಗೀಕರಣದಿಂದ ಕ್ರಾಂತಿಯುಂಟುಮಾಡಿ ಆ ಕಾರ್ಖಾನೆಯ ತ್ಯಾಜ್ಯಪದಾರ್ಥಗಳನ್ನು ಕಳೆಕೊಳೆಗಳನ್ನು ಒಂದಾಗಿ ನಿರ್ದಾಕ್ಷಿಣ್ಯವಾಗಿ ಹೊಳೆಗೆ ಹರಿಸಿಬಿಡುತ್ತಿದ್ದಾನೆ. ಮರಗಳನ್ನು ಕಡಿದು ಅರಣ್ಯನಾಶಮಾಡುತ್ತಿದ್ದಾನೆ. ಬೆಳೆಗಳಿಗೆ ರಕ್ಷಣೆಯ ನೆವದಲ್ಲಿ ವಿಷಪೂರಿತ ಕೀಟನಾಶಕಗಳನ್ನು ಹರಡುತ್ತಿದ್ದಾನೆ. ಆಧುನಿಕ ಜಗತ್ತಿನಲ್ಲಿ ಕೆಲವೇ ಗಂಟೆಗಳಲ್ಲಿ ಎಲ್ಲಾ ಸ್ಥಳಗಳನ್ನೂ ಸುತ್ತಾಡಬಲ್ಲ ಈ ಮಾನವ ತನ್ನೊಡನೆ ಜೊತೆ ಜೊತೆಗೆ ಪರೋಪಜೀವಿಗಳನ್ನು ಸಾಗಿಸುತ್ತಿದ್ದಾನೆ, ರೋಗಗಳನ್ನು ಹರಡುತ್ತಿದ್ದಾನೆ.

ಇಂಥ ಮಾನವ ತನ್ನ ಅಕ್ಕಪಕ್ಕದವರೊಡನೆಯೇ ಸಹಜೀವನ ನಡೆಸಲಾರ. ನೆರೆಹೊರೆಯವರಲ್ಲಿ ಬಾಂಧವ್ಯ ಬೆಳೆಸಲಾರ. ಸಂಕುಚಿತಗೊಳ್ಳುತ್ತಿರುವ ಜಗತ್ತಿನಲ್ಲಿ ಇನ್ನೂ ಸಂಕುಚಿತಗೊಳ್ಳುತ್ತಿರುವ ಮಾನವ ಈಗಲಾದರೂ ಎಚ್ಚೆತ್ತು ತನಗಿಂತ ಎಷ್ಟೋ ಪಟ್ಟು ವಿಕಾಸದ ಹಾದಿಯಲ್ಲಿ ಹಿಂದಿರುವ ಪ್ರಾಣಿಗಳ ಸಹಜೀವನವನ್ನು ಕಂಡಾದರೂ ಮನೋವೈಶಾಲ್ಯವನ್ನು ಬೆಳೆಸಿಕೊಳ್ಳಲಿ. ನೆಮ್ಮದಿಯ ಸಹಜೀವನ ನಡೆಸುವಂತಾಗಲಿ. ✶



(೪೦ನೆಯ ಪುಟದಿಂದ ಮುಂದುವರಿದುದು)
ಹಿರಾಚಂದ, ನಾನಿ ಪಾಲಖಿವಾಲಾ, ಕೆ.ಕೆ. ಬಿರ್ಲಾ, ರಾಮಕೃಷ್ಣ ಬಜಾಜ, ಎಸ್. ಪಿ. ಗೋದ್ರೇಜ, ಮೊದಲಾದ ಮುಂಬಯಿಯ ಪ್ರಮುಖ ಖ್ಯಾತ ಉದ್ಯೋಗ ಪತಿಗಳು, ವಿಶ್ವವಿಖ್ಯಾತ ವಿಜ್ಞಾನಿ ರಾಜಾ ರಾಮಣ್ಣ, ಖ್ಯಾತ ಕನ್ನಡ ಸಾಹಿತಿ ಮಾಸ್ತಿ ವೆಂಕಟೇಶ ಅಯ್ಯಂಗಾರ, ಖ್ಯಾತ ಪತ್ರಿಕೋದ್ಯಮಿಗಳಾದ ರಾಮ ತರನೇಜಾ, ಜಿ. ಎಂ. ಲಾಡ್, ಖ್ಯಾತ ಸಮಾಜ ಸೇವಕರಾದ ಟಿ. ವಿ. ರಾಮಾನುಜಂ, ನಾನಾ ಚುಡಾಸಾಮಾ, ಜಿ. ನಾರಾಯಣ ಸ್ವಾಮಿ, ಆರ್. ಡಿ. ಚಾರ, ಪಿಲೂ ಮೋದಿ, ಎಂ. ಆರ್. ಮಸಾನಿ, ಡಾ. ನಾರಾಯಣ ಮೆನನ್, ಎಚ್. ವಾಯ್. ಶಾರದಾ ಪ್ರಸಾದ ಅವರು ಸಮಿತಿಯ ಸದಸ್ಯರು. ಆರ್. ಜಿ. ಎನ್. ವಿಜಯನಗರ ಅವರು ಸಂಯೋಜಕರು. ಜಿ. ಸುಬ್ಬಣ್ಣ ಮತ್ತು ಅ.ಸು. ಕೃಷ್ಣ ರಾಯರು ಜೊತೆ ಕಾರ್ಯದರ್ಶಿಗಳು. ಮೂರ್ತಿಯವರ ನಿಸ್ವಾರ್ಥ ಸೇವೆಯನ್ನು ಅವರ ಹಿರಿಯ ಸಾಧನೆಗಳನ್ನು ಗುರುತಿಸಿ ಅವರಿಗೆ ಸಾರ್ವಜನಿಕ ಸನ್ಮಾನ ಮಾಡುವ ಯೋಜನೆ ಈ ಸಮಿತಿಗಿದೆ. ಸನ್ಮಾನ ಸಮಾರಂಭದ ಅಂಗ ವಾಗಿ ೧೧–೩–೮೨ ರಂದು ಇಲ್ಲಿಯ ಷಣ್ಮುಖಾನಂದ ಸಭಾಗೃಹದಲ್ಲಿ ಪಂ. ಭೀಮಸೇನ, ಜೋಶಿಯವರ 'ಸಂತವಾಣಿ' ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಮೂರ್ತಿ ದಂಪತಿಗಳನ್ನು ಆಶೀರ್ವದಿಸಲು ಪೇಜಾವರ ಹಾಗೂ ಅದಮಾರು ಮಠದ ಶ್ರೀಗಳು ಆಗಮಿಸಿದ್ದರು.

ಮೂರ್ತಿಯವರು ಖ್ಯಾತ–ಅರ್ಥಿಕ ಶಾಸ್ತ್ರಜ್ಞರು, ಅಮೇರಿಕನ್ ಮಾದರಿಯ ಪ್ರಜಾಪ್ರಭುತ್ವ ಪದ್ಧತಿಯಲ್ಲಿ ವಿಶ್ವಾಸವುಳ್ಳವರು. ರಾಜಾಜಿ ಅವರಲ್ಲಿ ಮೂರ್ತಿಯವರಿಗೆ ಅಪರಿಮಿತ ನಿಷ್ಠೆ ಭಕ್ತಿ. ರಾಜಾಜಿಯವರು ಸ್ವತಂತ್ರ ಪಕ್ಷವನ್ನು ಆರಂಭಿಸಿದಾಗ, ಮೂರ್ತಿಯವರು ಆ ಪಕ್ಷವನ್ನು ಸೇರಿದುದಲ್ಲದೇ ಮುಂಬಯಿಯಲ್ಲಿ ಆ ಪಕ್ಷದ ವರ್ಚಸ್ಸು ಬೆಳೆಯುವಂತೆ ಪ್ರಯತ್ನಿಸಿದರು. ಸ್ವತಂತ್ರ ಪಕ್ಷದ ಪ್ರಮುಖ ಕಾರ್ಯಕರ್ತರಾಗಿ ಚುನಾವಣೆಗಳಲ್ಲಿ ಪ್ರಚಾರ ಮಾಡಿದರು. ಒಂದು ಸಲ ಮಾತುಂಗಾ ಕ್ಷೇತ್ರದಿಂದ ವಿಧಾನ ಸಭೆಗೂ ಸ್ವತಂತ್ರ ಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧಿಸಿದರು. ಆದರೆ ಮುಂಬಯಿಯಲ್ಲಿ ಚುನಾವಣೆ ಗೆಲ್ಲುವಷ್ಟು ಬೆಂಬಲ ಸ್ವತಂತ್ರ ಪಕ್ಷದ ಮರಿಯಾಳುಗಳಿಗೆ ಇಲ್ಲದಿದ್ದುದರಿಂದ ಅವರು ಪರಾಜಿತರಾದರು. ಹೀಗಾಗಿ ಮೂರ್ತಿಯವರಿಗೆ ರಾಜಕೀಯದ ಕಹಿ ನೋವುಗಳ ಪರಿಚಯವೂ ಆಗಿದೆ. ಅವರು ಸ್ವತಂತ್ರ ಪಕ್ಷದ ಧುರೀಣರಾಗಿದ್ದುದರಿಂದ ಅನೇಕರು ಅವರು ಬಂಡವಾಳಶಾಹಿ ಪ್ರಣಾಳಿಯ ಪ್ರತಿಪಾದಕರು ಸಮಾಜವಾದದ ನಿಂದಕರು ಎಂದು ಮೂರ್ತಿಯವರನ್ನು ಟೀಕಿಸುತ್ತಾರೆ. ಕನ್ನಡ ಭಾಷೆ, ಸಾಂಸ್ಕೃತಿಕ ಶಿಕ್ಷಣದ ಬಗೆಗೆ ಅವರಿಗಿರುವ, ಕಳಕಳಿ, ಶ್ರದ್ಧೆಯನ್ನು ಎಲ್ಲರೂ ಮೆಚ್ಚಿಕೊಂಡರೂ, ಎಸ್.ಆಯ್.ಇ.ಎಸ್ ಕಾಲೇಜಿನಲ್ಲಿ ಕನ್ನಡ ಉಳಿಸಿಕೊಳ್ಳಲು ಮತ್ತು ತಮ್ಮದೇ ಆದ ಕನ್ನಡ ರಾಷ್ಟ್ರೀಯ ಸಮಿತಿಯ ಜೂನಿಯರ ಕಾಲೇಜಿನಲ್ಲಿ ಕನ್ನಡ ಮಾಧ್ಯಮ ಆರಂಭಿಸಲು ಮೂರ್ತಿಯವರು ಸಫಲರಾಗಲಿಲ್ಲ ವೆಂಬುದು ಕೆಲವರಲ್ಲಿ ಅಸಮಾಧಾನವನ್ನುಂಟು ಮಾಡಿದೆ. ಆದರೆ ಕನ್ನಡ ಕಲಿಯಲು, ಕನ್ನಡ ಮಾಧ್ಯಮದಲ್ಲಿ ಅಭ್ಯಾಸ ಮಾಡಲು ವಿದ್ಯಾರ್ಥಿಗಳೇ ಮುಂದೆ ಬರುತ್ತಿಲ್ಲವೆಂಬುದು ಅಷ್ಟೇ ಸತ್ಯ. ಮೂರ್ತಿಯವರು ದೊಡ್ಡ ಸಿರಿವಂತರಲ್ಲ. ಆದರೆ ಅವರ ಮನಸ್ಸು ಶ್ರೀಮಂತಿಕೆ ಪಡೆದಿದೆ. ತಮ್ಮ ಕರ್ತೃತ್ವ ಶಕ್ತಿಯಿಂದ, ಪರಿಶ್ರಮದಿಂದ ಅಚಲ ನಿಷ್ಠೆಯಿಂದ ಮುಂಬಯಿಯಲ್ಲಿ ಕನ್ನಡದ ಸೇವೆ ಮಾಡುತ್ತಿದ್ದಾರೆ. ಅವರು ಇಲ್ಲಿಯ ಕನ್ನಡಿಗರ ಆಸ್ತಿ. ಕಳೆದ ನಾಲ್ಕು ದಶಕಗಳಿಂದ ಮುಂಬಯಿಯಲ್ಲಿ ಕನ್ನಡ ಸಂಘ ಸಂಸ್ಥೆಗಳನ್ನು ಕಟ್ಟಿ ಬೆಳೆಸಿ, ನಾಡಿನ, ಭಾಷೆಯ, ಸಂಸ್ಕೃತಿಯ ಅಲ್ಲದೆ ಧಾರ್ಮಿಕ ಜಾಗೃತಿಯನ್ನುಂಟು ಮಾಡುವಲ್ಲಿ ಮೂರ್ತಿಯವರು ಮುಂದಾಗಿದ್ದಾರೆ ಎಂದು ಹೇಳಬಹುದು. ✡



# ಲಾರ್ಡ್ ಜಾನ್ ಮೇನಾರ್ಡ್ ಕೀನ್ಸ್

## ಆರ್ಥಿಕ ಸಿದ್ಧಾಂತ ಕ್ಷೇತ್ರದ ಯುಗಪುರುಷ

**ಕೆ. ವೆಂಕಟರಾವ್**

ಮಾನವನ ಅಸ್ಥಿರ ಬದುಕು ಅಸಂಖ್ಯ ಬಯಕೆಗಳಿಂದ ಹೆಣೆಯಲ್ಪಟ್ಟಿದೆ. ಬಯಕೆಗಳು ಮಾನವನ ಜೀವನದ ಮೂಲಾಧಾರ. ತನ್ನ ಅಪಾರ ಬಯಕೆಗಳನ್ನು ಈಡೇರಿಸಿಕೊಳ್ಳುವ ಸಲುವಾಗಿ ಮಾನವ ಬದುಕಿನುದ್ದಕ್ಕೂ ತೀವ್ರವಾಗಿ ಹೆಣಗುತ್ತಾನೆ. ಈ ಬಯಕೆಗಳಿಗೆ ಮಿತಿ ಎಂಬುದಿಲ್ಲ. ಒಂದು ಬಯಕೆಯನ್ನು ಪೂರೈಸಿಕೊಂಡ ಕೂಡಲೇ ಇನ್ನೊಂದು ಬಯಕೆಯು ಧುತ್ತೆಂದು ನಿಂತು ತೃಪ್ತಿಗಾಗಿ ಯಾಚಿಸುತ್ತದೆ. ಇದಕ್ಕಾಗಿ ಮಾನವ ಯಾವುದಾದರೊಂದು ಉದ್ಯೋಗದಲ್ಲಿ ತೊಡಗಿ ಆದಾಯವನ್ನು ಗಳಿಸುತ್ತಾನೆ. ಒಂದರ ಹಿಂದೊಂದು ನುಗ್ಗಿಬರುವ ಬಯಕೆಗಳ ಮಹಾಪೂರಕ್ಕೆ ಅಣೆಕಟ್ಟನ್ನು ಕಟ್ಟಲು ಗಳಿಸಿದ ಆದಾಯದಲ್ಲಿ ಹಣವನ್ನು ಉಳಿತಾಯ ಮಾಡಲು ತೊಡಗುತ್ತಾನೆ. ಆದರೆ ಉಳಿತಾಯವು ವ್ಯಕ್ತಿಯ ಆದಾಯದ ಮೇಲೆ ನಿಂತಿದೆ. ಆದಾಯವು ಹೆಚ್ಚಿದಂತೆಲ್ಲಾ ಉಳಿತಾಯವೂ ಹೆಚ್ಚುತ್ತಾ ಹೋಗುತ್ತದೆ. ಆದರೆ ಹೆಚ್ಚು ಆದಾಯಗಳಿಸುವ ಪ್ರತಿ ವ್ಯಕ್ತಿಯೂ ಹಣವನ್ನು ಉಳಿತಾಯ ಮಾಡುತ್ತಾನೆಂದು ಹೇಳಲಾಗದು. ಮುಖ್ಯವಾಗಿ ವ್ಯಕ್ತಿಗೆ ಉಳಿತಾಯ ಮಾಡುವ ಮನಸ್ಸಿರಬೇಕು. ಉಳಿತಾಯದ ಹಣವನ್ನು ವ್ಯಕ್ತಿಯು ಬಂಡವಾಳದ ರೂಪದಲ್ಲಿ ಉದ್ದಿಮೆಗಳಲ್ಲಿ ತೊಡಗಿಸಬಹುದು. ಉಳಿತಾಯ ಹಾಗೂ ಬಂಡವಾಳಗಳಲ್ಲಿ ಸಮಾನತೆ ಇದ್ದರೆ ಒಳ್ಳೆಯದು. ಇಲ್ಲದಿದ್ದಲ್ಲಿ ಆರ್ಥಿಕ ಬಿಕ್ಕಟ್ಟು ತಲೆದೋರುವುದು. ಹೇಗೆಂದರೆ, ಉಳಿತಾಯಕ್ಕಿಂತಲೂ ಬಂಡವಾಳ ಕಡಿಮೆ ಇದ್ದರೆ ಜನರ ಆದಾಯ ಕಡಿಮೆಯಾಗುವುದು. ಇದರಿಂದ ಕೊಳ್ಳುವ ಶಕ್ತಿಯು ಕುಗ್ಗಿ ವಸ್ತುಗಳಿಗೆ ಬೇಡಿಕೆ ಕಡಿಮೆಯಾಗಿ ಬೆಲೆಗಳ ಮಟ್ಟ ಇಳಿಯುವುದು. ಇದರಿಂದಾಗಿ ಉತ್ಪಾದಕರು ಕಡಿಮೆ ವಸ್ತುಗಳನ್ನು ಉತ್ಪಾದಿಸುವರು. ತತ್ಫಲವಾಗಿ ನಿರುದ್ಯೋಗವು ಕಂಡುಬಂದು, ಆರ್ಥಿಕ ಮುಗ್ಗಟ್ಟು ಬಲಗೊಂಡು, ಜನರು ಬದುಕಿನಲ್ಲಿ ಸವಿಯನ್ನು ಕಳೆದುಕೊಂಡು ನಿರಾಶಾವಾದಿಗಳಾಗುವರು. ಉಳಿತಾಯಕ್ಕಿಂತಲೂ ಬಂಡವಾಳ ಹೆಚ್ಚಿದ್ದರೆ ಅಧಿಕ ಹಣಕ್ಕಾಗಿ ಉದ್ದಿಮೆದಾರರು ಬ್ಯಾಂಕಿನ ಮೊರೆ ಹೋಗಬೇಕಾಗುತ್ತದೆ. ಬ್ಯಾಂಕಿನಿಂದ

ಹೆಚ್ಚು ಸಾಲವನ್ನು ಪಡೆದು ಉದ್ದಿಮೆಗಳಲ್ಲಿ ತೊಡಗಿಸುವುದರಿಂದ ಉತ್ಪಾದನೆಗಳು ಹೆಚ್ಚುತ್ತವೆ. ಇದರಿಂದ ಜನರ ಕೊಳ್ಳುವ ಶಕ್ತಿ ಹೆಚ್ಚಿ ವಸ್ತುಗಳಿಗೆ ಬೇಡಿಕೆ ಏರುತ್ತದೆ. ಅಲ್ಲದೆ, ಉತ್ಪಾದಕರು ಹೆಚ್ಚು ಲಾಭ ಪಡೆಯುವ ಆಸೆಯಿಂದ ಅಧಿಕ ವಸ್ತುಗಳನ್ನು ಉತ್ಪಾದಿಸುತ್ತಾರೆ. ಪರಿಣಾಮವಾಗಿ ಬೆಲೆಗಳು ಗಗನಕ್ಕೇರಿ ಸಾಮಾನ್ಯ ಜನರು ವಿಪರೀತ ತೊಂದರೆಗೆ ಒಳಗಾಗುತ್ತಾರೆ. ಇದರೊಂದಿಗೆ ನಿರುದ್ಯೋಗ ಅರೆ ಉದ್ಯೋಗಗಳೂ ತಲೆ ಎತ್ತುತ್ತವೆ. ಇಂದು ನಾವು ಇದೇ ಪರಿಸ್ಥಿತಿಯನ್ನು ಎದುರಿಸುತ್ತಿದ್ದೇವೆ. ಆದರೆ ಬಹಳ ವರ್ಷಗಳ ಹಿಂದೆಯೇ ಈ ವಾಸ್ತವಿಕ ಸ್ಥಿತಿಯನ್ನು ಒಬ್ಬ ಧೀಮಂತ ಅರ್ಥಶಾಸ್ತ್ರಜ್ಞನು ಮನಗಂಡಿದ್ದನು. ಇಷ್ಟರಿಂದಲೇ ಅವನು ಯಾರೆಂದು ತಿಳಿಯುವುದಿಲ್ಲ. ಅವನೊಬ್ಬ ಬ್ರಿಟಿಶ್ ಅರ್ಥಶಾಸ್ತ್ರಜ್ಞ, ಹಣಕಾಸು ವ್ಯವಹಾರ ತಜ್ಞ, ವಿಮರ್ಶಕ, ಗ್ರಂಥಪ್ರಿಯ, ರಾಜಕೀಯ ಲೇಖನಗಳ ನಿಪುಣ ಬರಹಗಾರ, ಕಲಾ ಪೋಷಕ, ಎಲ್ಲಕ್ಕೂ ಮಿಗಿಲಾಗಿ ಅರ್ಥಶಾಸ್ತ್ರ ಚಿಂತನೆಯ ಬಗ್ಗೆ ಮಹಾಕ್ರಾಂತಿಯನ್ನು ಎಬ್ಬಿಸಿ, ಆರ್ಥಿಕ ಸಿದ್ಧಾಂತ ಕ್ಷೇತ್ರದ ದಿಗ್ಗಜ ಎನಿಸಿಕೊಂಡಿರುವ ಧೀಮಂತ ಕ್ರಾಂತಿಕಾರಿ. ಆ ವ್ಯಕ್ತಿಯೇ ಜಾನ್ ಮೇನಾರ್ಡ್ ಕೀನ್ಸ್. ಇಂದು ಇವನ ಹೆಸರನ್ನು ಕೇಳದವರು ವಿರಳ.

೧೮೮೩ರ ಜೂನ್ ೫ರಂದು ಕೇಂಬ್ರಿಜ್ಜಿನಲ್ಲಿ ಕೀನ್ಸ್‌ನ ಜನ್ಮವಾಯಿತು. ಇವನ ತಂದೆ ಅಂದಿನ ಪ್ರಸಿದ್ಧ ಅರ್ಥಶಾಸ್ತ್ರಜ್ಞನೂ ತರ್ಕಶಾಸ್ತ್ರಜ್ಞನೂ ಆಗಿದ್ದ ಜಾನ್ ನೆವಿಲ್ ಕೀನ್ಸ್. ೧೯೧೦ರಿಂದ ೧೯೨೫ರ ವರೆಗೆ ಈತ ಕೇಂಬ್ರಿಜ್ ವಿಶ್ವವಿದ್ಯಾನಿಲಯದ ಕುಲಸಚಿವನಾಗಿದ್ದ. ಕೀನ್ಸ್‌ನ ತಾಯಿಯೂ ಪದವೀಧರೆ. ಕೇಂಬ್ರಿಜ್ಜಿನ ನಗರಾಧ್ಯಕ್ಷೆಯೂ ಆಗಿದ್ದಳು. ಫ್ಲಾರೆನ್ಸ್ ಆಡ್ ಕೀನ್ಸ್ ಎಂದು ಆಕೆಯ ಹೆಸರು. ಕೀನ್ಸ್‌ನ ಮನೆತನ ಬುದ್ಧಿವಂತಿಕೆಗೆ ಹೆಸರುವಾಸಿಯಾಗಿತ್ತು. ಇಂತಹ ಸುಸಂಸ್ಕೃತ ಮನೆತನದಲ್ಲಿ ಹುಟ್ಟಿದ ಕೀನ್ಸ್ ತನ್ನ ಜೀವಮಾನದಲ್ಲಿ ಸಾಧಿಸಿದ ರೋಮಾಂಚಕಾರಿ ಸಾಧನೆಯು ಅಸಹಜವೇನಲ್ಲ.

ಚಿಕ್ಕಂದಿನಲ್ಲಿ ಈಟನ್ ಶಾಲೆಯಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿದ ಕೀನ್ಸ್ ೧೯೦೨ರಲ್ಲಿ ಕೇಂಬ್ರಿಜ್ಜಿನ ಕಿಂಗ್ ಕಾಲೇಜಿಗೆ ಸೇರಿ ಅಲ್ಲಿ ಪ್ರಸಿದ್ಧ ಅರ್ಥಶಾಸ್ತ್ರಜ್ಞನಾಗಿದ್ದ ಆಲ್‌ಫ್ರೆಡ್ ಮಾರ್ಷಲನ ಪಟ್ಟ ಶಿಷ್ಯ ಎನಿಸಿಕೊಂಡ. ಅವನು ತನ್ನ ಬುದ್ಧಿಯನ್ನು ಕೇವಲ ಅರ್ಥಶಾಸ್ತ್ರಕ್ಕಷ್ಟೆ ಮೊಟಕುಗೊಳಿಸದೆ ಗಣಿತಶಾಸ್ತ್ರ, ರಾಜಕೀಯ ಶಾಸ್ತ್ರ ಹಾಗೂ ತರ್ಕಶಾಸ್ತ್ರಗಳನ್ನೂ ಆಳವಾಗಿ ಅಭ್ಯಸಿಸಿದ. ಜ್ಞಾನದ ಬಗ್ಗೆ ಅವನದು ತೀರದ ದಾಹ, ಹಿಂಗದ ಹಸಿವು. ಆದರೆ ಅವನು ತನ್ನ ಆಸಕ್ತಿಯನ್ನು ಕೇವಲ ಅಧ್ಯಯನಕ್ಕಷ್ಟೇ ಮೀಸಲಾಗಿಟ್ಟುಕೊಂಡ ಪುಸ್ತಕದ ಹುಳುವಾಗಿರಲಿಲ್ಲ. ಅಧ್ಯಯನದ ಜೊತೆಯಲ್ಲೇ ಕೇಂಬ್ರಿಜ್ಜಿನ (ಗಣ್ಯ ವ್ಯಕ್ತಿಗಳ ಮಹಾನ್ ಸಂಘವಾಗಿದ್ದ) ಸಾಮಾಜಿಕ ಜೀವನದಲ್ಲಿ ಅಗ್ರಪಾತ್ರ ಹೊಂದಿದ್ದ 'ಬ್ಲೂಮ್ಸ್ ಬರಿ' ತಂಡದ ಸದಸ್ಯನಾಗಿ ಕಲಾಭಿರುಚಿಯನ್ನು ಬೆಳೆಸಿಕೊಂಡ. ಒಳ್ಳೆಯ ವಾಕ್‌ಸ್ಪರ್ಧಿಯೂ ಆಗಿದ್ದ ಅತ ಎಡ್ಮಂಡ್ ಬರ್ಕನ ರಾಜಕೀಯ ಸಿದ್ಧಾಂತಗಳ ಮೇಲೆ ಪ್ರಬಂಧವನ್ನು ಬರೆದು ಬಹುಮಾನ ಗಳಿಸಿದನು. ಒಳ್ಳೆಯ ಕ್ರೀಡಾಪಟುವಾಗಿರದಿದ್ದರೂ ಕೀನ್ಸ್ ಹಲವಾರು ಆಟಗಳಲ್ಲಿ ಆಸ್ಥೆ ವಹಿಸಿ ಭಾಗವಹಿಸುತ್ತಿದ್ದ. ಕ್ರಿಕೆಟ್ ಬಗ್ಗೆ ಅವನಿಗೆ ವಿಶೇಷ ಅಭಿರುಚಿ.

ಪದವೀಧರನಾದ ನಂತರ ಕೀನ್ಸ್ ಲಂಡನ್ನಿನಲ್ಲಿದ್ದ ಭಾರತದ ಕಚೇರಿಯಲ್ಲಿ ಎರಡು ವರ್ಷಗಳ ಕಾಲ ದುಡಿದ. ನಂತರ ೧೯೦೮ರಲ್ಲಿ ತಾನು ಓದಿದ ಕಾಲೇಜಿನಲ್ಲೇ ಅರ್ಥಶಾಸ್ತ್ರದ ಅಧ್ಯಾಪಕನಾದ. ಆಲ್‌ಫ್ರೆಡ್ ಮಾರ್ಷಲ್ಲರು ತಮ್ಮ ಈ ನೆಚ್ಚಿನ ಶಿಷ್ಯನ ಬುದ್ಧಿವಂತಿಕೆಯನ್ನು ಎಷ್ಟು ಮೆಚ್ಚಿಕೊಂಡಿದ್ದರೆಂದರೆ ಈ ಅವಧಿಯಲ್ಲಿ ಅವರು ತಮ್ಮ ಸ್ವಂತ ಹಣದಲ್ಲಿ ಕೀನ್ಸ್‌ನಿಗೆ ಪ್ರತಿ ತಿಂಗಳೂ ೧೦೦ ಪೌಂಡ್ ವೇತನವನ್ನು ಕೊಡುತ್ತಿದ್ದರು. ಅವರೇ ಪ್ರಾರಂಭಿಸಿದ್ದ 'ಇಕನಾಮಿಕ್ ಜರ್ನಲ್' ಎಂಬ ಪ್ರಸಿದ್ಧ ನಿಯತಕಾಲಿಕ ಪತ್ರಿಕೆಯ ಸಂಪಾದಕತ್ವವನ್ನು ೧೯೧೧ರಲ್ಲಿ ವಹಿಸಿಕೊಂಡ ಕೀನ್ಸ್ ತಾನು ಮರಣ ಹೊಂದುವ ತನಕವೂ ಸುಮಾರು ೩೫ ವರ್ಷ

ಗಳ ಕಾಲ ಅದನ್ನು ನಡೆಸಿಕೊಂಡು ಬಂದರು. ಅವನು ತನ್ನ ಗುರುವಿಗೆ ಸಲ್ಲಿಸಿದ ಈ ನಿಷ್ಠ ಸೇವೆ ನಿಜಕ್ಕೂ ಅಮೋಘ.

ಈ ಸಮಯದಲ್ಲೇ ಕೀನ್ಸ್ ರಾಯಲ್ ಇಕನಾಮಿಕ್ ಸೊಸೈಟಿಯ ಕಾರ್ಯದರ್ಶಿಯೂ ಆದ. ೧೯೧೩ರಲ್ಲಿ ಸರಕಾರವು ಅವನನ್ನು ಭಾರತದ ಹಣಕಾಸು ಹಾಗೂ ಆರ್ಥಿಕ ಸ್ಥಿತಿಗತಿಯ ವಿಚಾರಣಾ ಸಮಿತಿಯ ಸದಸ್ಯನನ್ನಾಗಿ ನೇಮಿಸಿತು. ಅದೇ ವರ್ಷವೇ ಕೀನ್ಸ್ ತನ್ನ ಪ್ರಥಮ ಗ್ರಂಥ 'ಇಂಡಿಯನ್ ಕರೆನ್ಸಿ ಅಂಡ್ ಫಿನಾನ್ಸ್'ಅನ್ನು ಪ್ರಕಟಿಸಿದ. ಕೀನ್ಸ್ ಈ ಗ್ರಂಥದಲ್ಲಿ ಆರ್ಥಿಕ ಸಿದ್ಧಾಂತದ ಹಿನ್ನೆಲೆಯಲ್ಲಿ ರೂಪಾಯಿಯ ಬೆಲೆಯು ಯಾವ ಸಮಸ್ಯೆಯ ರೂಪವನ್ನು ತಾಳುತ್ತದೆ ಎಂಬುದನ್ನು ಸೂಕ್ಷ್ಮವಾಗಿ ತಿಳಿಸಿದ್ದಾನೆ. ಸ್ವರ್ಣ ವಿನಿಮಯ ಪ್ರಮಿತಿಯ ಬಗ್ಗೆ ಈ ಗ್ರಂಥವು ಬಹಳ ಮುಖ್ಯವಾದ ಆಧಾರವಾಗಿದೆ.

ಒಂದನೆಯ ಮಹಾಯುದ್ಧದ ಕಾಲದಲ್ಲಿ ಬ್ರಿಟಿಶ್ ಸರಕಾರದ ಅರ್ಥ ಶಾಖೆಯಲ್ಲಿ ಸೇವೆಯನ್ನು ಸಲ್ಲಿಸಲು ಕೀನ್ಸ್‌ನನ್ನು ಆಮಂತ್ರಿಸಲಾಯಿತು. ಅಲ್ಲಿ ವಿದೇಶೀ ಹಣವನ್ನು ಕುರಿತು ಇವನು ಚಿಂತನೆ ನಡೆಸಬೇಕಾಗಿತ್ತು. ೧೯೧೯ರಲ್ಲಿ ಯುದ್ಧ ಮುಕ್ತಾಯದ ಶಾಂತಿ ಸಮ್ಮೇಳನದಲ್ಲೂ ಕೀನ್ಸ್ ಭಾಗವಹಿಸಿದ್ದ. ಯುದ್ಧ ಪರಿಹಾರದ ಹಣದ ಇತ್ಯರ್ಥವೂ ಈ ಸಮ್ಮೇಳನದ ಒಂದು ಮುಖ್ಯ ವಿಷಯವಾಗಿತ್ತು. ಈ ದಿಸೆಯಲ್ಲಿ ಕೀನ್ಸ್ ಜರ್ಮನಿಯ ಮೇಲೆ ವಿಧಿಸಬಹುದಾಗಿದ್ದ ಪರಿಹಾರ ಧನದ ಬಗ್ಗೆ ಸೂಚಿಸಿದ ಸಲಹೆಯನ್ನು ಸರಕಾರ ಒಪ್ಪಲಿಲ್ಲ. ಆದರೆ ಕೀನ್ಸ್ ಕಟ್ಟಾ ಅಭಿಮಾನಿ. ತನ್ನ ಮನಸ್ಸಾಕ್ಷಿಗೆ ವಿರುದ್ಧವಾಗಿ ಅವನು ಎಂದೂ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ನ್ಯಾಯಸಮ್ಮತವಾದ ತನ್ನ ಸೂಚನೆಗೆ ವಿರುದ್ಧವಾಗಿ ಸರಕಾರದ ನೀತಿಗೆ ತಲೆಬಾಗಲು ಒಪ್ಪದ ಅವನು ಸಮ್ಮೇಳನದ ಸದಸ್ಯತ್ವವನ್ನೇ ತ್ಯಜಿಸಿದ. ಅದೇ ವರ್ಷ ಶಾಂತಿ ಒಪ್ಪಂದದ ಕರಾರುಗಳು ಮತ್ತು ಅವುಗಳ ಪರಿಣಾಮಗಳ ಬಗ್ಗೆ ಅನೇಕ ಪ್ರಬಂಧಗಳನ್ನು ಪುಸ್ತಕಗಳನ್ನೂ ಬರೆದ. ಅವುಗಳಲ್ಲಿ 'ಇಕನಾಮಿಕ್ ಕಾನ್ಸಿಕ್ವೆನ್ಸಸ್ ಆಫ್ ದಿ ಪೀಸ್' ಎಂಬ ವಿಮರ್ಶಾತ್ಮಕ ಗ್ರಂಥ ಬಹಳ ಮುಖ್ಯವಾದುದು. ಇದು ಪ್ರಕಟಗೊಂಡ ಅಲ್ಪ ಅವಧಿಯಲ್ಲೇ ಜನರ ಗಮನವನ್ನು ತನ್ನೆಡೆಗೆ ಸೆಳೆದುಕೊಂಡಿತು. ಕೀನ್ಸ್‌ನ ವಾಸ್ತವಿಕ ದೃಷ್ಟಿ, ದೂರದರ್ಶಿತ್ವ, ಆಳವಾದ ಪ್ರತಿಭೆ, ಜ್ಞಾನಗಳಿಗೆ ಈ ಗ್ರಂಥ ಒಂದು ನಿದರ್ಶನ. ಜರ್ಮನಿಯು ತನ್ನ ಮೇಲೆ ವಿಧಿಸಲಾದ ಹೆಚ್ಚು ಮೊತ್ತದ ಯುದ್ಧ ಪರಿಹಾರಧನವನ್ನು ಹೊರಲು ಸಾಧ್ಯವಿಲ್ಲವೆಂಬ ಅಂಶವನ್ನು ತರ್ಕಬದ್ಧ ರೀತಿಯಲ್ಲಿ ಕೀನ್ಸ್ ಈ ಗ್ರಂಥದಲ್ಲಿ ವಿವೇಚಿಸಿದ್ದಾನೆ. ಮುಂದೆ ನಡೆದ ಹಲವಾರು ಘಟನೆಗಳು ಕೀನ್ಸ್‌ನ ಈ ತರ್ಕವು ಸರಿಯೆಂದು ತೋರಿಸಿಕೊಟ್ಟವು.

೧೯೨೧ರಲ್ಲಿ ಕೀನ್ಸ್ 'ಎ ಟ್ರೀಟಿಸ್ ಆನ್ ಪ್ರಾಬಬಿಲಿಟಿ' ಎಂಬ ಗ್ರಂಥವನ್ನೂ, ೧೯೨೨ರಲ್ಲಿ 'ಎ ರಿವಿಷನ್ ಆಫ್ ದಿ ಟ್ರೀಟಿ' ಎಂಬ ಗ್ರಂಥವನ್ನೂ ಪ್ರಕಟಿಸಿದ. ಮೊದಲನೆಯ ಗ್ರಂಥದಲ್ಲಿ ಕೀನ್ಸ್‌ನ ಅಸಾಧಾರಣ ಪಾಂಡಿತ್ಯ, ಬುದ್ಧಿಶಕ್ತಿಗಳು ಅಡಗಿದ್ದು, ಅವನ ಗಣಿತದ ಜ್ಞಾನ ಮತ್ತು ತರ್ಕಶಾಸ್ತ್ರದ ಜಾಣ್ಮೆಯನ್ನು ಇವು ಸಾರುತ್ತವೆ. ಎರಡನೆಯ ಗ್ರಂಥದಲ್ಲಿ ಕೀನ್ಸ್ ಅಂದಿನ ಆರ್ಥಿಕ ಸ್ಥಿತಿಯ ವಾಸ್ತವಿಕ ದೃಷ್ಟಿಯ ಮೇಲೆ ಬೆಳಕು ಚೆಲ್ಲಿದ್ದಾನೆ. ಹಣಕಾಸಿನ ವ್ಯವಸ್ಥೆಯ ಬಗ್ಗೆ ಕೀನ್ಸ್ ತನ್ನದೇ ಆದ ವಿಶಿಷ್ಟ ಪಾಂಡಿತ್ಯವನ್ನು ಪಡೆದಿದ್ದ. ಆರ್ಥಿಕ ತೊಂದರೆಗಳು ನಿವಾರಣೆಯಾಗಬೇಕಾದರೆ ಈ ದಿಸೆಯಲ್ಲೇ ಸರಕಾರ ಹೆಚ್ಚು ಕಾರ್ಯಮಗ್ನವಾಗಬೇಕು ಎಂದು ಅವನು ಹೇಳುತ್ತಿದ್ದ. 'ನೇಷನ್' ಎಂಬ ಪತ್ರಿಕೆಯಲ್ಲಿ ಅವನು ಈ ವಿಷಯವನ್ನು ಕುರಿತೇ ಅನೇಕ ಲೇಖನಗಳನ್ನು ಬರೆದ. ೧೯೨೩ರಲ್ಲಿ ಕೀನ್ಸ್‌ನ 'ಟ್ರಾಕ್ಟ್ ಆನ್ ಮಾನಿಟರಿ ರಿಫಾರ್ಮ್ಸ್' ಎಂಬ ಗ್ರಂಥ ಹೊರಬಂತು. ಈ ಗ್ರಂಥದ ಮುಖ್ಯಾಂಶಗಳೆಂದರೆ ಕೇಂಬ್ರಿಜ್ ಪಂಥದ ಹಣ ಸಿದ್ಧಾಂತದ ಸೃಷ್ಟಿ ನಿರೂಪಣೆ ಮತ್ತು ಹಣ ಪ್ರಮಿತಿಯ ಬಗ್ಗೆ ಹೊಸ ಧೋರಣೆಯ ನಿರೂಪಣೆ. ಈ ಗ್ರಂಥದಲ್ಲಿ ಕೀನ್ಸ್ ನಿಯಂತ್ರಿ

ಕರೆನ್ಸಿ ಪದ್ಧತಿ ಹಾಗೂ ಕೇಂದ್ರೀಯ ಬ್ಯಾಂಕಿಗ್ ನೀತಿಯ ಮಹತ್ವದ ಬಗ್ಗೆ ವಿವರಿಸಿದ್ದಾನೆ. ಸ್ವರ್ಣ ಪ್ರಮಿತಿಯ ಅನುಪಯುಕ್ತತೆಯ ಬಗ್ಗೆ ಈ ಗ್ರಂಥದಲ್ಲಿ ಕೇನ್ಸ್ ಪ್ರತಿಪಾದಿಸಿರುವುದನ್ನು ನೋಡಿದರೆ ಇತರ ಅರ್ಥಶಾಸ್ತ್ರಜ್ಞರು ಹತ್ತು ವರ್ಷಗಳ ನಂತರ ಗ್ರಹಿಸಿದ್ದನ್ನು ಅವನು ಆಗಲೇ ಮನಗಂಡಿದ್ದ ಎಂಬುದು ವ್ಯಕ್ತವಾಗುತ್ತದೆ. ಕೇನ್ಸ್‌ನ ಮುಂದಾಲೋಚನೆಯ ಆಳವಾದ ಶಕ್ತಿಗೆ ಇದಕ್ಕಿಂತಲೂ ಬೇರೆ ನಿದರ್ಶನ ಬೇಕಿಲ್ಲ.

೧೯೨೫ರಲ್ಲಿ ಕೇನ್ಸ್ ರಶಿಯದ ಪ್ರಸಿದ್ಧ ನರ್ತಕಿ ಲಿಡಿಯಾ ಲೋಪೋಕೋವ್ ಎಂಬುವಳನ್ನು ಕೈ ಹಿಡಿದ. ಇವರದು ಪ್ರೇಮವಿವಾಹ. ಇದರಿಂದಾಗಿ ಕೇನ್ಸ್‌ನ ವೈಯಕ್ತಿಕ ಜೀವನಕ್ಕೆ ಒಂದು ಮಹತ್ವದ ತಿರುವು ದೊರೆಯಿತೆಂದು ಹೇಳಬಹುದು.

ಲಿಡಿಯಾ ಪತಿಯ ಬಗ್ಗೆ ಒಲವು, ವಿಶ್ವಾಸಗಳನ್ನು ಹೊಂದಿದ್ದು, ಅವನ ಬೌದ್ಧಿಕ ಚಟುವಟಿಕೆಗಳಿಗೆ ಪೋಷಕಳಾದಳು.

೧೯೨೯ರಲ್ಲಿ ಕೇನ್ಸ್‌ನನ್ನು ಮ್ಯಾಕ್‌ಮಿಲನ್ ಕಮಿಟಿಯ ಸದಸ್ಯನನ್ನಾಗಿ ನೇಮಿಸಲಾಯಿತು. ೧೯೩೦ರಲ್ಲಿ 'ಟ್ರಿಟೀಸ್ ಆನ್ ಮನಿ' ಎಂಬ ಕೇನ್ಸ್‌ನ ಎರಡು ಸಂಪುಟಗಳ ಹೊತ್ತಿಗೆಯು ಪ್ರಕಟಗೊಂಡಿತು. ಈ ಬೃಹತ್ ಗ್ರಂಥದಲ್ಲಿ ಹಣದ ಏರಿಳಿತಗಳ ಹಿನ್ನೆಲೆಯಲ್ಲಿ ಉಳಿತಾಯ, ಹಣದ ಪೇಟೆಯ ಸಂಸ್ಥೆಗಳ ಸೂಕ್ಷ್ಮ ಪರಿಚಯ, ಬ್ಯಾಂಕುಗಳ ಪಾತ್ರ, ಯೋಜನೆಗಳ ಪ್ರಾಮುಖ್ಯ ಮುಂತಾದ ಹಲವಾರು ವಿಷಯಗಳು ಅಡಕವಾಗಿವೆ. ಈ ಗ್ರಂಥದಲ್ಲಿ ಕೇನ್ಸ್ ಹಣಕ್ಕೆ ಸಂಬಂಧಿಸಿದ ಅನೇಕ ಸಿದ್ಧಾಂತಗಳನ್ನು ವಾಸ್ತವಾಂಶಗಳ ಒರೆಗಲ್ಲಿಗೆ ಹಚ್ಚಿ ನೋಡಿದ್ದಾನೆ. ಇದೇ ಸಮಯದಲ್ಲಿ ಇಂಗ್ಲೆಂಡ್ ಪ್ರಪಂಚದ ಆರ್ಥಿಕ ಮುಗ್ಗಟ್ಟಿನಲ್ಲಿ ಸಿಕ್ಕಿಬಿದ್ದು ಸಂದಾಯ ಬಾಕಿಯ ಪರಿಸ್ಥಿತಿಯನ್ನು ಎದುರಿಸುತ್ತಿತ್ತು. ಈ ಸಂದರ್ಭದಲ್ಲಿ ಕೇನ್ಸ್ ಇಂಗ್ಲೆಂಡಿನ ಕಡೆಗೆ ವಿಶೇಷ ಗಮನ ನೀಡಿದ. ಸಮಸ್ಯೆಯ ಪರಿಹಾರಕ್ಕಾಗಿ ಇಂಗ್ಲೆಂಡ್ ಮುಕ್ತ ವ್ಯಾಪಾರ ನೀತಿಯನ್ನು ಬಿಟ್ಟು ರಕ್ಷಣಾ ವ್ಯಾಪಾರದ ನೀತಿಯನ್ನು ಕೈಗೊಳ್ಳುವುದು ಸೂಕ್ತ ಎಂದು ಹೇಳಿದ. ಸ್ವತಃ ಮುಕ್ತ ವ್ಯಾಪಾರ ನೀತಿಯ ಬೆಂಬಲಿಗನಾಗಿದ್ದ ಕೇನ್ಸ್ ಇಂಗ್ಲೆಂಡಿಗೆ ವಿರುದ್ಧ ಸಲಹೆಯನ್ನು ನೀಡಿದ್ದು ಆಶ್ಚರ್ಯವೇ. ಆದರೂ ಅಂದಿನ ಕಠಿಣ ಪರಿಸ್ಥಿತಿಯಲ್ಲಿ ಇಂಗ್ಲೆಂಡಿಗೆ ಅದು ಅವಶ್ಯವಾಗಿತ್ತು ಎನ್ನುವುದು ಅವನ ಅಭಿಪ್ರಾಯ. ಅಂದಿನ ಆರ್ಥಿಕ ಕ್ಷೋಭೆಯು ಕೇನ್ಸ್‌ನ ಮೇಲೆ ಮಹತ್ವದ ಪರಿಣಾಮವನ್ನುಂಟುಮಾಡಿತು. ಅದರ ಫಲವಾಗಿಯೇ ೧೯೩೩ರಲ್ಲಿ ಕೇನ್ಸ್‌ನ 'ದಿ ಮೀನ್ಸ್ ಟು ಪ್ರಾಸ್ಪರಿಟಿ' ಎಂಬ ಕಿರು ಪುಸ್ತಕ ಪ್ರಕಟಗೊಂಡಿತು. ಅದರಲ್ಲಿ ಸಾರ್ವಜನಿಕ ಕಾಮಗಾರಿ, ಸರಕಾರೀ ಪ್ರವೇಶ, ಬಂಡವಾಳ, ವಿತ್ತೀಯ ನೀತಿ ಇತ್ಯಾದಿಗಳ ಬಗ್ಗೆ ವಿಶೇಷ ಸೂಚನೆಗಳಿವೆ.

ಈ ಪುಸ್ತಕದ ಮೂಲಕ ಜಗದ್ವ್ಯಾಪಿ ಆರ್ಥಿಕ ಮುಗ್ಗಟ್ಟನ್ನು ತಡೆಗಟ್ಟಲು ಕೇನ್ಸ್ ಸಾರ್ವಜನಿಕ ಕಾರ್ಯಗಳಿಗೆ ಹಾಗೂ ಸರಕಾರದ ಪ್ರವೇಶಕ್ಕೆ ಬೆಂಬಲ ನೀಡಿದ. ಆರ್ಥಿಕ ಮುಗ್ಗಟ್ಟು ಮುಖ್ಯವಾಗಿ ಹಿಗ್ಗು ಕುಗ್ಗುಗಳಿಂದ ಸಂಭವಿಸುವುದರಿಂದ ಹೆಚ್ಚು ಹಣವನ್ನು ಸರಬರಾಜು ಮಾಡಲು ಅವನು ಸರಕಾರಕ್ಕೆ ಸಲಹೆಮಾಡಿದ. ಇದನ್ನು ಸರಕಾರ ಅಂಗೀಕರಿಸಿ, ಆರ್ಥಿಕ ಮುಗ್ಗಟ್ಟಿನಿಂದ ರಾಷ್ಟ್ರವನ್ನು ರಕ್ಷಿಸಿ, ಪ್ರಜಾಪ್ರಭುತ್ವದ ಬಗ್ಗೆ ಜನರಿಗೆ ಒಳ್ಳೆಯ ಭಾವನೆ ಮೂಡುವಂತೆ ಮಾಡಲು ಕೊರತೆ ಧನವಿನಿಯೋಗವನ್ನು ಕಾರ್ಯರೂಪಕ್ಕೆ ತಂದಿತು. ಆರ್ಥಿಕ ಮುಗ್ಗಟ್ಟಿನಿಂದಾಗಿ ನಿರುದ್ಯೋಗ ಮುಂತಾದ ಸಂಕಷ್ಟಗಳಿಂದ ಬೇಸತ್ತು ಪ್ರಜಾಪ್ರಭುತ್ವದ ಬಗ್ಗೆ ವಿಶ್ವಾಸವನ್ನು ಕಳೆದುಕೊಂಡಿದ್ದ ಜನರಿಗೆ ಕೇನ್ಸ್ ಒಬ್ಬ ಅವತಾರಪುರುಷನೆಂಬಂತೆ ಕಂಡುಬಂದ. ತತ್ಫಲವಾಗಿ ಸಾಮಾನ್ಯ ಪ್ರಜೆಯಿಂದ ಹಿಡಿದು ಪ್ರಸಿದ್ಧ ಅರ್ಥಶಾಸ್ತ್ರಜ್ಞನವರೆಗೆ ಎಲ್ಲರಿಂದಲೂ ಕೇನ್ಸ್‌ನ ಅಭಿಪ್ರಾಯಗಳಿಗೆ, ಮನ್ನಣೆ, ಸ್ವಾಗತಗಳು ದೊರೆಯಲಾರಂಭಿಸಿದವು. ಅದೇ ವರ್ಷವೇ ಪ್ರಕಟಗೊಂಡ ಅವನ 'ಎಸ್ಸೇಸ್ ಇನ್ ಬಯಾಗ್ರಫೀ' ಎಂಬ ಪುಸ್ತಕವು ಅವನಲ್ಲಿ ಅಡಕಗೊಂಡಿದ್ದ ಆಂಗ್ಲ ಸಾಹಿತ್ಯ ಪ್ರತಿಭೆಯನ್ನು ಎತ್ತಿ ತೋರಿಸಿ.

ಅವನ ಜನಪ್ರಿಯತೆಗೆ ಕಾರಣವಾಯಿತು.

ಕೀನ್ಸ್‌ನ ಕೊರತೆ ಧನವಿನಿಯೋಗವನ್ನು ಆಗಿನ ಅಮೇರಿಕದ ಅಧ್ಯಕ್ಷರಾಗಿದ್ದ ರೂಸ್‌ವೆಲ್ಟರೂ ಅಂಗೀಕರಿಸಿದರು. ಅಮೇರಿಕದ ನ್ಯೂ ಡೀಲ್ ಪಾಲಿಸಿಯಲ್ಲಿ ಕೀನ್ಸ್‌ನ ಸಾರ್ವಜನಿಕ ನೀತಿಯ ಆರ್ಥಿಕ ಸಲಹೆಗಳನ್ನು ಒಪ್ಪಿಕೊಂಡು ಅವರು ಅವುಗಳನ್ನು ಕಾರ್ಯರೂಪಕ್ಕೆ ತಂದುದೇ ಇದಕ್ಕೆ ಸಾಕ್ಷಿ. ಅಲ್ಲದೆ, ಅಮೇರಿಕದ ನ್ಯೂ ಡೀಲಿನಲ್ಲಿ ಇದಕ್ಕೆ ಸಂಬಂಧಿಸಿದಂತೆ ಕೀನ್ಸ್‌ನ ಅನೇಕ ಸಿದ್ಧಾಂತಗಳಿಗೆ ಎಡೆಮಾಡಿಕೊಟ್ಟಿರುವುದು ಇದನ್ನು ಬಲಪಡಿಸುತ್ತದೆ. ಕೀನ್ಸ್ ೧೯೩೪ರ ಜೂನ್ ತಿಂಗಳಲ್ಲಿ ರೂಸವೆಲ್ಟರನ್ನು ಭೇಟಿ ಮಾಡಿ ತನ್ನ ವಿಚಾರಸರಣಿಯನ್ನು ಮಂಡಿಸಿದ್ದ. ಅವನ ಸಿದ್ಧಾಂತಗಳಿಗೂ ರೂಸ್‌ವೆಲ್ಟರ ಆಡಳಿತಕ್ಕೂ ವಿಶ್ವಾಸದ ಸಂಬಂಧವಿದ್ದುದು ಕಂಡುಬಂದಿದೆ. ಅವನ ಸಿದ್ಧಾಂತಗಳು ಅಮೇರಿಕದ ನೀತಿಯಲ್ಲಿ ಮಹತ್ತರ ಪ್ರಭಾವವನ್ನು ಬೀರಿ ಹಲವಾರು ಬದಲಾವಣೆಗಳನ್ನು ತಂದುವು. ಕೀನ್ಸ್‌ನ ಬಗ್ಗೆ ರೂಸ್‌ವೆಲ್ಟ್ ಬಹಳ ಅಭಿಮಾನವನ್ನು ಹೊಂದಿದ್ದರು. "ಕೀನ್ಸ್ ಒಬ್ಬ ರಾಜಕೀಯ ಅರ್ಥಶಾಸ್ತ್ರಜ್ಞನಿಗಿಂತಲೂ ಮೇಧಾವಿ ಗಣಿತ ಶಾಸ್ತ್ರಜ್ಞನಾಗಿದ್ದರೆ ಒಳಿತಿತ್ತು" ಎಂದು ಅವರು ಒಂದೆಡೆ ಸಾಂದರ್ಭಿಕವಾಗಿ ಹೇಳಿದ್ದಾರೆ. ಒಂದು ರಾಷ್ಟ್ರದ ನೀತಿ ರೀತಿಗಳನ್ನೇ ಬದಲಾಯಿಸುವಷ್ಟು ಪ್ರಭಾವ ಸಾಮರ್ಥ್ಯಗಳನ್ನು ಹೊಂದಿದ್ದ ಕೀನ್ಸ್‌ನಂತೆ ರೋಮಾಂಚಕಾರಿ ಸಾಧನೆಯ ಬದುಕನ್ನು ನಡೆಸಿದವರು ಅತಿ ವಿರಳವೆಂದು ಹೇಳಬಹುದು. ಕೀನ್ಸ್ ಒಬ್ಬ ವ್ಯಕ್ತಿಯಲ್ಲ, ಹಲವಾರು ಕ್ಷೇತ್ರಗಳ ಸಂಗಮ. ಅವನು ಸರಕಾರಿ ಸೇವಕ, ಸಂಪಾದಕ ಹಾಗೂ ಕಾರ್ಯದರ್ಶಿಯಾಗಿ ದುಡಿದರೂ ಎಲ್ಲಾ ಸಮಯದಲ್ಲೂ ಅರ್ಥಶಾಸ್ತ್ರಜ್ಞನೇ ಆಗಿರುತ್ತಿದ್ದ. ಅರ್ಥಶಾಸ್ತ್ರ ಅಥವಾ ಆರ್ಥಿಕ ಸಮಸ್ಯೆಗಳ ಬಗ್ಗೆಯೇ ತನ್ನ ಚಿಂತನೆಯನ್ನು ಹರಿಸುತ್ತಿದ್ದ. ಅವನು ಕೇವಲ ಅರ್ಥಶಾಸ್ತ್ರಜ್ಞನಷ್ಟೇ ಅಲ್ಲ, ಚಾಣಾಕ್ಷ ರಾಜಕಾರಣಿಯೂ ಹೌದು. ಸರಕಾರದ ನಾನಾ ರಂಗಗಳಲ್ಲಿನ ಜವಾಬ್ದಾರಿಯುತ ಸ್ಥಾನಗಳಲ್ಲಿ ಕೀನ್ಸ್‌ನ ಕುಶಲ ನಿರ್ವಹಣೆಯೇ ಇದಕ್ಕೆ ಸಾಕ್ಷಿ.

ಕೀನ್ಸ್‌ನಿಗೆ ಸರಕಾರದ ಆಡಳಿತ ನೀತಿಯನ್ನು ರೂಪಿಸುವಲ್ಲಿ ವಿಶಿಷ್ಟ ಆಸಕ್ತಿ ಇದ್ದಿತು. ದ್ವಿತೀಯ ಮಹಾಯುದ್ಧದ ಕಾಲದಲ್ಲಿ ಬ್ರಿಟಿಶ್ ಸರಕಾರ ಅವನನ್ನು ಆರ್ಥಿಕ ಸಲಹೆಗಾರನನ್ನಾಗಿ ನೇಮಿಸಿತ್ತು. ಏರುತ್ತಿರುವ ಬೆಲೆಗಳನ್ನು ತಡೆಗಟ್ಟಬೇಕಾದರೆ ಕಡ್ಡಾಯ ಉಳಿತಾಯವನ್ನು ಕಾರ್ಯರೂಪಕ್ಕೆ ತರಬೇಕೆನ್ನುವುದು ಕೀನ್ಸ್‌ನ ವಾದ. ಮುಖ್ಯವಾಗಿ ಅವನು ಬಡ್ಡಿಯ ದರಕ್ಕೆ ಹೆಚ್ಚಿನ ಮಹತ್ವವನ್ನು ಕೊಟ್ಟ. ಹಾಗಾಗಿ ಉಳಿತಾಯದಿಂದ ಅನೇಕ ದುಷ್ಪರಿಣಾಮಗಳು ಉಂಟಾಗುತ್ತವೆ ಎಂಬುದು ಕೀನ್ಸ್‌ನ ಅಭಿಪ್ರಾಯ. ಆದ್ದರಿಂದ ಕಡ್ಡಾಯ ಉಳಿತಾಯವನ್ನು ಜಾರಿಗೆ ತಂದರೆ ಜನರ ಕೊಳ್ಳುವ ಶಕ್ತಿಯು ಕುಗ್ಗಿ ವಸ್ತುಗಳ ಬೆಲೆಗಳು ಇಳಿಯಲಾರಂಭಿಸುತ್ತವೆ ಎಂದು ಆತ ಅಭಿಪ್ರಾಯ ಪಟ್ಟ. ವಿನ್‌ಸ್ಟನ್ ಚರ್ಚಿಲ್ ಮುಂತಾದವರು ಹಣದುಬ್ಬರವನ್ನು ತಡೆಗಟ್ಟಲು ಸ್ವರ್ಣಪ್ರಮಿತಿಯನ್ನು ಮತ್ತೊಮ್ಮೆ ಜಾರಿಗೊಳಿಸಬೇಕೆಂದು ಹೇಳಿದರೆ ಕೀನ್ಸ್ ಇದರ ವಿರುದ್ಧವಾಗಿ ತನ್ನ ಅಭಿಪ್ರಾಯಗಳನ್ನು ಮಂಡಿಸಿದ. ಈ ಅನುಭವಗಳ ಆಧಾರದ ಮೇಲೆ, ಕೀನ್ಸ್‌ನ ಪರಿಪಕ್ವಗೊಂಡ ಬುದ್ಧಿಶಕ್ತಿಯ ಫಲವಾಗಿ ೧೯೩೬ರಲ್ಲಿ ಒಂದು ಬೃಹತ್ ಗ್ರಂಥವು ಅವನ ಕುಶಲ ಹಸ್ತದಲ್ಲಿ ರೂಪುಗೊಂಡಿತು. ಅದೇ 'ಜನರಲ್ ಥಿಯರಿ ಆಫ್ ಎಂಪ್ಲಾಯ್‌ಮೆಂಟ್, ಇಂಟರೆಸ್ಟ್ ಅಂಡ್ ಮನಿ.' ಈ ಗ್ರಂಥವು ಆರ್ಥಿಕ ಚಿಂತನೆಯಲ್ಲಿ ಕ್ರಾಂತಿಕಾರಿ ಬದಲಾವಣೆಗಳನ್ನುಂಟು ಮಾಡಿ ಅರ್ಥಶಾಸ್ತ್ರ ಪ್ರಪಂಚದಲ್ಲಿ ಬಿರುಗಾಳಿ ಎಬ್ಬಿಸಿತು, ಕೀನ್ಸ್‌ನಿಗೆ ಅಷ್ಟೇ ಖ್ಯಾತಿಯನ್ನೂ ತಂದಿತು. ಈ ಗ್ರಂಥದ ಮೂಲಕ ಆರ್ಥಿಕ ಪ್ರಪಂಚದಲ್ಲಿ ಹೊಸ ವಿಚಾರಗಳ ಉದಯವಾಯಿತು. ಆಧುನಿಕ ಅರ್ಥಶಾಸ್ತ್ರದ ಮುನ್ನಡೆಗೆ ಈ ಗ್ರಂಥ ಕಾರಣವಾಯಿತಲ್ಲದೆ ಸಮಾಜಶಾಸ್ತ್ರ ಮತ್ತು ಮನಶ್ಶಾಸ್ತ್ರಗಳ ಅಧ್ಯಯನಗಳಿಗೂ ವಿಶೇಷ ಪ್ರಚೋದನೆಯನ್ನು ನೀಡಿತು. ಈ ಗ್ರಂಥದಿಂದಾಗಿ ಕೀನ್ಸ್ ಕ್ರಾಂತಿಕಾರಿ ಅರ್ಥ

ಶಾಸ್ತ್ರಜ್ಞನೆಂದು ಕರೆಸಿಕೊಳ್ಳುವಂತಾಯಿತು. ಆಲ್ಫ್ರೆಡ್ ಮಾರ್ಷಲ್, ಡೇವಿಡ್ ರಿಕಾರ್ಡೋ, ಜೆ. ಎಸ್. ಮಿಲ್, ಎ.ಸಿ. ಪಿಗು ಇವರನ್ನೆಲ್ಲಾ ಕೀನ್ಸ್ ಸಂಪ್ರದಾಯವಾದಿಗಳೆಂದು ಪರಿಗಣಿಸಿದ್ದ. ಪರಿಪೂರ್ಣ ಸ್ಪರ್ಧೆ ಇರುವ ಅರ್ಥವ್ಯವಸ್ಥೆಯಲ್ಲಿ ಪೂರ್ಣ ಉದ್ಯೋಗ ಇರುವುದು ಎಂಬ ಊಹೆಯ ಆಧಾರದ ಮೇಲೆ ಅರ್ಥಶಾಸ್ತ್ರಜ್ಞರು ತಮ್ಮ ವಿಚಾರಗಳನ್ನು ಮಂಡಿಸಿದ್ದರು. ಆದರೆ ಕೀನ್ಸ್ ಈ ಊಹೆ ನಿರಾಧಾರವಾದುದು ಎನ್ನುವುದನ್ನು ಮೇಲಿನ ಗ್ರಂಥದಲ್ಲಿ ತೋರಿಸಿದ್ದಾನೆ. ಅಲ್ಲದೆ ಪೂರ್ಣ ಉದ್ಯೋಗ ಸ್ಥಿತಿಯನ್ನು ಪಡೆಯಲು ಯಾವ ಯಾವ ಮಾರ್ಗಗಳನ್ನು ಅನುಸರಿಸಬಹುದೆಂಬ ಅಂಶಗಳನ್ನು ಸುಲಭ ರೀತಿಯಲ್ಲಿ ಹೇಳಿರುವುದಲ್ಲದೆ ಈ ಅಂಶಗಳಿಗೆ ಅಧಿಕ ಮಹತ್ವವನ್ನು ಕೊಟ್ಟಿದ್ದಾನೆ. ಪೂರ್ಣ ಉದ್ಯೋಗವನ್ನು ಕಲ್ಪಿಸಿಕೊಡುವುದು ಸರಕಾರದ ಮುಖ್ಯ ಗುರಿ. ಸರಕಾರದ ದ್ರವ್ಯನೀತಿಯ ಮುಖ್ಯ ಉದ್ದೇಶವೂ ಅದೇ ಆಗಿರಬೇಕೆಂಬುದು ಕೀನ್ಸ್‌ನ ಅಭಿಪ್ರಾಯ. ಇದಕ್ಕಾಗಿ ಸರಕಾರ ಲಭ್ಯವಿರುವ ಎಲ್ಲಾ ಸಂಪನ್ಮೂಲಗಳನ್ನು ಯೋಗ್ಯ ರೀತಿಯಲ್ಲಿ ಬಳಸಬೇಕು ಎಂದು ಅವನು ಹೇಳುತ್ತಾನೆ. ಒಟ್ಟಿನಲ್ಲಿ ಪೂರ್ಣ ಉದ್ಯೋಗ ಮತ್ತು ಅದರ ಸ್ಥಿರತೆಯ ಸ್ಥಾಪನೆಗೆ ಆರ್ಥಿಕ ರಂಗದಲ್ಲಿ ಒಂದು ನಿರ್ದಿಷ್ಟ ಸ್ವರೂಪದ ಸರಕಾರ ಇರಬೇಕು ಎನ್ನುವುದು ಕೀನ್ಸ್‌ನ ವಾದ. ಮೇಲಿನ ಗ್ರಂಥದಲ್ಲಿ ಕೀನ್ಸ್ ಈ ಅಂಶವನ್ನು ಎತ್ತಿ ಹಿಡಿದಿದ್ದಾನೆ. ಅವನ ಪ್ರಕಾರ ವ್ಯಕ್ತಿಗತ ಆರ್ಥಿಕ ಸ್ವಾತಂತ್ರ್ಯ ಪದ್ಧತಿಯೇ ಎಲ್ಲಕ್ಕಿಂತಲೂ ಮಿಗಿಲಾದ ಪದ್ಧತಿ, ಮತ್ತು ಅದರಲ್ಲಿನ ಕುಂದುಕೊರತೆಗಳನ್ನು ಹೋಗಲಾಡಿಸುವುದೇ ಸರಕಾರದ ಪರಮ ಕರ್ತವ್ಯ. ಕೀನ್ಸ್‌ನ ಈ ಗ್ರಂಥವು ಮುಗ್ಗಟ್ಟಿನ ಅರ್ಥಶಾಸ್ತ್ರವೆಂದು ಕೆಲವರ ಟೀಕೆಗೆ ಗುರಿಯಾದರೂ ಆರ್ಥಿಕ ವ್ಯವಸ್ಥೆಯ ಭವಿಷ್ಯದ ಬಗ್ಗೆ ವಾಸ್ತವವಾದ ಒಂದು ಭವ್ಯ ಚಿತ್ರಣ ಇದರಲ್ಲಿ ಇರುವುದಂತೂ ನಿಜ.

ಉದ್ಯೋಗದ ಜೊತೆಗೆ ಆದಾಯವು ಕೀನ್ಸ್‌ನ ಅಧ್ಯಯನದ ಮುಖ್ಯ ವಿಷಯವಾಗಿತ್ತು. ಇವೆರಡರ ಮಟ್ಟಗಳನ್ನು ನಿರ್ಣಯ ಮಾಡುವ ಮುಖ್ಯ ಅಂಶಗಳು ಯಾವುವು ಎಂಬುದನ್ನು ಕೀನ್ಸ್ ತಿಳಿಯಪಡಿಸಿದ್ದಾನೆ. 'ಹಣ ಒಲವು' ಅಂದರೆ ಒಬ್ಬ ವ್ಯಕ್ತಿಗೆ ಹಣದ ಬಗ್ಗೆ ಇರುವ ಪ್ರೀತಿ, ಅಭಿಮಾನಗಳಿಗೆ ಕೀನ್ಸ್ ಹೆಚ್ಚಿನ ಪ್ರಾಮುಖ್ಯ ಕೊಟ್ಟು ಅವರೊಂದಿಗೆ ಇರುವ ತಾಯಿಯ ಮಹತ್ವವನ್ನು, ಅವಶ್ಯಕತೆಯನ್ನು ವಿವರಿಸಿದ್ದಾನೆ.

೧೯೪೪ರಲ್ಲಿ ನಡೆದ ಬ್ರಿಟನ್ ವುಡ್ಸ್ ಸಮ್ಮೇಳನದಲ್ಲಿ ಕೀನ್ಸ್ ಪ್ರಮುಖ ಪಾತ್ರ ವಹಿಸಿದ. ಹೃದ್ರೋಗಕ್ಕೀಡಾಗಿ ಜರ್ಜರಿತಗೊಂಡಿದ್ದ ಅವನು ನಿಶ್ಯಕ್ತಿ, ಆಯಾಸಗಳಿದ್ದರೂ ಪತ್ನಿಯ ಸಹಾಯದಿಂದ ಸಮ್ಮೇಳನದಲ್ಲಿ ಭಾಗವಹಿಸಿ ಅವಳಿ ಸಂಸ್ಥೆಗಳಾದ 'ಇಂಟರ್‌ನ್ಯಾಷನಲ್ ಮಾನಿಟರಿ ಫಂಡ್' (IMF) ಮತ್ತು ವಿಶ್ವ ಬ್ಯಾಂಕುಗಳು ಕಾರ್ಯರೂಪಕ್ಕೆ ಬರುವಂತೆ ಮಾಡಿದ. ಇದಕ್ಕಾಗಿ ತಾನೇ ರಚಿಸಿದ ಯೋಜನೆಯನ್ನು ಒಳಗೊಂಡ ರೀತಿನೀತಿಗಳನ್ನು ಆ ಸಮ್ಮೇಳನದಲ್ಲಿ ಸಮರ್ಥನೀಯವಾಗಿ ಮಂಡಿಸಿದ. ಅರ್ಥಶಾಸ್ತ್ರದಲ್ಲಿ ಸಂಶೋಧನೆಗಳಿಗೆ ಕೀನ್ಸ್ ಹೆಚ್ಚಿನ ಉತ್ತೇಜನವನ್ನು ನೀಡಿದ. ಹಣದ ಮುಗ್ಗಟ್ಟನ್ನು ಎದುರಿಸಲು ಕೀನ್ಸ್ ಅರ್ಥಶಾಸ್ತ್ರಕ್ಕೆ ನೀಡಿರುವ ಕೊಡುಗೆಗಳ ವರ್ಣನೆಯನ್ನು ಮಾಡುವುದೂ ಈ ಲೇಖನದ ಅಳವಿಗೆ ಮೀರಿದ್ದು ಎನ್ನಬಹುದು. ಆಧುನಿಕ ಆರ್ಥಿಕ ನೀತಿ ಹಾಗೂ ಸಿದ್ಧಾಂತಗಳ ಮೇಲೆ ಕೀನ್ಸ್‌ನ ಅರ್ಥಶಾಸ್ತ್ರ ಮಹತ್ತರವಾದ ಪ್ರಭಾವ ಬೀರಿದೆ. ಆಧುನಿಕ ಅರ್ಥಶಾಸ್ತ್ರವು ಬಹಳ ಮಟ್ಟಿಗೆ ಕೀನ್ಸ್‌ನ ಅರ್ಥಶಾಸ್ತ್ರವೇ ಆಗಿದೆ. ಪೂರ್ಣ ಉದ್ಯೋಗದೊಂದಿಗೆ ಆರ್ಥಿಕ ಅಭಿವೃದ್ಧಿಯನ್ನು ಕುರಿತ ಇಂದಿನ ಚಿಂತನೆ ಹೆಚ್ಚಿನ ಪ್ರಮಾಣದಲ್ಲಿ ಕೀನ್ಸ್‌ನ ವಿವರಣೆಯನ್ನೇ ಆಧರಿಸಿದೆ ಎಂದು ಹೇಳಬಹುದು. ಅವನ ಸಿದ್ಧಾಂತಗಳು ಮೂರು ದಶಕಗಳಿಗಿಂತಲೂ ಹೆಚ್ಚು ಕಾಲದಿಂದ ಆರ್ಥಿಕ ವ್ಯವಸ್ಥೆಯನ್ನು ಆಳುತ್ತಿವೆ.

ಭಾರತ ಸರಕಾರದ ಆರ್ಥಿಕ ನೀತಿಗಳ ಮೇಲೆ ಕೀನ್ಸ್‌ನ ವಿಚಾರಗಳು ಮಹತ್ತರ ಪರಿಣಾಮವನ್ನುಂಟುಮಾಡಿವೆ. ನಿರುದ್ಯೋಗ ಕೂಡ ದೇಶದ [illegible] ಮಾಲೆಯನ್ನು ಪ್ರತಿಷ್ಠಿಸುತ್ತಿರುವ

ಇಂದಿನ ಕಾಲಮಾನಕ್ಕೆ ಕೀನ್ಸ್‌ನ ಆರ್ಥಿಕ ವಿಚಾರ ಸರಣಿ ಎಷ್ಟರ ಮಟ್ಟಿಗೆ ಪ್ರಸಕ್ತವಾಗಿದೆ ಎನ್ನುವುದನ್ನು ನಾವು ವಿವೇಚಿಸಿ ನೋಡಬೇಕಾಗಿದೆ. ನಿರುದ್ಯೋಗ ಸಮಸ್ಯೆಯನ್ನು ಹೊರದೂಡಲು ಕೀನ್ಸ್‌ನ ವಿಚಾರಗಳಿಗನುಗುಣವಾಗಿ ನಡೆಯಲು ಇಂದು ಭಾರತ ಸರಕಾರ ತೀವ್ರವಾಗಿ ಪ್ರಯತ್ನಿಸುತ್ತಿದೆ. ಇದಕ್ಕಾಗಿ ಲಭ್ಯವಿರುವ ಸಂಪನ್ಮೂಲಗಳನ್ನು ಸಂಪೂರ್ಣವಾಗಿ ಬಳಸಿಕೊಂಡು ಪ್ರಗತಿ ಹೊಂದಲು ಪಂಚವಾರ್ಷಿಕ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲಾಗಿದೆ. ಕೊರತೆ ಧನವನ್ನು ಬಳಸಲಾಗುತ್ತಿದೆ. ಆದರೆ ನಿರುದ್ಯೋಗ ಸಮಸ್ಯೆ ಮಾತ್ರ ಕಾಲು ಕೀಳದೆ ಹಿಂದೆ ಹೇಗಿತ್ತೋ ಹಾಗೆಯೇ ಉಳಿದಿದೆ. ಪೂರ್ಣ ಉದ್ಯೋಗ ಮಟ್ಟವನ್ನು ಹೊಂದುವುದರ ಬದಲು ಹಣದುಬ್ಬರದ ಪರಿಸ್ಥಿತಿಯನ್ನು ನಾವಿಂದು ಎದುರಿಸುತ್ತಿದ್ದೇವೆ. ಇದಕ್ಕೆ ಕಾರಣ ನಮ್ಮ ದೇಶ ಧಾರಾಳವಾದ ಶ್ರಮಶಕ್ತಿಯನ್ನು ಹೊಂದಿದ್ದು ಬಂಡವಾಳ ಶೂನ್ಯತೆಯಿಂದ ನರಳುತ್ತಿರುವ ಒಂದು ರಾಷ್ಟ್ರವಾಗಿದೆ. ಈ ಬಗೆಯ ಬಡ ರಾಷ್ಟ್ರಗಳಿಗೆ ಕೀನ್ಸ್‌ನ ವಿಚಾರ ಸರಣಿಯು ಅಷ್ಟಾಗಿ ಅನ್ವಯಿಸುವುದಿಲ್ಲ ಎಂದೇ ಹೇಳಬೇಕು. ಬಂಡವಾಳವು ಹೇರಳವಾಗಿದ್ದು, ಕಾರ್ಮಿಕ ಶಕ್ತಿ ಕಡಿಮೆ ಇರುವ ಹೊಟ್ಟೆ ತುಂಬಿದ ಶ್ರೀಮಂತ ರಾಷ್ಟ್ರಗಳಿಗೆ ಕೀನ್ಸ್ ವಿಚಾರಗಳು ಸರಿಹೊಂದಬಲ್ಲುವು.

ಹಾಗೆಯೇ ಕೀನ್ಸ್‌ನ ಕುರುಡು ಅನುಗಮನವು ಭಾರತದ ಅರ್ಥ ವ್ಯವಸ್ಥೆಯಲ್ಲಿ ತನ್ನ ಪ್ರಾಮುಖ್ಯವನ್ನು ಕಳೆದುಕೊಂಡಿದೆ. ಅವನ ಕುರುಡು ಅನುಗಮನದಿಂದಾಗಿ ಭಾರತದಂಥ ಬಡ ದೇಶಗಳು ಇಂದು ಆರ್ಥಿಕ ದುರ್ಗತಿಯನ್ನು ಅನುಭವಿಸುತ್ತಿವೆ. ಏಕೆಂದರೆ ಕೀನ್ಸ್‌ನ ವಿಚಾರಗಳು ಬಂಡವಾಳಶಾಹಿ ರಾಷ್ಟ್ರಗಳಲ್ಲಿ ಮಾತ್ರ ಕಾರ್ಯರೂಪಕ್ಕೆ ತರುವಂತಿವೆ. ಅಲ್ಲಿ ಜನರ ಜೀವನ ಮಟ್ಟ, ಉಳಿತಾಯ ಎಲ್ಲವೂ ಹೆಚ್ಚಿರುತ್ತದೆ. ಉದ್ದಿಮೆದಾರರು ಅಧಿಕ ಲಾಭ ಪಡೆಯುವ ಆಸೆಯಿಂದ ಅಧಿಕ ಬಂಡವಾಳವನ್ನು ಉದ್ದಿಮೆಗಳಲ್ಲಿ ತೊಡಗಿಸುವರು. ಆದರೆ ನಮ್ಮ ದೇಶದಂಥ ಅನಭಿವೃದ್ಧ, ಸಮಾಜವಾದಿ ರಾಷ್ಟ್ರಗಳಲ್ಲಿ ಆದಾಯ, ಜೀವನ ಮಟ್ಟ, ಉಳಿತಾಯ ಎಲ್ಲವೂ ಕಡಿಮೆ ಇದ್ದು ಒಂದು ರೀತಿಯ ವಿಷವರ್ತುಲ ಏರ್ಪಟ್ಟಿರುತ್ತದೆ. ಇದರಿಂದಾಗಿ ಅಸ್ವೈಚ್ಛಿಕ ನಿರುದ್ಯೋಗವು ತನಗೆ ತಾನೇ ಉದ್ಭವಿಸುತ್ತದೆ. ಅಲ್ಲದೆ ಜನಸಂಖ್ಯೆಯು ಹೆಚ್ಚುತ್ತಿದ್ದು ಉತ್ಪಾದನೆಯನ್ನು ಕುಂಠಿತಗೊಳಿಸಿರುವುದರಿಂದ ಉತ್ಪಾದನೆಯನ್ನು ಅಧಿಕಗೊಳಿಸಲು, ಅವುಗಳಿಗಾಗುವ ವೆಚ್ಚವನ್ನು ಸರಿದೂಗಿಸಲು ಕೊರತೆ ಧನವನ್ನು ಬಳಸಲಾಗುತ್ತಿದೆ. ಆದರೆ ಇದರಿಂದ ಉತ್ಪಾದನೆ ಅಧಿಕಗೊಳ್ಳುವುದಕ್ಕೆ ಬದಲು, ಅಧಿಕ ಹಣದ ಪೂರೈಕೆಗೆ ಎಡೆಯಾಗಿ, ಬೆಲೆಗಳು ಗಗನಕ್ಕೇರಿ, ಜನತೆ ಅಧೀರರಾಗುವಂತಾಗಿದೆ.

ಈ ರೀತಿ ಕೀನ್ಸ್‌ನ ವಿಚಾರಸರಣಿ ಎಷ್ಟೇ ಶಾಸ್ತ್ರವವಾಗಿದ್ದರೂ ಇಂದಿನ ಪರಿಸ್ಥಿತಿಯಲ್ಲಿ ಕೊರತೆ ಧನದಿಂದ ಉತ್ಪಾದನೆಯನ್ನು ಹೆಚ್ಚಿಸಿ, ನಿರುದ್ಯೋಗ ಸಮಸ್ಯೆಯನ್ನು ಬೇರು ಸಹಿತ ಕಿತ್ತು ಹಾಕುವುದು ಅಸಂಭವ. ಈ ದಿಸೆಯಲ್ಲಿ ಕೊರತೆ ಧನವು ಒಂದು ಮಾರಕವಾಗುವುದೇ ಹೊರತು ಪೋಷಕವಾಗಲಾರದು. ಅದಕ್ಕೆ ಬದಲು ಇರುವ ಸಾಧನ ಸಂಪತ್ತುಗಳನ್ನು, ಲಭ್ಯವಿರುವ ಬಂಡವಾಳದಿಂದ ಬಳಸಿಕೊಂಡು ಉತ್ಪಾದನೆಯನ್ನು ಹೆಚ್ಚಿಸಿ ಜೊತೆಗೆ ಬೆಳೆಯುತ್ತಿರುವ ಅತಿ ಜನಸಂಖ್ಯೆಗೆ ಕಡಿವಾಣ ಹಾಕಿದರೆ ಆರ್ಥಿಕ ಬಿಕ್ಕಟ್ಟನ್ನು ಸ್ವಲ್ಪ ಮಟ್ಟಿಗಾದರೂ ಪರಿಹರಿಸಿಕೊಳ್ಳುವುದು ಸಾಧ್ಯ. ಆದರೆ ಹಾಗೆಂದ ಮಾತ್ರಕ್ಕೆ ಕೀನ್ಸ್‌ನ ಸಿದ್ಧಾಂತಗಳು ಅಪ್ರಯೋಜಕ ಎಂದರ್ಥವಲ್ಲ. ಅಂದಿನ ಕಾಲಕ್ಕೆ ತಕ್ಕಂತೆ ಅವನ ಸುಧಾರಣೆಗಳು ರೂಪುಗೊಂಡವು. ಅಂದಿನ ಕಾಲಕ್ಕೂ ಇಂದಿನ ಕಾಲಕ್ಕೂ ಗಣನೀಯವಾದ ವ್ಯತ್ಯಾಸವಿದೆ. ಅಂದಿನ ಕಾಲದಲ್ಲಿ ಅಮೇರಿಕ, ಇಂಗ್ಲೆಂಡ್ ರಾಷ್ಟ್ರಗಳು ಅವನ ವಿಚಾರಗಳಿಗನುಗುಣವಾಗಿ ನಡೆದು ಪ್ರಗತಿ ಪಥದಲ್ಲಿ ಕಾಲಿಟ್ಟವು. ಅವನ ಸಿದ್ಧಾಂತಗಳು ಅಂದು ಜಗತ್ತಿನ ಆರ್ಥಿಕ ಚಿಂತನೆ ಮತ್ತು ಸರಕಾರಗಳ ಮೇಲೆ ಬಹಳ ಪರಿಣಾಮವನ್ನುಂಟುಮಾಡಿದುವು. ಅವನ ಆರ್ಥಿಕ ನೀತಿಗಳು ಬಂಡವಾಳಶಾಹಿ

ಪದ್ಧತಿಯಲ್ಲಿ ಕುಂದು ಬಂದ ರೋಗಗಳಿಗೆ ದಿವ್ಯ ಔಷಧಿಗಳಾದುವು. ಆದರೆ ಇಂದು ಭಾರತದಂಥ ಬಡ ಸಮಾಜವಾದಿ ರಾಷ್ಟ್ರಗಳು ಕೀನ್ಸನ ಸಿದ್ಧಾಂತಗಳಿಂದ ಹೆಚ್ಚಿನ ಮಟ್ಟದ ಪ್ರಯೋಜನವನ್ನು ಹೊಂದಲಾರವು.

ಕೀನ್ಸ್ ಕೇವಲ ತಾತ್ವಿಕ ಅರ್ಥಶಾಸ್ತ್ರಜ್ಞನಾಗಿರಲಿಲ್ಲ. ಅವನು ಒಬ್ಬ ಬಹುಮುಖ ಪ್ರತಿಭೆಯುಳ್ಳ ವ್ಯಕ್ತಿ. ಒಬ್ಬ ಉದ್ದಾಮ ಬರಹಗಾರ. ಜೊತೆಗೆ ಸಂಗೀತ, ಚಿತ್ರಕಲೆ, ನರ್ತನಗಳಲ್ಲಿ ಹೆಚ್ಚಿನ ಅಭಿರುಚಿಗಳನ್ನು ಹೊಂದಿದ್ದಾತ. ಅವನು ತನ್ನ ಜೀವನವಿಡಿ ತರ್ಕ–ಶಾಸ್ತ್ರಜ್ಞನಾಗಿ, ಪುಸ್ತಕಗಳ ಸಂಗ್ರಾಹಕನಾಗಿ, ಕಲೆಗಳ ಪ್ರಿಯನಾಗಿ, ಪತ್ರಿಕೋದ್ಯಮಿಯಾಗಿ ಹಾಗೂ ಮಹಾ ಮೇಧಾವಿ ಅರ್ಥಶಾಸ್ತ್ರಜ್ಞನಾಗಿ ಬಾಳಿದ. ಅವನ ಮನಸ್ಸು ಶಕ್ತಿಯುತ, ಪರಿವರ್ತನಶೀಲ ಮತ್ತು ಸಂಶೋಧನಾತ್ಮಕವಾಗಿತ್ತು. ಸಾಮಾನ್ಯವಾಗಿ ಜನಸಮೂಹದಲ್ಲಿ ಕಾಣಲಾರದಂಥ ಈ ಮೂರು ಗುಣಗಳು ಅವನಲ್ಲಿ ಸೇರಿದ್ದವು. ಅವನು ಕೇವಲ ಒಬ್ಬ ಶ್ರೀಸಾಮಾನ್ಯನಾಗಿರದೆ ಪ್ರತಿಕ್ರಿಯಾತ್ಮಕ ಪ್ರಜ್ಞಾಶೀಲನಾಗಿದ್ದ. ಹೊರ ಜಗತ್ತಿನ ಬದಲಾಗುತ್ತಿರುವ ಧೋರಣೆಗಳಿಗನುಸಾರವಾಗಿ ತನ್ನ ಸಿದ್ಧಾಂತಗಳನ್ನು ಮಾರ್ಪಡಿಸಿಕೊಳ್ಳುವ ಬುದ್ಧಿಶಕ್ತಿಯನ್ನು ಹೊಂದಿದ್ದ. ಅಮೇರಿಕೆ, ಇಂಗ್ಲೆಂಡ್ ಮತ್ತು ಪಾಶ್ಚಾತ್ಯ ಜಗತ್ತಿನ ಆರ್ಥಿಕ ವ್ಯವಸ್ಥೆಯ ಧೋರಣೆಯಲ್ಲಿ ಕೀನ್ಸ್‌ನ ನಿರ್ಗಮನದ ನಂತರದ ಅವಧಿಯಲ್ಲಿ ಒಂದು ಸುದೀರ್ಘವಾದ ನಾಟಕವೇ ನಡೆದಿದೆ. ಆ ನಾಟಕವೂ ವಿಶಿಷ್ಟ ವ್ಯಕ್ತಿಯಾದ ಕೀನ್ಸ್‌ನ ಜೀವನ ಮತ್ತು ಪ್ರಭಾವದ ಒಂದು ಭಾಗವಾಗಿದೆ. ಮೂಲತಃ ಕ್ರಾಂತಿಕಾರಿಯಾದ ಅವನು ಫ್ರಾಯ್ಡ್, ಮಾರ್ಕ್ಸ್‌ರಂತೆ ಪಾಶ್ಚಾತ್ಯ ಜಗತ್ತಿಗೆ ಅರ್ಥಶಾಸ್ತ್ರದ ಭಾಷೆಯನ್ನು ಪುನಾರಚಿಸಿ ಕೊಟ್ಟಿದ್ದಾನೆ. ಇಂತಹ ಉದಾತ್ತ ಧ್ಯೇಯ, ಚಾಣ್ಮೆಗಳಿಂದ ಕೂಡಿದ್ದ ಕೀನ್ಸ್ ೨೧–೪–೧೯೪೬ರಂದು ಪಿರ್ಲೆ ಎಂಬಲ್ಲಿ ಹೃದ್ರೋಗ ಪೀಡಿತನಾಗಿ ತನ್ನ ೬೨ನೇ ವಯಸ್ಸಿನಲ್ಲಿ ಮರಣ ಹೊಂದಿದ. ಅವನು ಮರಣ ಹೊಂದಿದಾಗ, ಬುದ್ಧಿವಂತಿಕೆಯಿಂದ ಘಟನೆಗಳನ್ನು ಅತಿ ಸುಲಭ ರೀತಿಯಲ್ಲಿ ಪರಿಹರಿಸುತ್ತಿದ್ದ ಒಬ್ಬ ಪ್ರಸಿದ್ಧ ಅರ್ಥಶಾಸ್ತ್ರಜ್ಞನನ್ನು ಕಳೆದುಕೊಂಡೆವೆಂದು ಇಂಗ್ಲೆಂಡ್ ಜನತೆ ಕಣ್ಣೀರಿಟ್ಟಿತು. ಆದರೆ ಆರ್ಥಿಕ ಸಿದ್ಧಾಂತ ಕ್ಷೇತ್ರದಲ್ಲಿ ಮಹಾಕ್ರಾಂತಿಯನ್ನುಂಟುಮಾಡಿದ ಈ ಉದ್ದಾಮ ವ್ಯಕ್ತಿಯ ಆಯುಷ್ಯವನ್ನು ಅವನ ಕೃತಿಯ ಒರೆಗಲ್ಲಿಗೆ ಒರೆ ಹಚ್ಚಿ ನೋಡಿದರೆ ಅದು ನಮ್ಮ ಕೈಗೆ ಎಟುಕದು. ಕೀನ್ಸ್ ಬರಿಯ ಪಾಂಡಿತ್ಯದಲ್ಲೇ ಅಲ್ಲ, ಬಂಡವಾಳ ಪೇಟೆಯಲ್ಲೂ ವ್ಯವಹಾರ ನಡೆಸಿ ಚೆನ್ನಾಗಿ ಹಣ ಸಂಪಾದಿಸಿ ಶ್ರೀಮಂತನಾಗಿದ್ದ. ಅವನು ತೀರಿಕೊಂಡಾಗ ಅವನ ಆಸ್ತಿಯು ನಾಲ್ಕೂವರೆ ಲಕ್ಷ ಪೌಂಡುಗಳಿಗೆ ಸಮನಾಗಿತ್ತು, ಎಂದು ತಿಳಿದು ಬಂದಿದೆ. ಅವನು ಜಗತ್ತಿನಿಂದ ಮರೆಯಾಗಿ ಅನೇಕ ವರ್ಷಗಳು ಕಳೆದರೂ, ಅವನ ನೀತಿಗಳು ಅಮೇರಿಕ, ಇಂಗ್ಲೆಂಡ್ ಹಾಗೂ ಉಳಿದ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಇಂದಿಗೂ ಕಾರ್ಯರೂಪದಲ್ಲಿವೆ. 'ಇಂದು ನಾವೆಲ್ಲರೂ ಕೀನ್ಸ್‌ರಾಗಿದ್ದೇವೆ.' ಎಂದು ಕೆಲವರು ಹೇಳುವುದು ರೂಢಿ. ಆರ್ಥಿಕ ಕ್ಷೇತ್ರದ ಪಂಡಿತ ಕೀನ್ಸನ ಹೆಸರು ಪ್ರಪಂಚದ ಇತಿಹಾಸದಲ್ಲಿ ಸದಾ ಹಸಿರಾಗಿರುತ್ತದೆ. ★



**ಜೀವನ ಒಂದು ರುಬ್ಬುಗುಂಡು ಇದ್ದ ಹಾಗೆ. ಅದು ನಿಮ್ಮನ್ನು ರುಬ್ಬಿ ಸಣ್ಣಾಗಿ ಮಾಡುತ್ತದೆಯೋ, ಅಥವಾ ಮೆರುಗು ಹೆಚ್ಚಿಸುತ್ತದೆಯೋ ಎಂಬುದನ್ನು ನಿಮ್ಮ ವ್ಯಕ್ತಿತ್ವವೇ ತೋರಿಸುತ್ತದೆ.**

— ಅನಾಮಿಕ

# ಕನ್ನಡ ಕಸ್ತೂರಿ

ಕನ್ನಡದ ನೆಲದ ಪುಲ್ಲೆನಗೆ ಪಾವನ ತುಲಸಿ, ಕನ್ನಡದ ನೆಲದ ನೀರ್ವೊನಲೆನಗೆ ದೇವನದಿ: ಕನ್ನಡದ ನೆಲದ ಕಲ್ಲೆನಗೆ ಸಾಲಿಗ್ರಾಮ ಶಿಲೆ. ಕನ್ನಡ ದೈವವಂ.

—ಸಾಲಿ ರಾಮಚಂದ್ರರಾಯರು

* * *

ಚಿನ್ನರನ್ನದ ಸೀಮೆಂ; ಮನ್ನಣೆಯ ಚಿರಭೂಮಿಂ; ಬನ್ನವಿಲ್ಲದ ಭೂಮಿ ನನ್ನ ಜನನದ ಭೂಮಿಂ ಕನ್ನಡ...

—ಪಂ. ಪುಟ್ಟರಾಜರು

* * *

ತನು ಕನ್ನಡ; ಮನ ಕನ್ನಡ: ದನ ಕನ್ನಡವೆಮ್ಮವು.

—ಗೋವಿಂದ ಪೈ.

* * *

ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು.

—ಹುಯಿಲಗೋಳ ನಾರಾಯಣರಾವ್

* * *

ತನ್ನ ಸಿರಿಯನು ತಾನು ಕನ್ನಡಿಯುಕಾಬುದೇ? ತನ್ನ ಸಿರಿಯರಿಪ್ಪ ಸಕ್ಕದಕೆ, ಕನ್ನಡವು ಕನ್ನಡಿಯು ತೆರನು.

—ಸರ್ವಜ್ಞ

* * *

ಕನ್ನಡಕ್ಕಾಗಿ ಕೈಯೆತ್ತು: ನಿನ್ನ ಕೈ ಕಲ್ಪವೃಕ್ಷವಾಗುತ್ತದೆ !
ಕನ್ನಡಕ್ಕಾಗಿ ಕೊರಳೆತ್ತು: ಅಲ್ಲಿ ಪಾಂಚಜನ್ಯ ಮೂಡುತ್ತದೆ !
ಕನ್ನಡಕ್ಕಾಗಿ ಕಿರುಬೆರಳೆತ್ತಿದರೂ ಸಾಕು
ಇಂದು ಅದೇ ಗೋವರ್ಧನಗಿರಿಧಾರಿಯಾಗುತ್ತದೆ!

—ಕುವೆಂಪು

ಸಂಗ್ರಹ :— ವಿಠ್ಠಲ ಆರ್. ಹಂಡಿ

# ಅಮೇರಿಕನ್ ಕಥೆ

ಮೂಲ: **ಎಡ್ಗರ್ ಅಲೆನ್ ಪೊ**

ಅನುವಾದ: **ಎಚ್. ಎಸ್. ಶ್ರೀಪಾದ ಭಟ್ಟ**

ಜಡತ್ವ – ನಿಷ್ಕ್ರಿಯತೆ – ನರದೌರ್ಬಲ್ಯ ಇವುಗಳಿಂದ ಈಗೀಗ ನಾನು ಭಯಂಕರವಾಗಿ ನರಳುತ್ತಿದ್ದೇನೆ. ಏಕೆಂದು ತಕ್ಷಣ ಹೇಳಲಾರೆ! ನನ್ನನ್ನು ಹುಚ್ಚನೆನ್ನುತ್ತೀರಾ? ಅನ್ನಿ. ಏನೋ ಒಂದು ತೆರನಾದ ರೋಗ ನನ್ನ ಮನಸ್ಸು ದೇಹಗಳನ್ನು ಛಿದ್ರಛಿದ್ರವಾಗಿಸುತ್ತಿರುವುದಂತೂ ನಿಚ್ಚಳ. ಅವು ಒಂದೇ ಏಟಿಗೆ ಕೊಲ್ಲುತ್ತಿಲ್ಲ. ಹರಿದು ಹಿಂಜಿ ಹಿಂಜಿ ಹಿಪ್ಪೆ ಮಾಡುತ್ತಿವೆ. ಆದರೂ ದೈನಂದಿನ ಆಗುಹೋಗುಗಳಿಗೆ ಸೂಕ್ಷ್ಮವಾಗಿ ಸಂವೇದಿಸುವ ಅರಿವಿನ ಪ್ರಜ್ಞೆ ನನ್ನಲ್ಲೇನೂ ನಶಿಸಿಹೋಗಿಲ್ಲ. ಸ್ವರ್ಗದ ವೈಭವದ ಬಗ್ಗೆ ಕೇಳಿದ್ದೇನೆ; ಈ ಭೂಮಿಯ ಮೇಲಿನ ಸುಖ–ದುಃಖ, ನೋವು–ನಲಿವಿನೊಂದಿಗೆ ಸ್ಪಂದಿಸಿದ್ದೇನೆ. ಕಾಣದ ನರಕದ ಬಗ್ಗೆಯಂತೂ ನಿತ್ಯವೂ ಕೇಳುತ್ತಿರುತ್ತೇನೆ. ಇಷ್ಟೆಲ್ಲದರ ಪ್ರಜ್ಞೆ ಇರುವಾಗ ನಾನು ಹೇಗೆ ಹುಚ್ಚನಾಗಬಲ್ಲೆ? ಇದಕ್ಕೆಲ್ಲ ಹಿನ್ನೆಲೆಯಾಗಿ ನಡೆದಂಥ ಘಟನೆಯೊಂದನ್ನು – ಒಂದು ಕಥೆಯನ್ನು – ಎಷ್ಟು ಕೌತುಕವಾಗಿ ಆದರೂ ಶಾಂತವಾಗಿ ಹೇಗೆ ನಿಮಗೆ ನಿವೇದಿಸುತ್ತೇನೆಂಬುದನ್ನು ಲಕ್ಷ್ಯಗೊಟ್ಟು ಕೇಳಿ.

ಅದು ನನ್ನ ಅಭೇದ್ಯ ಮೆದುಳನ್ನು ಹೇಗೆ, ಏಕೆ, ಯಾವಾಗ ಹೊಕ್ಕಿತು ಎಂಬುದನ್ನು ಹೇಳಲು ನನಗೆ ಸಾಧ್ಯವಿಲ್ಲ. ಆದರೆ ಒಮ್ಮೆ ಹೊಕ್ಕಾಗ ಅದು ನನ್ನ ಮೆದುಳನ್ನು ಅಹರ್ನಿಶಿಯಾಗಿ ಕಾಡತೊಡಗಿದ್ದು ಎಡತಾಕುತ್ತಿರುವುದು ನನ್ನ ಮಾನಸಿಕ ದೌರ್ಬಲ್ಯವೇ ಆದರೂ ಅದು ಸೂರ್ಯ ಪ್ರಕಾಶದಷ್ಟೇ ಸತ್ಯ. ವಿಷಯ? ಹೇಳುವಂಥ ಮನೋವಿಕಾರದ್ದೇನಲ್ಲ. ಗಾಢವಾದದ್ದಲ್ಲ; ಆದರೂ ಹೇಳದಿದ್ದರೆ ಮನಸ್ಸಿಗೆ ಕಿರಿಕಿರಿ! ಒಬ್ಬ ಮುದುಕನನ್ನು ನಾನು ಗಾಢವಾಗಿ ಪ್ರೀತಿಸುತ್ತಿದ್ದೆ. ಹಾಗೆಂದು ಆತ ನನ್ನ ಸ್ವಚ್ಛಂದ ಪ್ರವೃತ್ತಿಗೆ ಎಂದೂ ತೊಡಕಾಗಿದ್ದಿಲ್ಲ, ದಾರಿಗಡ್ಡವಾಗಿದ್ದಿಲ್ಲ. ನನ್ನನ್ನು ತುಚ್ಛವಾಗಿಯೂ ಕಂಡಿದ್ದಿಲ್ಲ. ಅವನಲ್ಲಿದ್ದ ಹೇರಳ ಚಿನ್ನಕ್ಕೂ ನಾನು ಆಶೆಪಟ್ಟಿದ್ದಿಲ್ಲ, ಆ...ದ...ರೆ... ಅವನ ಕಣ್ಣುಗಳು! ಹೌದು; ಅವನ ಕಣ್ಣುಗಳೇ! ಆ ಕಣ್ಣುಗಳಲ್ಲೊಂದು ರಣಹದ್ದಿನ ಥರ ನಿಸ್ತೇಜವಾಗಿದ್ದ ನೀಲಿ ಕಣ್ಣು, ಅದಕ್ಕೊಂದು ಕಪ್ಪು ರೆಪ್ಪೆ! ಆದರ ದೃಷ್ಟಿ ನನ್ನ ಮೇಲೆ ಯಾವಾಗ ಬಿದ್ದರೂ ನನ್ನ ಬಿಸಿ ರಕ್ತ ಹಿಮದ ಗಡ್ಡೆಯಾಗುತ್ತಿತ್ತು. ದೇಹ ಚಲನೆಯಿಲ್ಲದೆ ಸ್ತಬ್ಧವಾಗುತ್ತಿತ್ತು. ಇಂಥ ಒಂದು ಕ್ಷುಲ್ಲಕ ಕಾರಣಕ್ಕಾಗಿ ಆ ಮುದುಕನ ಜೀವವನ್ನೇ ಬಲಿಗೊಳ್ಳಲು ಮನಸ್ಸಿಗೆ ಇಂಬು ಕೊಟ್ಟೆ! ಹೀಗೆ ಮಾಡುವುದರಿಂದ ಮಾತ್ರ ಆ ಕ್ರೂರ ದೃಷ್ಟಿಯಿಂದ, ಸ್ವಹಿತ ರಕ್ಷಣೆಯಾಗುವುದೆಂಬ ನನ್ನ ಕೀಳು ಮನೋದಾರ್ಢ್ಯ ಯಾರಿಗೂ ಸಹ್ಯವಲ್ಲದ ಮಹಾಕಾರ್ಯವನ್ನು ಮಾಡಿತ್ತು.

ಇವನೆಂಥ ಹುಚ್ಚ ಎಂದು ನೀವು ನನ್ನನ್ನು ಲೇವಡಿ ಮಾಡಬಹುದು. ಹುಚ್ಚರಿಗೆ ವಾಸ್ತವದ ಪ್ರಜ್ಞೆ ಬಲು ದೂರ. ಮೇಲಾಗಿ ಭ್ರಮಾಧೀನರು. ಆದರೆ ನೀವು ನನ್ನ ಕಾರ್ಯಬಾಹುಳ್ಯವನ್ನು ನೋಡಿರಬಹುದು: ಒಂದು ಹೆಜ್ಜೆಯನ್ನಿಡಬೇಕಾದರೂ ಎಷ್ಟೊಂದು ದೂರದೃಷ್ಟಿಯಿಂದ ವಿವೇಕದಿಂದ ಯಾವ ಕಪಟತನವೂ ನನ್ನನ್ನು ನೋಂಕಲಾರದಷ್ಟು – ನಾನು ಮುಂದುವರೆಯುತ್ತೇನೆ ಎಂಬುದನ್ನು ನನ್ನನ್ನು ನೋಡಿದವರು ಕಂಡುಕೊಳ್ಳಲೇಬೇಕು. ಇದನ್ನು ಹೇಳುವ ಕಾರ್ಯ




ವೆಂದರೆ ನನ್ನನ್ನು ಹುಚ್ಚನೆಂದು ಯಾರೂ ಭಾವಿಸಬಾರದೆಂಬುದು.

ಅವನನ್ನು ಕೊಲ್ಲಬೇಕೆಂದು ನಿರ್ಧರಿಸಿದ ಹಿಂದಿನ ಒಂದು ವಾರ ಪೂರ್ತಿ ಅವನ ಬಗ್ಗೆ ಕಿಂಚಿತ್ ಕುರುಣೆಯುಂಟಾಗಿರಲಿಲ್ಲ ನನಗೆ. ಅವನು ತನ್ನ ಮನೆಯ ಒಳಗೇ ಹೊಂದಿಕೊಂಡಿದ್ದ ಒಂದು ಕೊಠಡಿಯನ್ನು ನನಗೆ ಬಾಡಿಗೆಗೆ ಕೊಟ್ಟ ಕೃತಜ್ಞತೆಯೂ ನನ್ನಲ್ಲಿ ನಶಿಸಿತ್ತು. ಅನ್ನ ಹಾಕಿದ ಮನೆಗೇ ಕನ್ನ ಕೊರೆಯುವ ತನ್ನನ್ನೇ ದೋಚುವ ದುಷ್ಟ ಪ್ರಾಣಿ ನಾನು – ಎಂದು ಆತ ಈ ಮುನ್ನವೇ ಅರಿತಿರಲಿಲ್ಲವೆಂದು ನಾನು ತಿಳಿಯಲು ಕಾರಣ ಮಲಗುವ ಕೊಠಡಿಯ ಬಾಗಿಲ ಅಗಳಿಯನ್ನು ಸಹ ಆತ ಹಾಕದೇ ಇರುವುದು. ಆದರೂ ಬಾಗಿಲುಗಳು (ಮನೆಯೂ) ಪುರಾತನ ಕಾಲದವಾಗಿದ್ದರಿಂದ, ಸ್ವಲ್ಪ ದೂಡಿದರೂ ಕಿರ್ರರ್ರೋ ಎನ್ನುತ್ತಿತ್ತು ಎಂದು ಒಮ್ಮೆ ಮಧ್ಯರಾತ್ರಿ ಆತನ ಕೊಠಡಿಯ ಬಾಗಿಲನ್ನು ನೂಕಲು ಹೋದಾಗ ತಿಳಿದಿತ್ತು. ಹಾಗಾಗಿ ಪ್ರತಿ ದಿನ ಮಧ್ಯರಾತ್ರಿ ಕಿರ್ರ್ ಅನ್ನದ ಹಾಗೆ ಕೊಂಚ ಕೊಂಚವೇ ಆ ಬಾಗಿಲನ್ನು ನೂಕುವ ಕಲೆಯನ್ನು ಸಿದ್ಧಿಸಿಕೊಳ್ಳತೊಡಗಿದೆ. ಅದೊಂದು ದಿನ ಮಧ್ಯರಾತ್ರಿ, ನಿಶ್ಶಬ್ದವಾಗಿ ನನ್ನ ತಲೆ ಒಳ ತೂರುವಷ್ಟು ಬಾಗಿಲು ತೆರೆಯಲ್ಪಟ್ಟಾಗ, ಗಗನಕ್ಕೆ ಚಾಚಿದ ಶಿಖರದ ತುತ್ತ ತುದಿಯನ್ನು ತಲುಪಿದ ಪರ್ವತಾರೋಹಿಯೊಬ್ಬನ ಉಲ್ಲಾಸ ನನ್ನದಾಯಿತು. ಆದರೆ ನನ್ನ ಉಲ್ಲಾಸ ಕ್ಷಣಭಂಗುರವಾಯಿತು; ತಲೆಯೊಂದಿಗೇ, ಒಂದು ಕಪ್ಪು ಕಂದೀಲು ಮತ್ತು ಸೊಂಟದ ಮೇಲಿನ ನನ್ನ ಅರ್ಧ ದೇಹವನ್ನು ಒಳತೂರಿಸಬೇಕಾದರೆ ನಾನು ಪಟ್ಟ ಶ್ರಮ ಹೇಳಲು ಬಾಯಿ ಸಾಲದು. ಹಾವು ಸಾಯಬೇಕು ಕೋಲು ಮುರಿಯಬಾರದು ಎನ್ನುವ ಧೋರಣೆಯೊಡನೆ, ಮುಂದುಕಿನ ಸಿದ್ದಗೆ

ಭಂಗ ಬರದಂತೆ ನನ್ನ ಕೆಲಸ ಸಾಗಿತ್ತು! ಇದೇನು ಹುಚ್ಚುತನ ಎನ್ನುವುದಾಗಲೀ ಒಬ್ಬ ಹುಚ್ಚ ಇದಕ್ಕೂ ಹೆಚ್ಚು ದಕ್ಷನಾಗಿರಲು ಸಾಧ್ಯವೇ ಎಂಬ ನಿಮ್ಮ ಅಂಬೋಣಗಳೆಲ್ಲ ನನಗೆ ಈಗ ವ್ಯರ್ಥ ಗುಣ. ಅದಕ್ಕೂ ಕಾರಣವಿಲ್ಲದೇ ಇರುತ್ತೆಯೇ? ತಲೆಯನ್ನು ಒಳ ತೂರಿಸಲು ಮುದುಕನನ್ನು ನೋಡಲು ಒಂದು ಸಣ್ಣ ಬೆಳಕಿನ ಕಿರಣ ಮುದುಕನ ಹದ್ದಿನ ಕಣ್ಣಿನ ಮೇಲೆ ನೇರವಾಗಿ ಬೀಳುವಂತೆ ಮಾಡಲು ಕಂದೀಲನ್ನು ಒಳಗೆ ತೂರಿಸಬೇಕಾಗಿತ್ತು.

ಏಳು ದೀರ್ಘ ರಾತ್ರಿಗಳನ್ನು ಇಷ್ಟನ್ನು ಮಾಡುವುದರಲ್ಲೇ ಕಳೆದೆ. ಆದರೆ ಆ ಕಣ್ಣು ಯಾವಾಗಲೂ ಮುಚ್ಚಿರುತ್ತಿದ್ದರಿಂದ ನನಗೆ ಕಾರ್ಯಪ್ರವೃತ್ತನಾಗಲು ಸಾಧ್ಯವಾಗುತ್ತಿರಲಿಲ್ಲ. ಆ ಕೆಟ್ಟ ಕಣ್ಣೊಂದೇ ನನಗೆ ಶತ್ರುವಾಗಿತ್ತೇ ವಿನಾ ನಿರ್ಭಾಗ್ಯ ಮುದುಕ ನನಗೇಕೆ ಕಾಡುವವನಾದಾನು? ಅಂದಿನಿಂದ ಪ್ರತಿ ದಿನ ನಸುಕು ಹರಿಯುತ್ತಲೇ ಛೇಂಬರಿನ ಒಳಗೆ ಧೈರ್ಯವಾಗಿ ಹೊಕ್ಕು, ಆತ್ಮೀಯವಾಗಿ ಆತನ ಹೆಸರನ್ನು, ಕೂಗಿ, ರಾತ್ರಿ ಹೇಗೆ ಕಳೆಯಿತೆಂದು, ವಿಚಾರಿಸಿ, ಅಳುಕಿಲ್ಲದೆ ಸಂಭಾಷಿಸುತ್ತಿರುವುದು ನನ್ನ ಮಟ್ಟಿಗೆ ಧೈರ್ಯದ ಕಾರ್ಯವೇ. ಪ್ರತಿ ದಿನ ಮಧ್ಯರಾತ್ರಿಯ ನನ್ನ ಕರಾಮತ್ತನ್ನು ಸಂಶಯಿಸಲಾರದಷ್ಟು ಮುಗ್ಧ ಆತನಾಗಿದ್ದನೆಂದು ನಿಮಗೆ ಈಗ ಅರಿವಾಯಿತು.

ಎಂಟನೆಯ ಮಧ್ಯರಾತ್ರಿ ಅಷ್ಟೇ ಎಚ್ಚರಿಕೆಯಿಂದ ಬಾಗಿಲು ತೆರೆದೆ. ಒಂದು ಕೈಗಡಿಯಾರದ ನಿಮಿಷದ ಮುಳ್ಳಿನ ಚಲನೆ ಅಂದಿನ ನನ್ನ ನಡೆಗಿಂತ ಚುರುಕಾಗಿತ್ತು. ನನ್ನ ಸ್ವಸಾಮರ್ಥ್ಯ, ಚಾತುರ್ಯದ ಪರಮಾವಧಿಯನ್ನು ಅಂದು ಕಂಡುಕೊಂಡೆ. ನನ್ನ ಅನಿಸಿಕೆಗಳು ವಿಜಯದ ಹಾದಿಯತ್ತ ಓಟ ಕಿತ್ತವು. ನನ್ನ ಈ ನಿಗೂಢ ಗತ್ತನ್ನು ಬಹುಶಃ ಅವನು ಕನಸಿನಲ್ಲೂ ಯೋಚಿಸಲಾರ. ಗಂಟಲಲ್ಲೇ ನಕ್ಕೆ. ಅರೆ...! ನಾನು ನಕ್ಕದ್ದು ಆತನಿಗೆ ಕೇಳಿಸಿತೇ? ಆತ ಹಾಸಿಗೆಯಲ್ಲೇ ಅತ್ತಿತ್ತ ಹೊರಳಾಡಿದ ಎಂದರೆ ಗಾಢ ನಿದ್ರೆಯಲ್ಲಿ ಬೆಚ್ಚಿ ಬೀಳುವವನ ಹಾಗೆ. ನಾನು ಈಗ ತಕ್ಷಣ ಹಿಂತೆಗೆದೆನೆಂದು ನೀವು ತಿಳಿಯಬಹುದು. ಖಂಡಿತಾ ಇಲ್ಲ. ಕೊಠಡಿಯಲ್ಲಿ ಗಾಢವಾಗಿ ಕತ್ತಲೆ ಕವಿದಿದ್ದರಿಂದ ನನ್ನ ಸುಳಿವು ಅವನಿಗೆ ಹತ್ತಕೂಡದೆಂದು ಮಿಸುಕಾಡದೆ ನಿಂತೆ. ಅಷ್ಟೆ. ಕೊಂಚ ಸಮಯ ಕಾದು ಮತ್ತೆ ನಿಧಾನವಾಗಿ ಬಾಗಿಲನ್ನು ದೂಡ ತೊಡಗಿದೆ.

ಎಂದಿನಂತೆ ನನ್ನ ತಲೆ ಮಾತ್ರ ಒಳಗೆ ಹೋಗಿತ್ತು. ಕಂದೀಲನ್ನು ಎತ್ತುವ ಹೊತ್ತಿಗೆ ಅಲ್ಲೇ ಇದ್ದ ಒಂದು ಖಾಲಿ ಡಬ್ಬಿಗೆ ನನ್ನ ಕೈ ತಾಗಿ 'ಧಡ್' ಶಬ್ದವಾಯಿತು. ಹಾಸಿಗೆಯಿಂದ ಧಿಗ್ಗನೆದ್ದ ಮುದುಕ ಕೂಗಿದ – "ಯಾರದು?"

ನಾನು ಕಲ್ಲಿನಂತೆ ಸ್ತಬ್ಧನಾದೆ! ಸುಮಾರು ಒಂದು ಘಂಟೆ ನನ್ನ ಒಂದು ಸ್ನಾಯುವೂ ಚಲಿಸದಂತೆ ನಾನು ನಿಂತಿದ್ದೆನೆಂದರೆ ನನಗಾದ ಶಿಕ್ಷೆಯ ಪರಿಯನ್ನು ನೀವು ಊಹಿಸಬಲ್ಲಿರಿ. ಈ ಮಧ್ಯೆ ಆತ ಮತ್ತೆ ಮಲಗಿದಂತೆ ನನಗೆ ತೋರಲಿಲ್ಲ. ಏನೋ ಅಪಾಯದ ಮುನ್ಸೂಚನೆಯಾಗಿ, ಇನ್ನೂ ಮೈಯೆಲ್ಲ ಕಿವಿಯಾಗಿ ಆಲಿಸುತ್ತ ಆತ ಹಾಸಿಗೆಯಲ್ಲಿ ಕುಳಿತೇ ಇದ್ದಂತೆ ತೋರಿತು. ಪಾಪ! ಏಕಾಂಗಿಯಾಗಿ ಏಗುವ ಮುಗ್ಧ ಮುದುಕ!

ಏನೋ ಸಣ್ಣಗೆ ಮುಲುಗುವ ಧ್ವನಿ ಅತ್ತಲಿಂದ! ಮರಣಾಂತಿಕ ನರಳುವಿಕೆ ಅದೆಂದು ನನಗೆ ತಕ್ಷಣ ಹೊಳೆಯಿತು. ಆದರೆ ಅದು ಯಾವುದೇ ತೆರನ ನೋವು ಅಥವಾ ದುಃಖ ಸೂಚಕವಾಗಿರಲಿಲ್ಲ. ಇಲ್ಲ...ಇಲ್ಲ...ಅವ್ಯಕ್ತ ಭೀತಿಯುಂಟಾದಾಗ ಮನಸ್ಸಿನಾಳದಿಂದ ಬರುವಂಥ ಆರ್ತನಾದ ಅದು! ಖಂಡಿತ! ಆ ಧ್ವನಿಯ ಸೂಕ್ಷ್ಮತೆಯ ಅರಿವು ನನಗಿದೆ. ಒಮ್ಮೊಮ್ಮೆ ಮಧ್ಯರಾತ್ರಿ ಜಗತ್ತೆಲ್ಲ ನಿದ್ರಾದೇವಿಯ ಮಡಿಲಲ್ಲಿರುವಾಗ ಅಂಥದೇ ಧ್ವನಿ ನನ್ನ ಮನಸ್ಸಿನಾಳದಿಂದ ಧುತ್ಕರಿಸುತ್ತಿತ್ತು. ಪ್ರಶಾಂತ ರಾತ್ರಿಯಲ್ಲಿ ಆಳವಾದ ಕಂಠದೊಳಗಿಂದ ಧ್ವನಿಯುತ್ತ, ಭಯಂಕರವಾದ ಪ್ರತಿಧ್ವನಿಯಿಂದ ನನ್ನನ್ನ ಇನ್ನೂ ಕುಗ್ಗಿಸುತ್ತಿತ್ತು. ಮುದುಕನಿಗಾದ ಭಯದ ಅರಿವಿನ ವಾಸ್ತವತೆ ನನಗಾಗಿ, ನನ್ನ ಒಂದು ಸ್ನಿಗ್ಧ ಕರುಣಾಜನಕ ನೋಟ ಅವನತ್ತ ಬಿದ್ದಿತು. ನಾನು

ಹೃದಯದಲ್ಲೇ ಸಕ್ಕಿ. ಇನ್ನು ಅವನು ಕುಳಿತೇ ಇರುವನೆಂದು ನನಗೆ ಗೊತ್ತು. ಏಕಾಂಗಿತನದ ಭಯವನ್ನು ತೊಲಗಿಸಲು ಆತನ ವ್ಯರ್ಥ ಪ್ರಯತ್ನ ಸಾಗಿತ್ತು. 'ದೀಪಕ್ಕೆ ಗಾಳಿ ಬೀಸಿದ ಬರ ಬರ ಸದ್ದು ಅದು ಅಷ್ಟೇ.'

'ಇಲಿಗಳು ಓಡುವಾಗ ಯಾವುದಾದರೂ ವಸ್ತು ಬಡಿದು ಬಿದ್ದ ಶಬ್ದ ಏಕಾಕಿರಬಾರದು ?'

'ಅಥವಾ ಹಕ್ಕಿಗಳ ಉಲಿತವಾಗಿರಬಾರದೇಕೆ!' ಇಂಥ ಊಹಾಪೋಹಗಳಿಂದ ಆತ ತನ್ನಿಂತಾನೇ ಸಂತೈಸಿಕೊಂಡು ಇದೆಲ್ಲ ತನ್ನ ನಿರರ್ಥಕ ಭಯವೆಂದು ಆತ ನಿರ್ಲಕ್ಷಿಸಲೂ ಕಾರಣವಿತ್ತು. ಕಪ್ಪು ನೆರಳಿನಂತೆ ಅವನನ್ನು ಬೆಂಬತ್ತಿದ್ದ ಸಾವು ತನ್ನ ಗೆಲುವನ್ನು ಸಾಧಿಸಿಕೊಳ್ಳಲು ಸಮೀಪಿಸಲು ಉಪಕ್ರಮಿಸತೊಡಗಿದ್ದು ದೈವ ಆತನಿಗೆ ಬಗೆದ ಮೋಸವಲ್ಲವೇ ? ಕಾಣದ ದೈವದ ಪ್ರಭಾವಲಯದಲ್ಲಿ ಆತನ ಅರಿವಿನ ಪ್ರಜ್ಞೆ ಬಂಧಿಸಲ್ಪಟ್ಟಿದ್ದರಿಂದಲೋ ಏನೋ, ಅರ್ಧ ಬಾಗಿಲ ಮೂಲಕ ಒಳಹೊಕ್ಕ ನನ್ನ ತಲೆ ಮತ್ತು ಆ ಶಬ್ದಗಳ ಕಡೆಗೆ ಆತನ ಗಮನ ಅಷ್ಟಾಗಿ ಹರಿದಿರಲಾರದೆಂದು ನಾನು ಕಲ್ಪಿಸಿಕೊಂಡೆ.

ದೀರ್ಘಕಾಲ ನಾನು ಬಲು ಸಂಯಮದಿಂದ ಕಾದೆ. ಆತ ಮತ್ತೆ ಮಲಗಿದ್ದನ್ನು ತಿಳಿಯದೇ ಸಂದಿಗ್ಧದಲ್ಲಿ ಸಿಲುಕಿ ಕಂದೀಲನ್ನು (ಬೆಳಕನ್ನು) ಕೊಂಚ ದೊಡ್ಡದಾಗಿಸುತ್ತ ಹೋದೆ. ಆತ ಇದನ್ನೆಲ್ಲ ಇನ್ನೂ ಕುಳಿತೆ ಗಮನಿಸುತ್ತಿರುವಂತೆ ಭಾವನೆ ನನ್ನಲ್ಲಿ ತಟ್ಟೈಸಿಕೊಂಡಿದ್ದರಿಂದ ಕೆಲಸ ಸೂಕ್ಷ್ಮಗತಿಯಲ್ಲಿ ಸಾಗಿತ್ತು. ಕಂದೀಲಿನ ಬೆಳಕು ಆ ಹದ್ದಿನ ಕಣ್ಣಿನ ಮೇಲೆ ಬಿತ್ತು. ಅದು ನಿಧಾನವಾಗಿ ತೆರೆಯುತ್ತ ಕೊನೆಗೊಮ್ಮೆ ದೊಡ್ಡದಾಗಿ ತೆರೆಯಿತು. ಅದನ್ನು ದಿಟ್ಟಿಸಿ ನೋಡುತ್ತಿದ್ದಂತೆ ನಾನು ಅತ್ಯುಗ್ರನಾದೆ. ಮಂದ ನೀಲಿ ಕಣ್ಣು, ಮೇಲೆ ಭಯಾನಕ ಕಪ್ಪು ರೆಪ್ಪೆ. ನನ್ನ ರಕ್ತ ತಣ್ಣಗಾಯಿತು. ಆ ಕಣ್ಣೊಂದನ್ನು ಬಿಟ್ಟು ನನಗೆ ಆತನ ಸುಕ್ಕು ಸುಕ್ಕಿನ ಮುಖವಾಗಲೀ ಜಿಡ್ಡುಗಟ್ಟಿದ ದೇಹವಾಗಲೀ ಗೋಚರಿಸುತ್ತಿರಲೇ ಇಲ್ಲ. ಹಾಗಾಗಿ ನಾನು ಬಿಟ್ಟ ಬೆಳಕಿನ ಕಿರಣ ನೇರವಾಗಿ ನನ್ನ ಗುರಿಯನ್ನು ತಲಪಿತ್ತು.

ಈಗ ನನ್ನ ಮನದಾಳದ ಸೂಕ್ಷ್ಮ ತುಮುಲವನ್ನೇ ಹುಚ್ಚೆಂದು ನೀವು ತಪ್ಪಾಗಿ ಅರ್ಥೈಸಿಕೊಂಡಿದ್ದೀರೆಂದು ನಾನು ಬಲ್ಲೆ. ಆದರೂ ಈಗ ಹೇಳಬೇಕಾದ್ದನ್ನು ಹೇಳದೇ ಹೋದರೆ ನಾನು ಹೇಳುವ ಕಥೆಗೆ ಚ್ಯುತಿ ಬಂದೀತು. ಹತ್ತಿಯಲ್ಲಿ ಸುತ್ತಿಟ್ಟ ಕೈಗಡಿಯಾರದಿಂದ ಬರುವ ಶಬ್ದದಂತೆ ಅತಿಸೂಕ್ಷ್ಮವಾದ, ಏಕಪ್ರಕಾರವಾದ ಶಬ್ದವೊಂದು ನನ್ನ ಕಿವಿಯ ತಮಟೆಗಳನ್ನು ಚುಚ್ಚುತ್ತಿದೆ. ಆ ಶಬ್ದವೂ ನನಗೆ ಚಿರಪರಿಚಿತವೇ. ಅದು ಮುದುಕನೊಬ್ಬನ ಹೃದಯ ಬಡಿತ! ಸೈನಿಕನೊಬ್ಬನ ಆತ್ಮಸ್ಥೈರ್ಯವನ್ನು ಹುಚ್ಚೆಬ್ಬಿಸುವ ನಗಾರಿಯ ಬಡಿತದಂತೆ ಅದು ನನ್ನನ್ನು ಉಗ್ರನನ್ನಾಗಿಸುತ್ತಿತ್ತು.

ಅಷ್ಟಾದರೂ ನಾನು ಸಂಯಮ ಕಳೆದುಕೊಂಡಿರಲಿಲ್ಲ. ಆದರೆ ನನ್ನ ಉಸಿರಾಟ ನಿರುಮ್ಮಳವಾಗಿರಲಿಲ್ಲ. ಮತ್ತೆ ಕಂದೀಲನ್ನು ಅಲುಗಾಡದಂತೆ ಹಿಡಿದು ಬೆಳಕಿನ ಕಿರಣವನ್ನು ಆ ಕಣ್ಣಿನ




"ಈ ಆಳಾದ್ ಕಂಡೆಕ್ಟರ್ ಮುಟ್ಟಾಳಾ, ಎಲ್ಲಿಗೆ ಅಂತ ಕೇಳತಾನೆ? ಅದಕ್ಕ."

ಮೇಲೆ ಬಿಡಲು ತಯಾರಾದೆ. ಏಕೋ ನನ್ನ ಹೃದಯದ ಬಡಿತ ಜೋರಾಯಿತು. ಕ್ಷಣ ಕ್ಷಣಕ್ಕೂ ಅದರ ವೇಗ ಹೆಚ್ಚತೊಡಗಿತು, ಏಕೆ? ಮುದುಕನ ಭಯ ನನಗೆ ಕಾಡತೊಡಗಿತು ಎಂದೆ? ನನ್ನ ಹೃದಯ ಇಷ್ಟೊಂದು ವೇಗದಲ್ಲಿ ಯಾವಾಗಲೂ ಹೊಡೆದುಕೊಂಡಿದ್ದಿಲ್ಲ. ಸ್ನಾಯುಗಳೆಲ್ಲಾ ನನ್ನ ಹಿಡಿತದಿಂದ ಸ್ವತಂತ್ರವಾಗಿದ್ದವು. ಹಳೆಯ ಭೂತದ ಮನೆ, ಭಯಂಕರ ಪ್ರಶಾಂತತೆಯ ಮಧ್ಯರಾತ್ರಿ ಎಷ್ಟು ಭೀಕರವಾಗಿತ್ತೆಂದರೆ ಮನಸ್ಸು ನನ್ನ ಅಧೀನದಲ್ಲಿರಲಿಲ್ಲ.

ನಂತರ ಮತ್ತೆ ಯಥಾಸ್ಥಿತಿಗೆ ಬರಲು ಕೆಲವು ಕ್ಷಣಗಳೇ ಹಿಡಿದವು. ಆದರೆ ಹೃದಯದ ಬಡಿತವಂತೂ ಇನ್ನೂ ಇಮ್ಮಡಿಸುತ್ತಾ ಹೋಗಿ ಹೃದಯ ಒಡೆದು ಹೋಳಾಗುವುದೆಂದು ಅನ್ನಿಸಿತು. ಈಗ ಹೊಸದೊಂದು ಭಯ ನನ್ನನ್ನಾವರಿಸಿಕೊಂಡಿತು. ನೆರೆಯಾತನಿಗೆ ನನ್ನ ಹೃದಯದ ಬಡಿತದ ಶಬ್ದ ಕೇಳಿಸಿದರೆ, ಇನ್ನು ತಡಮಾಡುತ್ತಾ ಹೋದರೆ ನನ್ನ ಸರ್ವನಾಶ ಖಂಡಿತ! ನೆರೆಹೊರೆಗೆ ತಿಳಿಯುವ ಮುನ್ನ ಕೆಲಸ ಮುಗಿಯಬೇಕು. ಕಂದಿಲಿನ ಬೆಳಕನ್ನು ಹೆಚ್ಚಿಸಿ, ಒಂದೇ ನೆಗೆತಕ್ಕೆ ಕೋಣೆಯೊಳಗೆ ಹಾರಿದೆ. ಆತನೂ ಭಯದಿಂದ ಚೀರಿದ. ಒಮ್ಮೆ ಮಾತ್ರ. ಎರಡನೆಯ ಬಾರಿ ಕೂಗಲು ನಾನು ಅವಕಾಶವಿತ್ತಿರಲಿಲ್ಲ. ಒಳಗೆ ಹಾರಿದ ತಕ್ಷಣ ನನ್ನ ಬಲವನ್ನೆಲ್ಲಾ ಕ್ರೋಢೀಕರಿಸಿ ಆತನನ್ನು ಹಾಸಿಗೆಯಿಂದ ನೆಲಕ್ಕೆಳೆದು ಭಾರವಾದ ಹಾಸಿಗೆಯನ್ನೇ ಅವನ ಮುಖದ ಮೇಲೆ ಒತ್ತಿದೆ. ಕೆಲವು ಕ್ಷಣಗಳ ನಂತರ ತೃಪ್ತಿಯಿಂದ ವಿಜಯದ ನಗೆ ನಕ್ಕೆ. ಇಷ್ಟು ಹೊತ್ತಿನ ನನ್ನ ಕ್ರಿಯೆಗಳಿಗೆ ವಿಶ್ರಾಂತಿ ಸಿಕ್ಕಂತಾಗಿ ನಿರಂಬಳವಾಗಿ ಉಸಿರಾಡಿದೆ. ಸ್ವಲ್ಪ ಹೊತ್ತಿನ ವರೆಗೂ ನನ್ನ ಹೃದಯ ಹೊಡೆದುಕೊಳ್ಳುತ್ತಿತ್ತು. ಈಗಿನ ಬಡಿತ ನನ್ನನ್ನು ಅಷ್ಟಾಗಿ ಕಾಡುವಂತಿರಲಿಲ್ಲ. ಎರಡೂವರೆ ಅಡಿ ದಪ್ಪ ಗೋಡೆಗಳನ್ನು ದಾಟಿ ಆಚೆ ಕೇಳುವಂತಿರಲಿಲ್ಲ. ಏನೇ ಇರಲಿ, ಮುದುಕ ಸತ್ತಿದ್ದ; ಎಷ್ಟೋ ಕಾಲದ ನನ್ನ ಬಯಕೆ ಈಡೇರಿತ್ತು. ಹಾಸಿಗೆಯನ್ನು ಪಕ್ಕಕ್ಕೆಳೆದು ದೇಹವನ್ನು ಪರೀಕ್ಷಿಸಿದೆ. ಮುಖ ಕಂದಿತ್ತು. ದೇಹ ಕಲ್ಲಿನಂತೆ ತಣ್ಣಗಾಗಿತ್ತು. ಕೆಲ ಕ್ಷಣಗಳವರೆಗೆ ನನ್ನ ಅಂಗೈಯನ್ನು ಆತನ ಎದೆಯ ಮೇಲಿಟ್ಟಿದ್ದೆ. ಹೃದಯ ನಿಷ್ಕ್ರಿಯವಾಗಿತ್ತಲ್ಲದೇ ಇನ್ನು ಆತನ ಕಣ್ಣು ನನ್ನನ್ನು ಕಾಡುವಂತಿರಲಿಲ್ಲ.

ನಂತರ ನಾನು ಶವವನ್ನು ಬಚ್ಚಿಡಲು ಏನು ಕ್ರಮ ಕೈಗೊಂಡೆ ಎಂದು ನಿಮಗೆ ವಿವರಿಸಿದರೆ ಇನ್ನೂ ನನ್ನನ್ನು ಹುಚ್ಚನೆಂದೇ ಭಾವಿಸುವ ನಿಮ್ಮ ಕಲ್ಪನೆಗೆ ಬಹುಶಃ ಪೂರ್ಣವಿರಾಮ ಹಾಕುವಿರಿ. ಕತ್ತಲು ಹೆಪ್ಪುಗಟ್ಟುತ್ತಿತ್ತು. ಚುರುಕಾಗಿ ಆದರೂ ನಿಶ್ಶಬ್ದವಾಗಿ ನನ್ನ ಕೆಲಸ ಮುಂದುವರೆಸಿದೆ. ಶವದ ತಲೆಯನ್ನು ಮುಂಡದಿಂದ ಬೇರ್ಪಡಿಸಿ, ಕೈಕಾಲುಗಳನ್ನು ಕತ್ತರಿಸಿದೆ.

ಛೇಂಬರಿನ ಮೂಲೆಯಲ್ಲಿದ್ದ ಮೂರು ಉದ್ದ ಹಲಗೆಗಳನ್ನು ತಂದು ಶವದ ಆಚೆ ಈಚೆ ಎರಡು, ಅವೆರಡರ ಮೇಲಿಂದ ಇನ್ನೊಂದು ಹಲಗೆಯನ್ನಿಟ್ಟು ಬರೀ ಹಲಗೆಗಳನ್ನು ಪೇರಿಸಿ ಇಟ್ಟಂತೆ ಕಾಣುವ ಹಾಗೆ ಮಾಡಿದೆ. ಇಷ್ಟು ಮಾಡುವಲ್ಲಿ ನನ್ನ ಕೈವಾಡ ಎಷ್ಟು ಕ್ರೌರ್ಯ ಹಾಗೂ ಬುದ್ಧಿಮತ್ತೆಯಿಂದ ಕೂಡಿತ್ತೆಂದರೆ ಎಂಥ ಸೂಕ್ಷ್ಮ ಕಣ್ಣೂ ಒಳಗಿದ್ದ ಶವ ಒಮ್ಮೆ ಜೀವಂತಗೊಂಡರೆ ಅದರ ಕಣ್ಣು ಒಂದು ಸಣ್ಣ ತಪ್ಪನ್ನೂ ಕಂಡು ಹಿಡಿಯಲಾರದಂತೆ ಶ್ರಮವಹಿಸಿದ್ದೆ; ಶವದ ಮೇಲೆ ಡೆಟ್ಟಾಲ ಹಾಕಿ ವಾಸನೆ ಬರದಂತೆಯೂ ಮಾಡಿದ್ದೆ. ಒಂಚೂರು ರಕ್ತದ ಕಲೆಯನ್ನೂ ಅಲ್ಲಿ ಉಳಿಸದೆ, ಸ್ವಲ್ಪ ಹೊತ್ತಿಗೆ ಮುಂಚೆ ಅಲ್ಲಿ ಒಂದು ಕೊಲೆಯಾಗಿತ್ತೆಂಬ ಕಲ್ಪನೆಯೂ ಬಾರದಂತೆ ಚಾಕಚಕ್ಯದಿಂದ ನನ್ನ ಕಾರ್ಯದಕ್ಷತೆ ಕೆಲಸ ಮುಗಿಸಿತ್ತು. ಆದರೆ! ಮನುಷ್ಯ ದೇಹದಲ್ಲೇ ಚಂಚಲವಾದದ್ದು ಎನ್ನುತ್ತಾರಲ್ಲ, ಆ ಹೃದಯ, ಆ ಚಾಡಿಕೋರ ಹೃದಯ ಎಲ್ಲವನ್ನೂ ಹೊರಗೆ ಕೆಡಹಿಬಿಟ್ಟಿತು! ಅನ್ನವಿಕ್ಕಿದ ಒಡೆಯನಿಗೆ ದ್ರೋಹ ಬಗೆಯಿತು! ನನ್ನ ಹೃದಯ ಇಷ್ಟೊಂದು ಬಲಹೀನ, ಹಿಮ್ಮತ್ತಿಲ್ಲದ್ದು ಎಂದು ತಿಳಿದಿದ್ದರೆ ಇಂಥ ದುಸ್ಸಾಹಸಕ್ಕೆ ನಾನು ಕೈ ಹಾಕುತ್ತಲೇ ಇರಲಿಲ್ಲ ಎಂಥ ದುರಾದೃಷ್ಟ ನನ್ನದು...?

ಈ ನನ್ನ ಕ್ರಿಯೆಗಳೆಲ್ಲ ಮುಗಿಯುವಾಗ ಬೆಳಗಿನ ಜಾವ ನಾಲ್ಕು ಘಂಟೆ ಹೊಡೆದಿದ್ದವು

ಅದೇಕೋ ಇನ್ನೂ ಮಧ್ಯರಾತ್ರಿಯ ಕತ್ತಲೆ ಆವರಿಸಿತ್ತು. ಗೋಡೆಯ ಮೇಲಿದ್ದ ಗಡಿಯಾರ ಢಣ್...ಢಣ್...ಎಂದು ನಾಲ್ಕು ಹೊಡೆಯು ವುದಕ್ಕೆ ಸರಿಯಾಗಿ ಯಾರೋ ಬೀದಿ ಬಾಗಿಲು ತಟ್ಟುವ ಶಬ್ದ ಕೇಳಿಸಿತು. ನನ್ನ ಎದೆಯೊಳ ಗಿದ್ದ ಗಡಿಯಾರ ನೂರಾರು ಘಂಟೆ ಹೊಡೆ ಯಿತು. ಆದರೆ ಸಂಶಯ ಸುಳಿಯದಂತೆ ಕೆಲಸ ಮುಗಿಸಿದ್ದ ತೃಪ್ತಿಯಿಂದ, ಹಸನಾದ ಹೃದಯ ಹೊತ್ತು ಬಾಗಿಲ ಬಳಿ ಹೋದೆ. ಬಾಗಿಲ ಅಗಳಿ ತೆಗೆಯುತ್ತಿದ್ದ ಹಾಗೇ ಬಾಗಿಲು ದೂಡಿಕೊಂಡು ಮೂವರು ಒಳಬಂದು ತಾವು ಪೋಲೀಸ್ ಅಧಿಕಾರಿಗಳೆಂದು ಪರಿಚಯಿಸಿಕೊಂಡರು. ರಾತ್ರಿ ನೆರೆಮನೆಯಿಂದ ಒಂದು ಚೀತ್ಕಾರ ಕೇಳಿಸಿದ್ದಾ ಗಿಯೂ, ತನಗೇನೋ ಅನುಮಾನವುಂಟಾಯಿ ತೆಂದೂ ಪಕ್ಕದ ಮನೆಯಾತ ಕೂಡಲೇ ಪೋಲೀಸ್ ಕಚೇರಿಗೆ ವಿಷಯ ತಿಳಿಸಿದ್ದರಿಂದ ಸ್ಥಳ ಪರಿಶೀಲನೆ ಗಾಗಿ ಮೂವರು ಅಧಿಕಾರಿಗಳು ಕಳುಹಿಸಲ್ಪ ಟ್ಟಿದ್ದರು.

ನಾನು ಮುಗುಳ್ನಕ್ಕೆ. ಭಯಗೊಳ್ಳಲು ನನ್ನ ಲ್ಲೇನು ಕಾರಣವಿತ್ತು? ಸಾಧ್ಯವಾದಷ್ಟು ವಿನಯ ದಿಂದ ಅವರನ್ನು ಸ್ವಾಗತಿಸಿದೆ. "ಓಹೋ ನೆರೆ ಮನೆಯಾತ ತಿಳಿಸಿದ್ದಂತೆ ಚೀತ್ಕಾರ ಉಂಟಾ ದದ್ದು ಹೌದು. ಅದು ನನ್ನದೇ. ಕನಸಿನಲ್ಲಿ ಕೂಗಿ ದ್ದೆ" ಎಂದು ಅವರಿಗೆ ಹೇಳಿದೆ. "ಈ ಮನೆಯಲ್ಲಿ ಮುದುಕ ಇದ್ದದ್ದು ಹೌದು; ಆದರೆ ಆತ ಊರ ಲ್ಲಿಲ್ಲ" ಎಂದೆ ಸ್ವಾಭಾವಿಕವಾಗಿ. ಹಾಗಿದ್ದರೆ ನಾನೇಕೆ ಈ ನಡಿರಾತ್ರಿ ಇಲ್ಲಿಗೆ ಬಂದಿದ್ದೆನೆಂದು ಅವರು ಕೇಳಲಿಲ್ಲ. ನಾನಾಗಿ ಹೇಳಲಿಲ್ಲ. ನನ್ನ ಬೆರ್ಳಗಿನ ರಥಾವದ ಅತಿಥಿಗಳನ್ನು ಮನೆಯಲ್ಲಿ ಸುತ್ತಾ ಡಿಸಿದೆ. ಕೊನೆಗೆ ನಿಮಗೆ ತೋಚಿದಲ್ಲಿ ಜಪ್ತಿ ಮಾಡಿ ಎಂದು ಅವರಲ್ಲಿ ಬಿನ್ನವಿಸಿಕೊಂಡೆ. ಮುದು ಕನ ಕೋಣೆಯೊಳಗೆ ಕರೆದುಕೊಂಡು ಹೋಗಿ ಆತನ ಅಲ್ಮೇರಾಗಳು, ಇನ್ನಿತರ ವಸ್ತುಗಳು ಸುರಕ್ಷಿತವಾಗಿರುವುದನ್ನು ತೋರಿಸಿದೆ. ಅವರೆಗೂ ಸ್ವಂತ ಆತ್ಮಾಭಿಮಾನದ ಬಗ್ಗೆ ದೃಢನಂಬಿಕೆ ಇಟ್ಟುಕೊಂಡಿದ್ದ ನಾನು, ವರಾಂಡದಿಂದ ಮೂರು ಕುರ್ಚಿಗಳನ್ನು ತಂದಿಟ್ಟು ಅವರಲ್ಲಿ ಕುಳಿತು ಕೊಂಡು ದಣಿವಾರಿಸಿಕೊಳ್ಳುವ ಇಚ್ಛೆ ವ್ಯಕ್ತ ಪಡಿಸಿದೆ. ಭಯಂಕರವಾದ ದಿಟ್ಟತನ, ಎದೆ ಗಾರಿಕೆಯಿಂದ ನಾನು ನನ್ನ ಸ್ಥಳದಲ್ಲಿ ಕುಕ್ಕರಿಸಿದೆ. 'ಅದ್ಯಾವುದಪ್ಪಾ ನಿನ್ನ ಸ್ಥಳ, ಆ ಮುದುಕನ ಕೋಣೆಯಲ್ಲಿ?' ಎಂದು ನೀವು ಕೇಳಬಹುದು! ರಾತ್ರಿ ಇಡೀ ಅಷ್ಟೊಂದು ಶ್ರಮವಹಿಸಿ ಶವ ವನ್ನು ಬಚ್ಚಿಟ್ಟಿದ್ದ ಹಲಗೆಗಳ ಮೇಲೆ ನನ್ನ ಅಸ್ತಿತ್ವ ಸ್ಥಾಪಿಸಿಕೊಂಡರೇನು ತಪ್ಪು?

ನನ್ನ ಸನ್ನಡತೆಯಿಂದ ಅಧಿಕಾರಿಗಳು ತೃಪ್ತಿ ಪಟ್ಟಂತೆ ಕಂಡಿತು. ವೈಯಕ್ತಿಕವಾಗಿ ನಾನು ಆಗ ವಿಜಯೋತ್ಸವದ ಗುಂಗಿನಲ್ಲಿದ್ದೆ. ಅವರ ಸಂದೇ ಹಿತ ಪ್ರಶ್ನೆಗಳಿಗೆ ನಾನು ನಿರಾಯಾಸವಾಗಿ ಉತ್ತರಿಸಿದ ಮೇಲೆ ಅವರು ಕುಳಿತುಕೊಂಡು ವ್ಯಾವಹಾರಿಕವಾಗಿ ಹರಟೆ ಹೊಡೆಯತೊಡಗಿ ದರು. ಕೊಂಚ ಹೊತ್ತು ಹಾಗೇ ಕಳೆಯಿತು. ಆದಾಗಲೇ ನಾನು ಏಕೋ ವಿವರ್ಣನಾಗತೊಡ ಗಿದ್ದು ನನ್ನ ಗಮನಕ್ಕೆ ಬರುತ್ತಲೇ ಅವರೇಕೆ ಇನ್ನೂ ಹೊರಡದೇ ಪಿಷ್ಟಪೇಷಣ ಮಾಡು ತ್ತಿದ್ದಾರೆ ಎಂದು ಅಂತರಂಗದಲ್ಲೇ ಹಪಹಪಿ ಸಿದೆ. ಅವರ ಅನವಶ್ಯಕ (ನನಗೆ) ಟೊಳ್ಳ ಮಾತಿನಿಂದ ನನ್ನ ತಲೆ ಚಿಟ್ಟುಹಿಡಿಯತೊಡ




"ಕಿಟ್ಟು, ಸಾಹೆಬ್ರಿಗೆ ಪ್ಯಾಂಟ್ ಅಳತೆ ತಗೋಬೇಕು ಇನ್ನೊಂದು ಟೇಪು ತಗೊಂಡು ಬಾರೊ."

ಗಿತು. ಕಿವಿಗಳಲ್ಲಿ ವಿಚಿತ್ರವಾಗಿ ಶಬ್ದವುಂಟಾಗತೊಡಗಿತು. ನನ್ನ ಇರುವನ್ನೇ ಮರೆತಂತೆ ಅವರಿನ್ನೂ ಕುಳಿತು ಅದೇನು ಚರ್ಚಿಸುತ್ತಿದ್ದಾರೆ? ಇನ್ನು ಅವರಿಗಿಲ್ಲೇನು ಕೆಲಸ? ಕಿವಿಯೊಳಗಿನ ಶಬ್ದ ಕ್ಷಣಕ್ಷಣಕ್ಕೂ ಹೆಚ್ಚಾಗುತ್ತಿದ್ದು ಇದೀಗ ಎದೆ ಬೇರೆ ಹೊಡೆದುಕೊಳ್ಳತೊಡಗಿತ್ತು. ನನ್ನೊಳಗೆ ಬೇಯುತ್ತಿದ್ದ ಭಾವನೆಗಳನ್ನು ಹತ್ತಿಕ್ಕಿಕೊಳ್ಳಲು ಅವರೊಡನೆ ಸ್ವಾಭಾವಿಕವಾಗಿ ಚರ್ಚಿಸಲು ಹವಣಿಸುವ ನನ್ನ ಪ್ರಯತ್ನ ವ್ಯರ್ಥಗುರಣವಾಯಿತು. ನನ್ನೊಳಗೆ ಸುಡುತ್ತಿದ್ದ ಅನಿಸಿಕೆಗಳು, ಕಿವಿಯಲ್ಲಿನ ಶಬ್ದಗಳ ಪರಸ್ಪರ ಹೋರಾಟಗಳೇ ಹೆಚ್ಚಾಗತೊಡಗಿ ಬಹುಶಃ ಈಗ ನನಗೊಂದೇ ಅಲ್ಲದೇ ಅವರಿಗೂ ಈ ಶಬ್ದ ಕೇಳಿಸುವಂತಾಯಿತೆಂದು ನನಗರಿವಾಗತೊಡಗಿದ್ದು, ನನ್ನ ಭ್ರಮೆಯೇ ಅಲ್ಲವೇ ಎಂದು ಅರಿಯಲು ಕೂಡಾ ಆಗ ನಾನು ಅಶಕ್ತನಾಗಿದ್ದೆ.

ಅನುಮಾನ ಬೇಡವೇ ಬೇಡ. ನಾನು ನನ್ನ ನೈಜ ಬಣ್ಣ ಕಳೆದುಕೊಳ್ಳತೊಡಗಿದ್ದು ಸ್ಪಷ್ಟ. ಅಯ್ಯೋ ಅವರೇಕೆ ಈಗ ಹೋಗಬಾರದು? ಅವರೊಡನೆ ಚರ್ಚೆಯಲ್ಲಿ ಪಾಲ್ಗೊಳ್ಳುವುದು ಅನಿವಾರ್ಯವಾಗಿ, ದೊಡ್ಡ ಧ್ವನಿಯಲ್ಲಿ ಕೂಗತೊಡಗಿದೆ. ಅವರಿಗೇನು ಭಾಸವಾಗುವುದೆಂಬುದರರಿವಿಲ್ಲದೆ; ಆದರೂ ನನ್ನ ಕಿವಿಯಲ್ಲಿನ ಶಬ್ದವೇ ಸ್ಪರ್ಧೆಯಲ್ಲಿ ಗೆಲ್ಲುವಂತೆ ತೋರುತ್ತಿದೆ. ಅಮಾಯಕ ನಾನೇನು ಮಾಡಲಿ ಈಗ? ಅದು ಮಂದ ಧ್ವನಿಯಾದರೂ ನನ್ನನ್ನು ಸಜೀವವಾಗಿ ದಹಿಸುತ್ತಿದೆ. ಎಷ್ಟು ಮಂದ ಅಂದರೆ ಹತ್ತಿಯಲ್ಲಿ ಸುತ್ತಿಟ್ಟ ಕೈಗಡಿಯಾರದಿಂದ ಬರುವ ಶಬ್ದದಂತೆ. ಇದೀಗ ನಾನು ಉಸಿರಾಡಲು ತೇಕುತ್ತಿರುವುದೂ ಅವರಿಗೆ ಕೇಳಿಸುತ್ತಿರಬಹುದೇ? ಆವೇಶದಿಂದ ಜೋರಾಗಿ ಮಾತಾಡಹತ್ತಿದೆ. ಅವರಿನ್ನೂ ಕುಳಿತೇ ಇದ್ದದ್ದು ನನಗೆ ದೊಡ್ಡ ಸಮಸ್ಯೆ ಆಯಿತು. ಅವರ ಇರುವು ನನಗೆ ಸಹ್ಯವಾಗಲಿಲ್ಲವೆಂಬುದನ್ನು ತೋರಿಸಿಕೊಳ್ಳಲು ಎದ್ದು ಕಿಸಗಾಲು ಹಾಕುತ್ತ ಭಾರವಾದ ಹೆಜ್ಜೆಗಳೊಂದಿಗೆ ಅತ್ತಿತ್ತ ತಿರುಗಾಡ ಹತ್ತಿದೆ. ನನ್ನೊಳಗುಂಟಾಗುತ್ತಿದ್ದ ಶಬ್ದಗಳು ನನ್ನನ್ನು ತೆಕ್ಕೆಬಿದ್ದು ಹಿಗ್ಗಾ ಮುಗ್ಗಾ ಎಳೆಯುತೊಡಗಿದವು. ಓ…ದೇವರೆ! ನಾನೇನು ಮಾಡಲಿ ಈಗ? ಬುದ್ದಿಭ್ರಮಣೆಗೊಂಡು ಅಪ್ರೇಡಿತ ವ್ಯಾಧಿ ಪೀಡಿತನಾದೆ! ಬಾಯಲ್ಲಿ ಬುರುಗು ಪ್ರಾರಂಭವಾಯಿತು. ಖಾಲಿ ಖುರ್ಚಿಯೊಂದನ್ನು ಎತ್ತಿ ತೂಗಾಡಿಸುತ್ತಾ, ಕೊನೆಗೆ ಅದನ್ನು ಆ ಹಲಗೆಗಳ ಮೇಲೆ ಕೆಡತೊಡಗಿದೆ. ಆದರೆ ಇವೆಲ್ಲವನ್ನೂ ಮೀರಿ ಆ ಶಬ್ದ ಎಲ್ಲೆಲ್ಲೂ ವ್ಯಾಪಿಸತೊಡಗಿತು. ಅದು ದೊಡ್ಡದಾಗುತ್ತಾ…ದೊಡ್ಡದಾಗುತಾ …ಹೋ…ಯಿ…ತು ! ಕುಳಿತಿದ್ದವರು ಹರಟುತ್ತಾ ಮುಗುಳ್ನಗುತ್ತಿದ್ದರು. ನಾನು ಮಾಡುತ್ತಿದ್ದ ಹುಚ್ಚಾಟವನ್ನೆಲ್ಲಾ ಅವರು ಗಮನಿಸದಿರಲು ಸಾಧ್ಯವೇ? ಸರ್ವಶಕ್ತ ದೇವರೇ! ಹೌದು, ಖಂಡಿತ…ಅವರು ಗಮನಿಸಿದ್ದಾರೆ ! ಊಹಿಸಿದ್ದಾರೆ! ನನ್ನ ಕಿವಿಯಲ್ಲಿನ ಶಬ್ದವನ್ನೂ ಕೇಳಿಸಿಕೊಳ್ಳುತ್ತಿದ್ದಾರೆ! ಅವರಿಗೆಲ್ಲಾ ಗೊತ್ತಾಗಿದೆ. ನನ್ನ ಭಯಂಕರ ಹುಚ್ಚಾಟವನ್ನು ಹಸೋ ನುಂಚಿಕೊಳ್ಳುವ ಹೂಟವೆಂದು ತಿಳಿದು ಪರಿಹಾಸ್ಯ ಮಾಡುತ್ತಿದ್ದಾರೆ! ನನ್ನ ಯೋಚನೆಯು ಜಾಡು ಹೀಗೆ ಸಾಗಿತ್ತು. ಈ ಮರಣಾಂತಿಕ ಅವ್ಯಕ್ತ ಯಾತನೆಯೊಂದನ್ನುಳಿದು, ಇವರ ಅಪಹಾಸ್ಯವೊಂದನ್ನುಳಿದು ಬೇರಾವ ಆಮಯ (ರೋಗ) ವನ್ನೂ ತಾಳಿಕೊಳ್ಳುತ್ತಿದ್ದೆ. ಆದರೆ ನನ್ನನ್ನು ಸಜೀವ ಸುಡುತ್ತಿದ್ದ ಅವರ ಪಾಖಂಡಿ ಮುಗುಳ್ನಗೆಯನ್ನು ಮಾತ್ರ ಇನ್ನು ತಾಳಿಕೊಳ್ಳಲಾರೆ! ಆಗ ನಾನು ಗಂಟಲು ಹರಿಯುವಂತೆ ಅರಚಿಕೊಳ್ಳಬೇಕು, ಇಲ್ಲ ಸಾಯಲು ಸಿದ್ಧನಾಗಬೇಕು. ದೇವಾಲಯದಲ್ಲಿನ ಉಚ್ಚ ಘಂಟಾನಾದದಂತೆ ಕಿವಿಯೊಳಗಿನ ಶಬ್ದ ದುರ್ಘಟವಾಗಿ ಮೊಳಗುತ್ತಿದೆ! ಕಂಚಿನ ಕಂಠದಲ್ಲಿ ನಾನು ಮೊಳಗಿದ್ದೆ. ಪರಮ ಶತ್ರುಗಳೇ ಠಕ್ಕಿಸಬೇಡಿ ಇನ್ನು! ನಾನು ನನ್ನ ಕೆಲಸ ಮಾಡಿದ್ದೇನೆ! ಈ ಹಲಗೆಗಳ ಒಳಗೆ…ಇದೋ…ಇಲ್ಲಿ…ಈ ಘಟಜೀವಿಯ ಹೃದಯದೊಳಗಿನ ಭೀಕರ ಶಬ್ದವನ್ನು ಕೇಳುತ್ತಲೇ ನೀವು ಕುಳಿತಿಲ್ಲವೇ ?”

★

# ಸ್ವಚ್ಛ, ಆಹ್ಲಾದಕರ ಶ್ವಾಸ
# ಆರೋಗ್ಯಕರ, ಗಟ್ಟಿ ಹಲ್ಲುಗಳು

## ಕೋಲ್ಗೇಟ್ ಡೆಂಟಲ್ ಕ್ರೀಮ್‌ನ ಕೊಡುಗೆ

ಪ್ರತಿ ಸಲ ಊಟವಾದ ಮೇಲೆ ಕೋಲ್ಗೇಟ್‌ನಿಂದ ಹಲ್ಲುಜ್ಜಿರಿ. ಇದು ಜಗತ್ತಿನಾದ್ಯಂತ ದಂತವೈದ್ಯರು ಶಿಫಾರಸು ಮಾಡುವ ರೀತಿಯಲ್ಲಿ ನಿಮ್ಮ ಹಲ್ಲುಗಳಿಗೆ ರಕ್ಷಣೆ ನೀಡುತ್ತದೆ.

ಹಲ್ಲುಗಳೆಡೆಯಲ್ಲಿ ಉಳಿಯುವ ಆಹಾರ ಕಣಗಳಲ್ಲಿ ರೋಗಾಣುಗಳು ಬೆಳೆಯುತ್ತವೆ. ಇವು ಉಸಿರಿನ ದುರ್ವಾಸನೆಗೆ ಕಾರಣವಾಗುತ್ತವೆ– ಆಮೇಲೆ ನೋಯುವ ದಂತ ಕ್ಷಯವನ್ನುಂಟುಮಾಡುತ್ತವೆ.

ಆದುದರಿಂದ ಯಾವಾಗಲೂ ಆಹಾರವನ್ನು ಸೇವಿಸಿದ ನಂತರ ಕೋಲ್ಗೇಟ್ ರೀತಿಯಲ್ಲಿ ಹಲ್ಲುಜ್ಜಿರಿ. ನಿಮ್ಮ ಶ್ವಾಸವನ್ನು ಶುಚಿಗೊಳಿಸಲು, ಹಲ್ಲುಗಳನ್ನು ಬಿಳುಪಾಗಿಸಲು ಮತ್ತು ದಂತಕ್ಷಯವನ್ನು ಎದುರಿಸಲು ಅದು ಅತ್ಯಂತ ಪರಿಣಾಮಕಾರಿ ಎಂದು ಪ್ರಮಾಣಿತವಾಗಿದೆ.

ಕೋಲ್ಗೇಟ್‌ನಲ್ಲಿ ಆಹ್ಲಾದಕರವಾದ ಪೆಪ್ಪರ್‌ಮಿಂಟ್‌ನ ರುಚಿಯಿದೆ. ಆದ್ದರಿಂದ, ಅದರಿಂದ ಹಲ್ಲುಜ್ಜುವುದು ಆನಂದದಾಯಕವಾಗುತ್ತದೆ.

**ಕೋಲ್ಗೇಟ್‌ನ ವಿಶ್ವಸನೀಯ ಸೂತ್ರವು ಕೆಲಸ ಮಾಡುವ ರೀತಿ**


ಉಸಿರಿನ ದುರ್ವಾಸನೆಯನ್ನು ಮತ್ತು ದಂತಕ್ಷಯವನ್ನು ಉಂಟುಮಾಡುವ ರೋಗಾಣುಗಳು ನಿಮ್ಮ ಹಲ್ಲುಗಳೆಡೆಯಲ್ಲಿ ಸಿಕ್ಕಿಕೊಂಡ ಆಹಾರ ಕಣಗಳಲ್ಲಿ ಬೆಳೆಯುತ್ತವೆ.


ಕೋಲ್ಗೇಟ್‌ನ ಅಪೂರ್ವವಾದ ಕಾರ್ಯಶೀಲ ನೊರೆ ಹಲ್ಲುಗಳೆಡೆಯನ್ನು ಆಳವಾಗಿ ಪ್ರವೇಶಿಸುತ್ತದೆ ಮತ್ತು ಅಪಾಯಕರವಾದ ಆಹಾರ ಕಣಗಳನ್ನೂ ರೋಗಾಣುಗಳನ್ನೂ ಹೋಗಲಾಡಿಸುತ್ತದೆ.


ಫಲಿತಾಂಶ: ಆಕರ್ಷಕವಾದ, ಬಿಳುಪಾದ ಹಲ್ಲುಗಳು. ಆತ್ಮವಿಶ್ವಾಸವನ್ನುಂಟುಮಾಡುವ ಶುಚಿಯಾದ ಉಸಿರು ಮತ್ತು ದಂತಕ್ಷಯದ ವಿರುದ್ಧ ರಕ್ಷಣೆ.

**ಕೋಲ್ಗೇಟ್ ಡೆಂಟಲ್ ಕ್ರೀಮ್‌ನಿಂದ ಉಸಿರಿನ ದುರ್ವಾಸನೆಯನ್ನು ನಿವಾರಿಸಿರಿ... ದಂತಕ್ಷಯವನ್ನು ಎದುರಿಸಿರಿ.**




DC.G.74 KN

ಹಂಚಿ ಹೋಗಲಿ ನೋವು
ಎಂದು ಗುರಿಯಿಡುವ ಕಾವ್ಯ
ತಿರಂಗುಬಾಣ

ಅಗಲಿದ ಮೇಲೆ
ಆಜ್ಜ ಅರ್ಥವಾದ
ಕವಿತೆಯಂ ಚೌಕಟ್ಟು ಹೊಕ್ಕು ನಿಂತ

ಸ್ಪಂದಿಸಿದ ಪತ್ರಿಕೆಯಂ
ಬಿಳಿ ಅಂಗಳದಲ್ಲಿ
ಕಪ್ಪಗೆ ಅನಾವರಣಗೊಂಡ

ಕಪ್ಪು-ಬಿಳಿ ಚಿತ್ರ
ಮೆಚ್ಚುವವರೇ ಹೆಚ್ಚು

ಬೇಗಿ ಕವಿಯಾಗಿ
ಅಚ್ಚಾದ ಚಿತ್ರಕ್ಕೆ ಕಣ್ಣಾದೆ

ಅಜ್ಜ ಬಿಟ್ಟ ಲೇಸರ್ ಕಿರಣಗಳು
ನನ್ನೆದೆ ಸೀಳಿ
ಒಳ T V ಯಲ್ಲಿ
ಪಂಜರದ ಪಾರಿವಾಳ:
ಅಣುರೂಪಿ ಅಜ್ಜ.

ಅವಾಕ್ಕಾದೆ ನಾನು
ಅವ ಅನಿಮಿಷ ಕೂಗಿ ಮುಗಿಸಿದ:
ಪ್ರೀತಿ ಪ್ರಕಟವಾಗುವುದಲ್ಲ

ಕುಸಿದು ಕೂತೆ.

— ಬಿದರಹಳ್ಳಿ ನರಸಿಂಹಮೂರ್ತಿ

# ಪುಟಾಣಿ ಪ್ರಪಂಚ

[ಠಿಗ್ರೆಟ್ ಅಯ್ಯರ್]

## 'ಮದುವೆಯಾಗಿಲ್ಲ, ನಿನಗೆ ಗೊತ್ತಿಲ್ಲ'

ಬ್ರಿಟನ್ನಿನ ಕೌಂಟಿ ಶಾಲೆಯೊಂದರ ಒಬ್ಬ ಶಿಕ್ಷಕಿ ಒಬ್ಬ ಪುಟ್ಟ ಹುಡುಗನ ತಾಯಿಗೆ ಒಂದು ಪತ್ರ ಕಳಿಸಿ, 'ನಿಮ್ಮ ಮಗನಿಗೆ ಸ್ನಾನ ಮಾಡಿಸಿ, ಅವನ ಬಳಿ ಹೋದರೆ ಕೆಟ್ಟ ವಾಸನೆ ಬರುತ್ತದೆ' ಎಂದು ತಿಳಿಸಿದಳು. ಅದಕ್ಕೆ ಹುಡುಗನ ತಾಯಿ ಬರೆದ ಉತ್ತರ: "ಮಾನ್ಯ ಶಿಕ್ಷಕಿಯವರೇ, ನನ್ನ ಹುಡುಗನಿಂದ ಕೆಟ್ಟ ವಾಸನೆಯೇನೂ ಬರುವುದಿಲ್ಲ; ಅವನ ವಾಸನೆ ಅವನ ತಂದೆಯ ವಾಸನೆಯಂತೆಯೇ ಇದೆ. ನೀನು ಮದುವೆಯಾಗಿಲ್ಲ; ಅದರಿಂದ ಈ ವಿಷಯ ನಿನಗೆ ತಿಳಿಯದು."







"ನಿನಗೆ ಮದುವೆಯಾಗಿದೆಯಾ ಡ್ಯಾಡಿ...? ನನಗೆ ಗೊತ್ತಿಲ್ಲ...ಹೇಳು ಮತ್ತೆ...ಹೇಗೆ ಆದೆ?"

# ಇದುವೇ ಜೀವ ಇದು ಜೀವನ

ವಠಾರದ ಕೊನೆಯಲ್ಲಿದ್ದ ಒಗೆಯುವ ಬಂಡೆಯ ಬಳಿ ರಾಜು ಬಟ್ಟೆ ಒಗೆಯುತ್ತಿದ್ದಾಗ ಅವಳಮ್ಮ ೧೦ ರೂ. ನೋಟೊಂದನ್ನು ಕೊಟ್ಟು ಸಾಮಾನು ತರಲು ಹೇಳಿದರಂತೆ. ರಾಜುವಿನ ಕೈ ನೀರಾದ್ದರಿಂದ ಪಕ್ಕದ ಬಂಡೆಯ ಮೇಲೆ ನೋಟನ್ನಿಟ್ಟು ಆಕೆ ಒಳ ನಡೆದರು. ಒಳಗಡೆ ನಲ್ಲಿಯಲ್ಲಿ ನೀರು ನಿಂತು ಹೋಗಿದ್ದರಿಂದ ಬೀದಿ ನಲ್ಲಿಯಲ್ಲಿ ನೀರು ತರಲು ರಾಜು ಹೋದಾಗ ಯಾರೋ ನೋಟನ್ನು ಎಗರಿಸಿಬಿಟ್ಟರಂತೆ. ಪುನಃ ಅವರಮ್ಮ ಬಂದು ಜ್ಞಾಪಿಸಿದಾಗಲೇ ರಾಜುವಿಗೆ ದುಡ್ಡು ಹೋದದ್ದು ತಿಳಿದದ್ದು. ಹುಡುಕಿದರೂ ಸಿಕ್ಕಲಿಲ್ಲ. "ಅಲ್ವೋ ರಾಜು, ವಯಸ್ಸು ೧೫ ಆಯ್ತು ನಿನಗೆ, ಅಷ್ಟು ಜ್ಞಾನ ಬೇಡ್ವೇನಪ್ಪಾ, ನೋಟು ಅಲ್ಲಿಟ್ಟು ನೀರು ತರಲು ಹೊರಹೋದರೆ ಕಂಡವರು ಬಿಡುತ್ತಾರಾ?"

"ಇಲ್ಲಮ್ಮಾ ಇಲ್ಲೇ ಇತ್ತು."

"ಈಗ ತೋರ್ಸು ನೋಡೋಣ, ಇಲ್ಲಿದ್ದರೆ ಎಲ್ಲಿ ಹೋಗ್ತಿತ್ತು? ತಿಂಗಳ ಕಡೆಯಲ್ಲಿ ಯಾರ ಬಳಿ ಸಾಲ ಬೇಡುವುದು! ಹುಡುಗರು ನಿಮಗೆ ಕಷ್ಟ ಅರ್ಥವಾಗಲ್ಲಪ್ಪಾ, ನಿನ್ನ ನಿರ್ಲಕ್ಷ್ಯದಿಂದ ಈಗ ೧೦ ರೂ. ಹೊಂದಿಸುವುದು ಹೇಗೆ?" ಎಂದು ಕಣ್ಣಂಚಿನಲ್ಲಿ ನೀರು ತುಂಬಿಕೊಂಡ ಅವರ ಮುಖದಲ್ಲಿ ನೂರಾರು ಚಿಂತೆಯ ಗೆರೆಗಳನ್ನು ಎಣಿಸಬಹುದಿತ್ತು. ಆಕೆ ದಿಙ್ಮೂಢರಾಗಿ ನಿಂತು ಯೋಚಿಸುತ್ತಿರುವುದು ನೋಡಿದರೆ ಅದೇ ೧೦. ರೂ. ನಿಂದ ತಿಂಗಳ ಕಡೆಯಲ್ಲಿ ಯಾವ್ಯಾವ ಸಾಮಾನು ತರಲು ಲೆಕ್ಕ ಹಾಕಿದ್ದರೋ!

"ಮೊನ್ನೆ ಪುಷ್ಪ ಎರಡು ರೂ. ಕಳೆದುಕೊಂಡು ಬಂದ್ಲು. ನೀನು ಇವತ್ತು ಹೀಗೆ ಮಾಡ್ದಿ, ನಾನೆಷ್ಟೂಂತ ಸಾಯ್ಲಿ ಹೋಗ್ರೋ" ಎಂದು ಹಿಂಡಲು ಹಿಡಿದಿದ್ದ ಬಟ್ಟೆಯನ್ನು ಕಲ್ಲಿನ ಮೇಲೆ ಕುಕ್ಕಿದಾಗ ರಾಜು ಕಳೆದನೆಂದು ಕೋಪ ಬಂದೆಡೆಯಾದರೆ, ಅನ್ಯಾಯವಾಗಿ ಸಾಲ ಹೊತ್ತುಕೊಂಡ ದುಃಖ ಇನ್ನೊಂದೆಡೆ: ತಿಂಗಳ ಕಡೆಯಲ್ಲಿ ಮತ್ಯಾರ ಬಳಿ ಕೇಳುವುದು ಎಂಬ ನಿಸ್ಸಹಾಯಕ ಸ್ಥಿತಿಗಳಿಂದ ತುಂಬಿ ಕಣ್ಣಂಚಿನಲ್ಲಿ ಒಡೆದ ನೀರನ್ನು ಒರೆಸುತ್ತಾ ಒಳ ನಡೆದರು.

ಕಿಟಕಿಯಲ್ಲಿ ಇದೆಲ್ಲವನ್ನೂ ನೋಡುತ್ತಿದ್ದ ನನಗೆ ಕಳ್ಳನನ್ನು ಹಿಡಿಯುವುದು ಆಗದ ಕೆಲಸವಾಗಿದ್ದರೂ ಅವರ ಕಷ್ಟ ನೋಡಲಾರದೆ ಬೇರೊಂದು ತೀರ್ಮಾನದಿಂದ ಹೊರ ಬಿದ್ದೆ. "ಅಲ್ಲಯ್ಯಾ, ರಾಜು, ನಿನಗೆ ಬುದ್ಧಿ ಕಲಿಸಲೆಂದೇ ಹಾಗೆ ಮಾಡಿದೆ. ಇಷ್ಟು ಅಜಾಗರೂಕನಾಗಿದ್ದರೆ ಹೇಗಯ್ಯಾ ಮುಂದೆ? ತೆಗೆದುಕೊ" ಎಂದು ೧೦ರ ನೋಟೊಂದನ್ನು ಕೈಲಿರಿಸಿದಾಗ "ಅಮ್ಮಾ, ಅಮ್ಮಾ, ಸಿಕ್ತು ನೋಡು" ಎಂದೆನ್ನುತ್ತಾ ಒಳಗೋಡಿದ. ಆಕೆ ಹೊರ ಬಂದಾಗ ೧೦ರ ನೋಟು ಅವರ ಕೈಯಿಗಿತ್ತ. ಸಂಬಳ ಬಂದ ದಿನದಷ್ಟೇ ಮುಖ ಅರಳಿತ್ತು. ೧೦ ರೂ. ವಾಪಸ್ಸು ಸಿಕ್ಕಿತೆಂಬ ಸಂತಸ ಮುಖದಲ್ಲಿ ತುಂಬಿತ್ತು.

—ವೈ. ಎಸ್. ಗುಂಡೂರಾವ್

ಈಗ ಸುಮಾರು ಎರಡು ವರ್ಷದ ಹಿಂದೆ ನಡೆದ ಘಟನೆ ಇದು. ನನ್ನ ಅಣ್ಣ ಒಂದು ತಿಂಗಳು ರಜೆಯ ಮೇಲೆ ವಿದೇಶದಿಂದ ಬಂದಿದ್ದ- ಆಗ ನಾವು ನಮ್ಮ ದೊಡ್ಡಪ್ಪನನ್ನು ಭೆಟ್ಟಿಯಾಗಲು ಅವರ ಹಳ್ಳಿಗೆ ಹೋಗಿದ್ದೆವು. ನಾವು ಅವರ ಮನೆ ತಲುಪಿದಾಗ ಮಧ್ಯಾಹ್ನ ಮೂರೂವರೆ ಗಂಟೆಯಾಗಿತ್ತು. ಮರುದಿನ ಬೆಳಿಗ್ಗೆ ಮತ್ತೆ ನಮ್ಮೂರಿಗೆ ಬರಲೇ ಬೇಕಾಗಿತ್ತು.

ನಾವು ತಮ್ಮಲ್ಲಿಗೆ ಬಂದದ್ದಕ್ಕಾಗಿ ನಮ್ಮ ದೊಡ್ಡಪ್ಪ - ದೊಡ್ಡಮ್ಮ ಬಹಳ ಸಂತೋಷಪಟ್ಟರು. ಮಧ್ಯಾಹ್ನ ಬಂದದ್ದು ಒಳ್ಳೆಯದಾಯಿತು, ಇಲ್ಲಿ ಇದ್ದಂತಾಗುತ್ತದೆ. ಮಾತನಾಡಲು ಸಮಯ ಸಿಗುತ್ತದೆ. ಸಂಜೆ

ಬಸ್ಸಾದರೆ ಎಂಟೋ ಎಂಟೂವರೆಗೊ ಬರುತ್ತದೆ ಎಂದು ಬಹಳ ಸಂತೋಷದಿಂದ ವಿದೇಶದಲ್ಲಿಯ ಸುದ್ದಿ ಕೇಳತೊಡಗಿದರು.

ಅಷ್ಟರಲ್ಲಿ ನಮ್ಮ ದೊಡ್ಡಪ್ಪನ ಮೂರು ಮಕ್ಕಳು ಶಾಲೆಯಿಂದ ಮಧ್ಯಾಹ್ನ ಬಿಡುವಿನ ವೇಳೆಗೆ ಮನೆಗೆ ಬಂದರು. ನಾವೆಲ್ಲ ಬಂದದ್ದಕ್ಕೆ ಅವರಿಗೆ ತುಂಬಾ ಖುಷಿಯಾಗಿತ್ತು. ದೊಡ್ಡಮ್ಮ ಟಿಫಿನ್ ತಯಾರಿಸುತ್ತಿದ್ದವಳು ಅವರಿಗೆ ಶಾಲೆಗೆ ಹೋಗಿ ಗುರುಗಳಿಗೆ ಹೇಳಿ ಪಾಟಿ-ಚೀಲ ತೆಗೆದುಕೊಂಡು ಬಂದುಬಿಡಿ ದೂರದಿಂದ ಅಣ್ಣ ಬಂದಿದ್ದಾನೆ ಎನ್ನುವದೊಂದೇ ತಡ ಮಹೇಶ ಹಾಗು ರವಿ ಆಗಲೇ ಶಾಲೆಗೆ ಓಟ ಕಿತ್ತಿದ್ದರು. ಆದರೆ ಎರಡನೇ ಕ್ಲಾಸಿನಲ್ಲಿ ಕಲಿಯುತ್ತಿದ್ದ ಉಮಾ ಮಾತ್ರ ಸಪ್ಪೆ ಮುಖ ಮಾಡಿ ಕದಲದೇ ನಿಂತಿದ್ದಳು. ನನ್ನಣ್ಣ, "ನೀನು ಪಾಟಿ-ಚೀಲ ತರುವುದಿಲ್ಲವೇ?" ಎಂದಾಗ "ಅಣ್ಣಾ ನೀವೆಲ್ಲ ಬೆಳಿಗ್ಗೆಯೇ ಬರಬೇಕಾಗಿತ್ತು?" ಎಂದವಳು ಪಾಟಿ-ಚೀಲ ತರಲು ಆತುರ ತೋರಲಿಲ್ಲ. "ಏಕೆ?" ಎಂದು ಕೇಳಿದಾಗ ಆಕೆ "ನೀವು ಬೆಳಿಗ್ಗೆ ಬಂದಿದ್ದರೆ ನಾವು ಒಂದು ದಿನವಾದರೂ ಪೂರ್ತಿ ಶಾಲೆ ತಪ್ಪಿಸಬಹುದಾಗಿತ್ತು. ಈಗ ಬಿಡುವಿನ ತನಕ ಶಾಲೆಗೆ ಹೋಗಬೇಕಾಯಿತಲ್ಲ" ಎಂದುಬಿಡಬೇಕೆ!

—ವಿಶಾಲಾಕ್ಷಿ ದಿ. ದೇಶಪಾಂಡೆ

ಹೆಡ್ಮಾಸ್ತರೊಬ್ಬರು ತಮ್ಮ ಹೆಂಡತಿಯ ಹೆಸರಿನಲ್ಲಿ ಎಲ್. ಐ. ಸಿ. ಏಜನ್ಸಿ ನಡೆಸುತ್ತಿದ್ದರು. ಅವರ ಶಿಷ್ಯನೊಬ್ಬ ಕೊಲ್ಲಿ ದೇಶಗಳಿಗೆ ಹೋಗಿ ಸಾಕಷ್ಟು ಸಂಪಾದನೆ ಮಾಡುತ್ತಿರುವುದು ತಿಳಿದಾಗ ಅವರಿಗೆ ಸಂತೋಷವಾಯಿತು. ಅವನು ಊರಿಗೆ ಮರಳಿರುವುದು ತಿಳಿದಾಗ ಅವರು ಎಲ್. ಐ. ಸಿ. ಡೆವಲಪ್‌ಮೆಂಟ್ ಆಫೀಸರರನ್ನು ತಮ್ಮೊಂದಿಗೆ ಕರೆದುಕೊಂಡು ಶಿಷ್ಯನ ಮನೆಗೆ ವಿಜಯಂಗೈದರು. ಒಳ್ಳೆಯ ಉತ್ಸಾಹದಿಂದ ಆಫೀಸರರಿಗೆ ಶಿಷ್ಯನನ್ನು ಪರಿಚಯಿಸುತ್ತ, "ಈತ ನನ್ನ ನೆಚ್ಚಿನ ಶಿಷ್ಯ" ಎಂದು ಅಭಿಮಾನದಿಂದ ಹೊಗಳಿದರು. ನಂತರ ಶಿಷ್ಯನನ್ನುದ್ದೇಶಿಸಿ ಪುಟ್ಟದೊಂದು ಭಾಷಣವನ್ನು ಬಿಗಿದು, ಕೊನೆಗೆ "ನೀನು ನನ್ನ ಪರಮ ಶಿಷ್ಯನಾಗಿದ್ದುದರಿಂದ ಮಾತ್ರ ಹೇಳುತ್ತೇನೆ. ನಾವು ನಮ್ಮ ನಿವೃತ್ತ ಜೀವನದ ಬಗ್ಗೆ ಈಗಿನಿಂದಲೇ ಯೋಚಿಸಿ, ಯೋಜಿಸುವುದು ಉತ್ತಮ. ನಿನಗೆ ಒಳ್ಳೆಯ ಸಂಪಾದನೆ ಇರುವುದರಿಂದ ಕನಿಷ್ಟ ಪಕ್ಷ ಒಂದು ಲಕ್ಷಕ್ಕಾದರೂ ಇನ್ಶೂರ್ ಮಾಡಿಬಿಡು," ಎಂದು ಉಪದೇಶಿಸಿದರು. ಒಂದು ಲಕ್ಷಕ್ಕೆ ಆಗುವ ಪ್ರೀಮಿಯಂ ಎಷ್ಟೆಂಬುದನ್ನು ಜೊತೆಗೆ ಬಂದಿದ್ದ ಆಫೀಸರ್ ಥಟ್ಟನೆ ಗುಣಿಸಿ ಹೇಳಿದರು.

ಶಿಷ್ಯ ತುಸು ಗಂಭೀರನಾಗಿ ಉತ್ತರಿಸಿದ, "ನೀವು ನನ್ನ ಗುರುಗಳೆಂಬ ಕಾರಣಕ್ಕಾಗಿ ನಿಮ್ಮ ಮಾತನ್ನು ಸ್ವಲ್ಪ ಮಟ್ಟಿಗಾದರೂ ನಡೆಸಬೇಕಾದದ್ದು ನನ್ನ ಕರ್ತವ್ಯ. ಆದರೇನು ನನ್ನ ಕೈಲಿ ನಾಲ್ಕು ಕಾಸಾಗಿದೆಯೆಂದು, ಜನ ನನ್ನನ್ನು ಈಗೀಗ ಗೌರವದಿಂದ ಮಾತಾಡಿಸುತ್ತಿದ್ದಾರೆ. ಆದರೆ ಬಡತನ ಕೆಟ್ಟದು ನೋಡಿ. ಬಡತನದಿಂದಾಗಿಯೇ ಶಾಲೆಯ ಫೀಜು ಕಟ್ಟಲಿಕ್ಕಾಗದಿದ್ದಾಗ ನೀವೇ ನನ್ನನ್ನು ಕ್ಲಾಸಿನಿಂದ ಹೊರಗೆ ಹಾಕಿದ್ದಿರಿ. ಅಂದಿನ ಘಟನೆಯನ್ನು ನಾನೆಂತು ಮರೆಯಲಿ ಗುರುಗಳೆ? ಆದರೇನು ನನ್ನ ಮನೆಯವರೆಗೆ ಬಂದು ಕೇಳಿದ್ದೀರಿ ಐವತ್ತು ಸಾವಿರಕ್ಕೆ ಫಾರ್ಮು ತುಂಬಿಬಿಡಿರಿ."

ಶಿಷ್ಯನ ಮಾತುಗಳು ಕರ್ಣ ಕಠೋರವಾಗಿದ್ದರೂ ಗುರುಗಳು ತಲೆ ತಗ್ಗಿಸಿ ಫಾರ್ಮು ತುಂಬುವುದರಲ್ಲಿ ನಿರತರಾಗಿದ್ದರು.

—ಕೆ. ಎಸ್.



## ಅಪಾಯದ ಸೋಗಿನಲ್ಲಿರುವ

# ದಪ್ಪ ರಕ್ತನಾಳಗಳು

ಡಾ. ಎ. ಚಂದ್ರಶೇಖರ ಉಡುಪ

ಕಾಲಿನಲ್ಲಿ ಸ್ಪಷ್ಟವಾಗಿ ಎದ್ದು ತೋರುವ ದಪ್ಪ ರಕ್ತನಾಳಗಳಿಗೆ ಸರವೆಂಬ ತಪ್ಪು ಹೆಸರು ರೂಢಿಯಲ್ಲಿದೆ. ನೀಲಿ ಬಣ್ಣ ತಳೆದು ಹಗ್ಗದೋಪಾದಿಯಲ್ಲಿದ್ದು, ಅಲ್ಲಲ್ಲಿ ಗಂಟುಗಂಟಾಗಿ ಗೋಚರಿಸುತ್ತಿರುವ ಈ ದಪ್ಪ ರಕ್ತನಾಳಗಳು ಅಶುದ್ಧ ರಕ್ತವನ್ನು ಹೃದಯದತ್ತ ಕೊಂಡೊಯ್ಯುವ ಅಭಿಧಮನಿಗಳು. ಇವನ್ನು ಐಶ್ವರ್ಯದ ಅಪರೂಪದ ಲಕ್ಷಣಗಳೆಂದು ತಿಳಿಯುವವರೂ ಇದ್ದಾರೆ. ಇವೆಲ್ಲ ನಿರಪಾಯಕರವೆಂಬ ಭಾವನೆ ಜನಸಾಮಾನ್ಯರಲ್ಲಿ ರೂಢ ಮೂಲವಾಗಿದೆಯಾದರೂ, ಒಂದಲ್ಲ ಒಂದು ದಿನ ಇವು ಒಂದಲ್ಲ ಒಂದು ವಿಧದಿಂದ ಗಂಡಾಂತರಕಾರಿಯೆಂಬ ಸತ್ಯವನ್ನು ಮಾತ್ರ ಮರೆಯಬಾರದು.

ಸೀನಪ್ಪ ಪೋಲೀಸ್ ಅಧಿಕಾರಿಯಾಗಿ ಹತ್ತು ವರ್ಷಗಳಾದುವು. ಕಾಲ್ಗಳಿಗೆ ಅದೆಷ್ಟು ಬಿಗಿಯಾಗಿ ಪಟ್ಟಿ ಸುತ್ತಿಕೊಂಡಿರುತ್ತಿದ್ದರೂ ಅವನಲ್ಲಿ ರಕ್ತನಾಳಗಳು ದಪ್ಪವಾಗಿ ಎದ್ದು ಕಾಣಿಸುತ್ತಿದ್ದು ನಡೆಯುವಾಗ ನೋವುಂಟಾಗುತ್ತಿತ್ತು.

ಪುಟ್ಟಯ್ಯ ಹೋಟೆಲಿನಲ್ಲಿ ಸಪ್ಲೈಯರ್-ಮಾಣಿಯಾಗಿ ಸೇರಿ ಮೂರು ದಶಕಗಳಾದುವು. "ನನ್ನ ದೇಹದೊಳಗಿನ ರಕ್ತವೇ ದಪ್ಪ ಬುದ್ಧೀ.



ಎರಡೂ ಕಾಲುಗಳಲ್ಲಿ ದಪ್ಪ ರಕ್ತನಾಳಗಳು

ಎಲ್ಲರ ದೇಹದಲ್ಲಿರುವುದು ನೀರು ಮಿಶ್ರಿತ ರಕ್ತವಾಗಿದ್ದರೆ ನನ್ನದು ಶುದ್ಧ ರಕ್ತ. ಹಾಗಾಗಿ ಈ ನರಗಳೆಲ್ಲ ರಕ್ತದ ಬಲ ತಡೆಯಲಾರದೆ ಎದ್ದು ಕೊಂಡಿದ್ದಾವೆ. ನಿಮಗ್ಯಾಕೆ ಬುದ್ಧೀ ಆ ಬಗ್ಗೆ ಚಿಂತೆ?" ಎಂದು ಆತ ತನ್ನ ಎರಡೂ ಕಾಲ್ಗಳ ದಪ್ಪ ರಕ್ತನಾಳಗಳ ಬಗ್ಗೆ ಹೆಮ್ಮೆಯಿಂದ ಹೇಳಿಕೊಳ್ಳುತ್ತಾನೆ.

ರಾಮಣ್ಣನ ಮನೆಯಲ್ಲಿ ಅವನ ವಂಶದ ಹಿರಿಯರೆಲ್ಲರಲ್ಲೂ ದಪ್ಪ ನಾಳಗಳಿದ್ದವು. ಈತ ಬ್ಯಾಂಕ್ ಮೇನೇಜರನಾಗಿ ಹದಿನೈದು ವರ್ಷಗಳಾದುವು. ಆತ ಬ್ಯಾಂಕಿನಲ್ಲಿರುತ್ತಿದ್ದ ಹೆಚ್ಚಿನ ವೇಳೆ ಕುಳಿತೇ ಇರುತ್ತಿದ್ದರೂ ಅವನ ಎರಡೂ ಕಾಲ್ಗಳಲ್ಲಿ ದಪ್ಪ ರಕ್ತನಾಳಗಳು ಕಂಡುಬಂದಿದ್ದವು.

ಸುಬ್ಬಾಭಟ್ಟರು ಪ್ರಸಿದ್ಧ ಅಡಿಗೆಯವರು. ಅವರದು ಅಚ್ಚ ಬಿಳಿ ಬಣ್ಣದ ದೇಹವಾಗಿದ್ದು, ಕಾಲ್ಗಳಲ್ಲಿರುವ ದಪ್ಪ ರಕ್ತನಾಳಗಳು ಗೊಮ್ಮಟನ ಬಾಹುವನ್ನು ಬಳಸಿದ ಬಳ್ಳಿಯಂತೆ ಸುಸ್ಪಷ್ಟವಾಗಿದ್ದವು. ತನ್ನ ಪೌರುಷದ ಪ್ರತೀಕವಾಗಿಯೇ ಬೆಳೆದಿವೆ ಇವು ಎನ್ನುತ್ತಿದ್ದರವರು, ಎದೆ ತಟ್ಟಿಕೊಂಡು.

## ಮನುಷ್ಯ ಕುಲದಲ್ಲಿ ಮಾತ್ರವೇ

ಜೀವಿಗಳಲ್ಲೆಲ್ಲ ಮಾನವ ಕುಲದಲ್ಲಿ ಮಾತ್ರವೆ ದಪ್ಪ ರಕ್ತನಾಳಗಳು ಕಂಡುಬರುವುದು. ಪ್ರಸಿದ್ಧ ಆಂಗ್ಲ ನುಡಿಯೊಂದು ಹೇಳುವಂತೆ, it is the penalty for the gravity by the verticality of man– ಮಾನವನ ನೆಟ್ಟಗಿನ ನಿಲುವಿನಿಂದಾಗಿ ಭೂಮಿಯ ಗುರುತ್ವ ಶಕ್ತಿಯಿಂದ ಅವನು ಅನುಭವಿಸುವ ಶಿಕ್ಷೆಯ ರೂಪದಲ್ಲಿ ಈ ದಪ್ಪ ರಕ್ತನಾಳಗಳಿವೆ. ಎಂದರೂ ತಪ್ಪೇನಲ್ಲ. ನಮ್ಮ ಕಾಲುಗಳಿಂದ ಹೃದಯದತ್ತ ರಕ್ತ ಹರಿಯಬೇಕಾದರೆ ಭೂಮಿಯ ಗುರುತ್ವಾಕರ್ಷಣ ಶಕ್ತಿಯ ವಿರುದ್ಧವೆ ಹರಿಯಬೇಕಷ್ಟೆ. ದೇಹದ ಶುದ್ಧ ರಕ್ತನಾಳಗಳಾದ ಅಪಧಮನಿಗಳಲ್ಲಿ ರಕ್ತ ಸಂಚಾರಕ್ಕೆ ಹೃದಯ ತಂಪಾಗುವಾಗ ಉಂಟಾದ ಒತ್ತಡವೇ ಸಾಕಾಗುತ್ತದೆ. ಆದರೆ ಅಶುದ್ಧ ರಕ್ತನಾಳಗಳಾದ ಅಭಿಧಮನಿಗಳಲ್ಲಿ ರಕ್ತ ಹರಿಯುವದಕ್ಕೆ ಅಂತಹ ಶಾಶ್ವತ ಒತ್ತಡವೇನೂ ಇರುವುದಿಲ್ಲ. ಹೃದಯದತ್ತ ಕಾಲುಗಳಿಂದ ಅಶುದ್ಧ ರಕ್ತದ ಪ್ರವಾಹವನ್ನು ಸುಗಮವಾಗಿ ಮಾಡುವಲ್ಲಿ, ನಡೆಯುವಾಗ ನಮ್ಮ ಮೊಣಕಾಲಿನ ಮಾಂಸ ಖಂಡಗಳ ಕುಗ್ಗುವಿಕೆಯಿಂದಾಗುವ ಒತ್ತಡವೆ ಬಹಳಷ್ಟು ಸಹಕಾರಿಯಾಗುತ್ತದೆ. ನಾವು ಹೆಚ್ಚೆಯಿಕ್ಕುವಾಗ ಈ ಮಾಂಸ ಖಂಡಗಳು ಸಂಕುಚನಗೊಂಡು ಅಲ್ಲಿನ ರಕ್ತನಾಳಗಳು ಹಿಂಡಲ್ಪಟ್ಟಂತಾಗಿ ರಕ್ತದ ಮುನ್ನಡೆ ಸುಲಭ ಸಾಧ್ಯವಾಗುತ್ತದೆ. ಜತೆಗೆ ಈ ರಕ್ತನಾಳಗಳಲ್ಲಿ ಹಿಮ್ಮುಖ ಪ್ರವಾಹವನ್ನು ತಡೆಗಟ್ಟುವಂತೆ ಕವಾಟಗಳ ಏರ್ಪಾಡಿದೆ. ಒಂದೊಮ್ಮೆ ಜನ್ಮದಾರಭ್ಯ ಈ ಕವಾಟಗಳೇ ಇಲ್ಲದಿದ್ದಲ್ಲಿ ಅಥವಾ ಅಸಮರ್ಪಕವಾಗಿದ್ದಲ್ಲಿ ಇಲ್ಲವೆ ವೃದ್ಧಾಪ್ಯದಲ್ಲಿ ಕವಾಟಗಳು ನಾಶಗೊಂಡಲ್ಲಿ ಹೃದಯದ ಕಡೆಗೆ ರಕ್ತ ಸಂಚಾರವಾಗುವ ಬದಲು ಭೂಮಿಯ ಗುರುತ್ವಾಕರ್ಷಣ ಶಕ್ತಿಯಿಂದಾಗಿ ಕಾಲ್ಗಳಲ್ಲೇ ರಕ್ತ ಸಂಚಯನಗೊಳ್ಳುತ್ತದೆ. ಈ ರೀತಿ ಆಗುತ್ತಲೇ ಇದ್ದು, ಅಭಿಧಮನಿಗಳ ಭಿತ್ತಿಯು ಹಿಗ್ಗಿ ದುರ್ಬಲಗೊಂಡು ಅವೆಲ್ಲ ನೀಲಿ ದಾರದೋಪಾದಿಯಲ್ಲಿ ಎದ್ದು ಕಾಣುತ್ತವೆ.

ಸಾಮಾನ್ಯವಾಗಿ ದಿನದ ಹೆಚ್ಚಿನ ಗಂಟೆಗಳಲ್ಲಿ ನಿಂತೇ ಕೆಲಸ ಮಾಡುವ ಅಭ್ಯಾಸವಿದ್ದವರಲ್ಲಿ ದಪ್ಪರಕ್ತನಾಳಗಳು ಕಂಡುಬರುತ್ತವೆ. ಟ್ರಾಫಿಕ್ ಪೋಲೀಸರು, ಸರ್ಜನರು, ನರ್ಸ್‌ಗಳು, ಹೋಟೆಲ್ ಸಪ್ಲೈಯರುಗಳು, ರೈತರು, ಅಡಿಗೆ ಭಟ್ಟರು, ಸಮುದ್ರ ಕೆಲಸಗಾರರು, ಗಣ್ಯ ವ್ಯಕ್ತಿಗಳ ಅಂಗರಕ್ಷಕರು ಇವರೆಲ್ಲರಲ್ಲೂ ಇವು ಸರ್ವೇಸಾಮಾನ್ಯ. ಪೋಲೀಸರೂ ನರ್ಸ್‌ಗಳೂ ಕಾಲ್ಗಳ ಸುತ್ತ ಬಿಗಿಯಾದ ಕಾಲು ಚೀಲ ಧರಿಸುವುದನ್ನೂ, ಪಟ್ಟಿ ಬಿಗಿದುಕೊಳ್ಳುವುದನ್ನೂ ನೀವು ಕಂಡಿರಬೇಕಲ್ಲವೆ? ರಕ್ತ ಸಂಚಯನಗೊಳ್ಳುವುದನ್ನು ಸಾಧ್ಯವಾದಷ್ಟು ತಡೆಗಟ್ಟುವ ಸಲುವಾಗಿಯೇ ಈ ವ್ಯವಸ್ಥೆ. ಸದಾ ಮನೆ ಕೆಲಸಗಳಲ್ಲಿ ನಿರತರಾಗಿರುವ ಗೃಹಿಣಿಯರಲ್ಲೂ, ಹೊಲಿಗೆಯ ಕುಲಕಸುಬುಳ್ಳ ದರ್ಜಿಗಳಲ್ಲೂ ಇವು ಕೂಡ ಬಂದಾವು. ಕೆಲವೊಮ್ಮೆ ಅಭಿಧಮನಿಗಳಲ್ಲಿನ

ಕವಾಟಗಳ ಲೋಪದಿಂದಾಗಿ ಹುಟ್ಟಿನಿಂದಲೇ ದಪ್ಪ ರಕ್ತನಾಳಗಳು ಕಂಡುಬರಬಹುದು. ಮೇಲೆ ಹೇಳಿದ ರಾಮಣ್ಣನ ಘಟನೆಯಂತೆ, ವಂಶ ಪಾರಂಪರ್ಯವಾಗಿಯೂ ಇದೇ ಕಾರಣದಿಂದ ರಕ್ತನಾಳಗಳು ದಪ್ಪಗೊಳ್ಳಬಹುದು.

ಪಾಶ್ಚಾತ್ಯ ದೇಶಗಳಲ್ಲಿ ಸ್ಕರ್ಟ್ ಹಾಕುವ ಸಂಪ್ರದಾಯ ಸ್ತ್ರೀ ಸಮಾಜದಲ್ಲಿರುವುದರಿಂದ ದಪ್ಪ ರಕ್ತನಾಳಗಳ ಚಿಕಿತ್ಸೆಗೆ ಬರುವಲ್ಲಿ ಮಹಿಳೆಯರ ಸಂಖ್ಯೆಯೇ ಹೆಚ್ಚು. ಆದರೆ ನಮ್ಮಲ್ಲಿ ಹೆಂಗಸರು ಸೀರೆಯುಟ್ಟು ಮೈ ಮುಚ್ಚಿಕೊಳ್ಳುವುದರಿಂದ ಆ ಬಗ್ಗೆ ವೈದ್ಯರಲ್ಲಿಗೆ ಹೋಗುವುದು ಕಡಿಮೆ, ಹೋದಾಗಲಂತೂ ಆ ಕುರಿತು ಹೇಳಿಕೊಳ್ಳಲಿಕ್ಕೂ ಎಲ್ಲಿಲ್ಲದ ನಾಚಿಕೆ ಬೇರೆ.

ಗರ್ಭಿಣಿಯರಲ್ಲಿ ಸಾಮಾನ್ಯವಾಗಿ ದಪ್ಪ ರಕ್ತನಾಳಗಳು ಕಂಡುಬರುತ್ತವೆ. ಶಿಶುವಿನಿಂದಾಗಿ ಗಾತ್ರದಲ್ಲಿ ದೊಡ್ಡದಾದ ಗರ್ಭಕೋಶವು ಹೃದಯದತ್ತ ರಕ್ತವನ್ನು ಕೊಂಡೊಯ್ಯುವ ಮುಖ್ಯ ಅಭಿಧಮನಿಯನ್ನು ಒತ್ತುವುದರಿಂದ ಅಲ್ಲಿ ರಕ್ತದ ಪ್ರವಾಹ ನಿಧಾನಗೊಂಡು ಹಿಮ್ಮುಖ ಒತ್ತಡದಿಂದಾಗಿ ಕಾಲ್ಗಳ ರಕ್ತನಾಳಗಳು ದಪ್ಪಗೊಳ್ಳುತ್ತವೆ. ಆದರೆ ಹೆರಿಗೆಯಾದೊಡನೆ ತನ್ನಿಂದ ತಾನಾಗಿಯೇ ಇವೆಲ್ಲ ಕಣ್ಮರೆಯಾಗುತ್ತವೆ. ಗರ್ಭಾಶಯದ ಟ್ಯೂಮರ್, ಅಂಡಾಶಯದ ಟ್ಯೂಮರ್, ಕರುಳಿನ ಟ್ಯೂಮರ್ ಮುಂತಾದ ರೋಗಗಳಿಂದಲೂ ಅಭಿಧಮನಿಗಳ ಮೇಲೆ ಸತತ ಒತ್ತಡ ಬಿದ್ದು ದಪ್ಪ ರಕ್ತನಾಳಗಳು ಕಂಡುಬರುವುದುಂಟು.



● ದಪ್ಪ ರಕ್ತನಾಳಗಳಿಂದ ಇನ್ನೂ ತೊಂದರೆ ಕಂಡುಬಂದಿಲ್ಲ.

## ತೊಂದರೆಗಳಿವು

ಹಲವಾರು ವರ್ಷಗಳ ಕಾಲ ನೋವಾಗಲೀ, ಬೇರಾವ ತೊಂದರೆಯಾಗಲೀ ಇಲ್ಲದೆ ದಪ್ಪ ರಕ್ತನಾಳಗಳಿರಬಹುದು. ಆದರೆ ದಪ್ಪಗೊಂಡ ಅಭಿಧಮನಿಯ ಭಿತ್ತಿಯು ಸಾಕಷ್ಟು ಹಿಗ್ಗಿದಾಗ, ಅಲ್ಲಿನ ನರತಂತುಗಳು ಪ್ರಚೋದಿಸಲ್ಪಟ್ಟು ವ್ಯಕ್ತಿಗೆ ನೋವಿನ ಅನುಭವವಾಗುತ್ತದೆ. ಅಶುದ್ಧ ರಕ್ತ ಸಂಚಯನಗೊಳ್ಳುವುದರಿಂದಾಗಿ ಅಭಿಧಮನಿಯ ಭಿತ್ತಿಗೂ ಸುತ್ತಲಿರುವ ಜೀವಕಣಗಳಿಗೂ ಸಾಕಷ್ಟು ಪ್ರಮಾಣದಲ್ಲಿ ಪ್ರಾಣವಾಯು ಆಮ್ಲಜನಕದ ಪೂರೈಕೆಯಾಗದೆ, ಜೈವಿಕ ಕ್ರಿಯೆಯಿಂದುಂಟಾದ ವಿಷ ಪದಾರ್ಥಗಳೂ ಅಲ್ಲಿ ಸಂಗ್ರಹಗೊಂಡು ತನ್ನಿಮಿತ್ತವೂ ನೋವು ಅಸಹನೀಯವಾಗಬಹುದು. ಆಗಲಂತೂ ದಾರದೋಪಾದಿಯಲ್ಲಿರುವ ಈ ರಕ್ತನಾಳಗಳ ಮೇಲೆ ಕೈಯಾಡಿಸಿದರೂ ಸಾಕು, ನೋವುಂಟಾಗಬಹುದು. ಒಂದರ್ಧ ಕಿ. ಮೀ. ದೂರ ನಡೆದರಂತೂ ನೋವು ಉಲ್ಬಣಗೊಳ್ಳುತ್ತದೆ. ರಕ್ತ ಶೇಖರಗೊಂಡಾಗ ಅಭಿಧಮನಿಯ ಭಿತ್ತಿಯಿಂದ ಕೆಂಪು ರಕ್ತಕಣಗಳು ಹೊರಸೂಸಲ್ಪಟ್ಟು ಅಲ್ಲಿಯೇ ನಾಶಗೊಳ್ಳುವುದರಿಂದ ಅಲ್ಲಿನ ಚರ್ಮವೂ ಕಡು ಕಪ್ಪು ಇಲ್ಲವೆ ಕಂದು ಬಣ್ಣವನ್ನು ಪಡೆಯುತ್ತದೆ. ಪಾದದ ಮೇಲ್ಭಾಗದಲ್ಲಿ ಮೊಣಕಾಲಿನ ಗಂಟಿನ ಸುತ್ತ ರಕ್ತನಾಳಗಳ ಜಾಲ ಹೆಚ್ಚಾಗಿರುವುದರಿಂದ ಈ ಪ್ರದೇಶದಲ್ಲಿ ಸಾಮಾನ್ಯವಾಗಿ ಕಪ್ಪು ಬೆಲ್ಟೊಂದರ ನಿರ್ಮಾಣವಾಗಿರುತ್ತದೆ. ಆಮ್ಲಜನಕದ ಕೊರತೆಯುಂಟಾದಾಗ ಜೀವಕಣಗಳ ಪ್ರತಿರೋಧಕ ಶಕ್ತಿಯೂ ಕಡಿಮೆಯಾಗಿ, ನವೆಯೂ ಉಂಟಾಗಿ ಕಜ್ಜಿಯೂ ಅಲ್ಲಿ ತೋರಿಬರುತ್ತದೆ. ಅದನ್ನು ತುರಿಸಿಕೊಂಡಾಗ ಹುಣ್ಣೊಂದು ಆ ಪ್ರದೇಶದಲ್ಲಿ ಉಂಟಾಗುತ್ತದೆ. ಒಮ್ಮೆ ಹುಣ್ಣು ಕಂಡುಬಂತೆಂದರೆ ಅದಾಗಲೇ ರಕ್ತ ಶೇಖರಗೊಂಡು ಉಬ್ಬಿದ ಈ ರಕ್ತನಾಳಗಳಿಂದ ಒಂದೇ ಸಮನೆ ರಕ್ತಸ್ರಾವವಾಗುತ್ತದೆ. ಕ್ಯಾಲ್ಸಿಯಂ ಕಣಗಳು ಅಲ್ಲಿ ನೆಲೆನಿಂತರಂತೂ ರಕ್ತನಾಳಗಳ ಭಿತ್ತಿ ಬಿರುಸಾಗುತ್ತದೆ. ಅದ್ದರಿಂದಲೇ ಒಮ್ಮೆ ಹುಣ್ಣಿನ ಉಗಮವಾಯಿತೆಂದರೆ ಅದು ಸದ್ಯ ಗುಣವಾಗುವುದಿಲ್ಲ. ದಿನೇ ದಿನೇ ಹುಣ್ಣಿನ ಆಳ ಹೆಚ್ಚುತ್ತಲೇ ಹೋಗುತ್ತದೆ. ನೋವೂ ಜತೆಜತೆ ಹೆಚ್ಚುತ್ತಿದ್ದು, ಹೆಜ್ಜೆ ಹಾಕುವುದೂ ಕಷ್ಟಸಾಧ್ಯವಾಗುತ್ತದೆ. ಆಗ, ಬೇರೆ ಉಪಾಯವಿಲ್ಲದೆ ತುದಿಗಾಲಿನ ಮೇಲೆ ಬೆರಳುಗಳನ್ನೇ ಊರಿಕೊಂಡು ವ್ಯಕ್ತಿ ನಡೆಯಲೆತ್ನಿಸುತ್ತಾನೆ. ಹೀಗೆ ನಡೆಯುವುದರಿಂದ ಕ್ರಮೇಣ ಮೊಣಕಾಲ್ಗಂಟಿನ ಮೂಳೆಗಳೂ ವಿಕಾರಗೊಂಡು, ಶಾಶ್ವತವಾಗಿಯೇ ತಿರುಪುಪಾದ ಉಂಟಾಗಬಹುದು.

## ಎತ್ತರದ ಪಾದರಕ್ಷೆಗಳಿಂದ ಅಪಾಯ

ಇಂದಿನ ಸ್ತ್ರೀ ಸಮಾಜಕ್ಕೆ ಅಚ್ಚು ಮೆಚ್ಚಾದ ಹಿಮ್ಮಡಿ ಎತ್ತರದ ಚಪ್ಪಲಿ (high healed shoes) ಗಳಿಂದ ಉಪಕಾರಕ್ಕಿಂತ ಅಪಕಾರವೇ ಜಾಸ್ತಿ. ಇಲ್ಲಿ ಹಿಮ್ಮಡಿ ಎತ್ತರದಲ್ಲಿರುವುದರಿಂದ ನಡೆಯುವಾಗ ಮೊಣಕಾಲಿನ ಹಿಂಭಾಗದ ಮಾಂಸಖಂಡಗಳು ಹೆಚ್ಚು ಸಂಕುಚನಗೊಳ್ಳದೆ, ಈ ಭಾಗದಲ್ಲಿನ ರಕ್ತ ಹೃದಯದತ್ತ ಸರಿಯಾಗಿ ಪಂಪಾಗದೇ ಕ್ರಮೇಣ ಅಲ್ಲಿ ರಕ್ತ ಸಂಚಯನಗೊಂಡು ದಪ್ಪ ರಕ್ತನಾಳಗಳು ಕಂಡುಬಂದಾವು. ಒಮ್ಮೆ ಎತ್ತರದ ಹಿಮ್ಮಡಿಯ ಪಾದರಕ್ಷೆಗಳನ್ನುಪಯೋಗಿಸಿ ನಡೆಯುವ ಅಭ್ಯಾಸವಾಯಿತೆಂದರೆ ಮುಂದೆ ಬೇರೆ ಪಾದರಕ್ಷೆಗಳು ಇಷ್ಟವಾಗುವುದಿಲ್ಲ. ಅಂತಿರುವಾಗ ದಪ್ಪಗೊಂಡ ಈ ರಕ್ತನಾಳಗಳು ಕ್ರಮೇಣ ಮತ್ತಷ್ಟು ದಪ್ಪವಾಗಿ, ಮೇಲೆ ಹೇಳಿದ ಎಲ್ಲಾ ತೊಂದರೆಗಳು ಖಂಡಿತವಾಗಿ ಒಂದಲ್ಲ ಒಂದು ದಿನ ಉದ್ಭವಿಸುತ್ತವೆ.

## ರೋಗದ ಮತ್ತೊಂದು ಮುಖ

ಕಾಲ್ಗಳಿಂದ ಅಶುದ್ಧ ರಕ್ತವನ್ನು ಒಯ್ಯುವ ಧಮನಿಗಳು ಎರಡು ಪದರುಗಳಲ್ಲಿರುತ್ತವೆ. ಚರ್ಮದ ಕೆಳಗಡೆಯೇ ಇರುವ ಅಭಿಧಮನಿಗಳ ಜಾಲವೊಂದಾದರೆ, ಇನ್ನೂ ಆಳದಲ್ಲಿ, ಮಾಂಸಖಂಡಗಳ ಮಧ್ಯೆ ಅಭಿಧಮನಿಗಳ ಬೇರೊಂದು ಜಾಲವಿರುತ್ತದೆ. ಈ ಎರಡೂ ವರ್ಗಗಳ ಮಧ್ಯೆ ಸಂಪರ್ಕ ಕಲ್ಪಿಸುವ ಚಿಕ್ಕ

ಚಿಕ್ಕ ಅಭಿಧಮನಿಗಳ ಸಂಕ ಅಲ್ಲಲ್ಲಿ ಇರುತ್ತವೆ. ಸಾಮಾನ್ಯವಾಗಿ ಮೇಲ್ಗಡೆಯ ಜಾಲದಿಂದ ಕೆಳಗಡೆಗೆ ಅಂದರೆ ಆಳದಲ್ಲಿರುವ ಜಾಲದತ್ತ ರಕ್ತ ಸಂಚಾರವಿದ್ದು, ಇದನ್ನು ಕ್ರಮಬದ್ಧವಾಗಿ ನಿಯಂತ್ರಿಸಲು ಕವಾಟಗಳ ವ್ಯವಸ್ಥೆಯೂ ಬೇರೆಯಿದೆ. ಹಾಗಾಗಿ ಮೇಲ್ಮಟ್ಟದ ರಕ್ತನಾಳಗಳಿಂದ ಕೆಳಮಟ್ಟದ ರಕ್ತನಾಳಗಳತ್ತ ಸಲೀಸಾಗಿ ರಕ್ತ ಸಂಚಾರವಾಗುತ್ತದೆ. ಒಂದೊಮ್ಮೆ ಈ ಕವಾಟುಗಳು ಶಿಥಿಲಗೊಂಡಾಗ ರಕ್ತ ಪ್ರವಾಹದ ದಿಕ್ಕು ಅದಲು ಬದಲಾಗಿ, ಕೆಳಗಡೆಯಿಂದ ಮೇಲ್ಮಟ್ಟದ ಅಭಿಧಮನಿಗಳಿಗೆ ರಕ್ತದ ಪ್ರವಾಹವುಂಟಾಗಿ ತನ್ಮೂಲಕ ಅವು ದಪ್ಪಗೊಳ್ಳಬಹುದು. ಹೀಗೆ ರಕ್ತ ಸಂಚಯನಗೊಂಡಾಗ, ರಕ್ತ ಹೆಪ್ಪುಗಟ್ಟಿತೆಂದಾದರೆ, ಅದರಿಂದಾಗಿ ಹಲವಾರು ತೊಂದರೆಗಳಿವೆ. ಆಗ ಕಾಲು ಪೂರ್ತಿ ಬೀಗಿ ಬಿಸಿಯಾಗಿದ್ದು ಯಮಯಾತನೆಯನ್ನೇ ನೀಡಲಾರಂಭಿಸುತ್ತದೆ.

## ಚಿಕಿತ್ಸೆ

ಮೊಣಕಾಲಿನಿಂದ ತೊಡೆಯವರೆಗೂ ದಪ್ಪ ರಕ್ತನಾಳಗಳಿದ್ದಲ್ಲಿ ಅವು ನೋವನೀಯುವ ಮೊದಲೇ ಚಿಕಿತ್ಸೆ ಪ್ರಾರಂಭಿಸುವದೊಳಿತು. ನಿಂತುಕೊಂಡು ಕೆಲಸ ಮಾಡುವವರು ೫-೧೦ ನಿಮಿಷಗಳಿಗೊಮ್ಮೆ ಕಾಲನ್ನು ಎತ್ತಿ ಹಾಕಿ, ಬೆರಳುಗಳನ್ನೆಲ್ಲ ಕ್ಷಣಕಾಲ ಅಧೋಮುಖವಾಗಿ ಮಡಚಿ ಒತ್ತಿ ಅದುಮಿ ಹಿಡಿದುಕೊಂಡು. ಮೊಣ ಕಾಲಿನ ಮಾಂಸ ಖಂಡಗಳು ಕುಗ್ಗುವಂತೆ ಮಾಡಿ



**ಮೂರು ವರ್ಷಗಳಲ್ಲಿ ಈ ತರನ ಬೆಳವಣಿಗೆ. ಒಂದು ಕಿಲೋಮೀಟರಿಗಿಂತ ಹೆಚ್ಚಿಗೆ ನಡೆದರೆ ನೋವು ಕಂಡುಬರುತ್ತದೆ.**

ಸ್ವಲ್ಪ ಮಟ್ಟಿಗೆ ರಕ್ತವನ್ನು ಪಂಪಿಸಲು ಸಹಕರಿಸುವುದೊಳಿತು.

ಪ್ರಾರಂಭದ ಸುಲಭ ಚಿಕಿತ್ಸೆಯೊಂದಿದೆ. ಒಂದು ಅಂಗೈಯಷ್ಟು ಅಗಲಕ್ಕೆ ನಯವಾದ ಬಟ್ಟೆಯೊಂದನ್ನು ಪದರು ಪದರಾಗಿ ಪಾದಚಿಕೊಂಡು ಕಾಲಿನಿಂದ ತೊಡೆಯ ತನಕ ಅದನ್ನು ಬಿಗಿಯಾಗಿ ಸುತ್ತಿ ಕಟ್ಟಿಕೊಳ್ಳಬೇಕು. ಆಗ ಮೇಲ್ಮಟ್ಟದ ಅಭಿಧಮನಿಗಳಿಂದ ಸಂಪರ್ಕ ಸೇತುವಾದ ಚಿಕ್ಕ ಅಭಿಧಮನಿಗಳ ಮೂಲಕ ರಕ್ತ ಕೆಳಮಟ್ಟದ ಅಭಿಧಮನಿಗಳನ್ನು ಸಲೀಸಾಗಿ ತಲಪಿ ರಕ್ತ ಸಂಚಾರ ಸುಗಮಗೊಳ್ಳುತ್ತದೆ. ಈ ಉಪಯೋಗಕ್ಕಾಗಿಯೇ Elasto crape bandage ಎಂಬುದೊಂದು ಈಗ ದೊರೆಯುತ್ತದೆ. ರಾತ್ರಿ ಮಲಗುವಾಗ ಮಾತ್ರ ಈ ರೀತಿ ಕಟ್ಟಿಕೊಳ್ಳಬೇಕಾಗಿಲ್ಲ. ಆದರೆ ಕಾಲನ್ನು ತಲೆ ಮಟ್ಟಕ್ಕಿಂತ ಎತ್ತರದಲ್ಲಿಟ್ಟುಕೊಂಡು ನಿದ್ರಿಸಿದಲ್ಲಿ ಗುರುತ್ವಾಕರ್ಷಣ ಶಕ್ತಿಯಿಂದಾಗಿ ಸಲೀಸಾಗಿ ರಕ್ತಸಂಚಾರವಾಗುತ್ತದೆ.

ನೋವು ಅಸಹನೀಯವಾದಾಗ ಶಸ್ತ್ರಚಿಕಿತ್ಸೆಯ ಮೊರೆ ಹೋಗಿ ದಪ್ಪ ರಕ್ತ ನಾಳಗಳನ್ನೆಲ್ಲ ಕಿತ್ತು ಹಾಕುವುದೊಂದೇ ಸುಲಭ ಉಪಾಯ. ಈ ದಪ್ಪ ರಕ್ತನಾಳಗಳನ್ನು ಕರಗಿಸುವ ಗುಳಿಗೆಗಳಾಗಲೀ, ಮುಲಾಮೇ ಆಗಲಿ ಉಪಯೋಗದಲ್ಲಿಲ್ಲ. ಒಂದೊಮ್ಮೆ ಮೊಣಕಾಲಿನ ಗಂಟಿನಲ್ಲಿ ಹುಣ್ಣುಂಟಾಗಿದ್ದರೆ ಹುಣ್ಣು ಗುಣವಾಗುವ ತನಕ ಆಸ್ಪತ್ರೆಯಲ್ಲಿ ಒಳರೋಗಿಯಾಗಿದ್ದು, ಹುಣ್ಣು ವಾಸಿಯಾದ ಮೇಲೆನೇ ವ್ಯಕ್ತಿ ಶಸ್ತ್ರಚಿಕಿತ್ಸೆಗೊಳಗಾಗಬೇಕು.

ಸ್ವಲ್ಪ ಭಾಗದಲ್ಲಿ ಮಾತ್ರವೇ ಗಂಟುಗಂಟಾಗಿ ದಪ್ಪ ರಕ್ತನಾಳಗಳ ಗೊಂಚಲಿದ್ದಲ್ಲಿ ಶಸ್ತ್ರಚಿಕಿತ್ಸೆಯ ಮೊರೆ ಹೋಗಬೇಕಾಗಿಲ್ಲ. ಎಥ್ ಮೊಲಿನ್ ದ್ರಾವಣವನ್ನು ಆ ಪ್ರದೇಶದಲ್ಲಿ ಚುಚ್ಚಿ ಅಲ್ಲಿನ ರಕ್ತನಾಳಗಳ ರಂಧ್ರ ಮುಚ್ಚಿಕೊಳ್ಳುವಂತೆ ಸುಲಭದಲ್ಲಿಯೆ ಮಾಡಬಹುದು.

ಒಟ್ಟಿನಲ್ಲಿ ದಪ್ಪ ರಕ್ತನಾಳಗಳು ಎರಡಾದರೆ ಒಂದು ದಿನ ಕಂಟಕಕಾರಿಯೆ ಎಂಬುದನ್ನು ಸರ್ವಥಾ ಮರೆಯಬಾರದು. ಆ ಬಗ್ಗೆ ಅವುಗಳಲ್ಲಿ ನೋವು ಕಾಣಿಸುವ ಮೊದಲೆ ಮುಂಜಾಗ್ರತೆ ವಹಿಸುವುದೊಳಿತು. ಭೂಮಿಯ ಪ್ರಬಲ ಗುರುತ್ವಾಕರ್ಷಣ ಶಕ್ತಿಯನ್ನು ಪ್ರತಿಕ್ಷಣದಲ್ಲೂ ಎದುರಿಸಿ, ತನ್ನ ನೇರ ನಡಿಗೆಯಿಂದ, ನೆಟ್ಟಗಿನ ನಿಲುವಿನಿಂದ, ಧೀರ ವ್ಯಕ್ತಿತ್ವ ಪಡೆಯುವಂತೆ ಮಾನವನನ್ನು ಮಾಡುವ ಅವನ ದೇಹವೆಂಬ ಅತ್ಯದ್ಭುತ ಯಂತ್ರದೊಳಗಿನ ದೈವನಿರ್ಮಿತ ಸೂಕ್ಷ್ಮಾತಿಸೂಕ್ಷ್ಮ ವ್ಯವಸ್ಥೆಗಳು ನಿಜಕ್ಕೂ ದಿಗ್ಭ್ರಮೆಗೊಳಿಸುವಂಥವು. ✡

---

ಸುಪಾ-ಬೆಂಗಳೂರು ಬಸ್ಸಿನಲ್ಲಿ ಪ್ರಯಾಣಿಸುತ್ತಿದ್ದೆ. ಹುಬ್ಬಳ್ಳಿಯಲ್ಲಿ ಹಳ್ಳಿಯ ದಂಪತಿಗಳಿಬ್ಬರು ಅವರ ಸಂಬಂಧಿಕರಿಗೆ ತೀವ್ರ ಅಜಾರಿ ಇರುವುದರಿಂದ ಆ ಬಸ್ಸನ್ನೇ ಹತ್ತಿದರು. ಅದು ಎಕ್ಸ್‌ಪ್ರೆಸ್ ಬಸ್ಸಿದ್ದುದರಿಂದ ಆ ಪ್ರಯಾಣಿಕರು ಹಾವೇರಿಗೆ ಟಿಕೆಟ್ಟು ತೆಗಿಸಿದರು. ಅವರು ಇಳಿದು ಹೋಗಬೇಕಾದ ಸ್ಥಳ ಹಾವೇರಿ ಹತ್ತಿರದ ಒಂದು ಹಳ್ಳಿ. ಹಾವೇರಿಗೆ ಹತ್ತಿರವಿರುವ ಹಳ್ಳಿಗೆ ಬಸ್ಸು ನಿಲ್ಲಿಸಬೇಕೆಂದು ಅದೆಷ್ಟು ದೈನ್ಯದಿಂದ ಕೇಳಿಕೊಂಡರೂ ಅವನು ಲಕ್ಷ್ಯ ಕೊಡದೆ ಹಾವೇರಿಯಲ್ಲೆ ನಿಲ್ಲಿಸಿದ. ಪಾಪ ಆ ದಂಪತಿಗಳು ಉಪಾಯವಿಲ್ಲದೆ ಅಲ್ಲೇ ಇಳಿದರು. ಮುಂದೆ ರಾಣೇಬೆನ್ನೂರಿನಲ್ಲಿ ಶಿವಿರದಲ್ಲಿರುವ ದಂಪತಿಗಳಿಬ್ಬರು ಬಸ್ಸನ್ನೇರಿದರು. ಅವರು ತಲಪಬೇಕಾದ ಸ್ಥಳ ಚಳ್ಳಕೆರೆ,- ಎಕ್ಸ್‌ಪ್ರೆಸ್ ಬಸ್ಸು ಅಲ್ಲಿ ನಿಲ್ಲಿಸಲು ಬರುವದಿಲ್ಲವೆಂದು ತಿಳಿದೂ ಬಸ್ಸನ್ನೇರಿ ಆಸೀನರಾದರು. ಬಸ್ಸು ಬಿಟ್ಟ ಮೇಲೆ ಕಂಡಕ್ಟರನಿಗೆ ರೂ. ೫-೦೦ ನೀಡಿ ಚಳ್ಳಕೆರೆಗೆ ಬಸ್ಸು ನಿಲ್ಲಿಸಬೇಕೆಂದರು. ಮರು ಮಾತಾಡದೆ ಆ ಕಂಡಕ್ಟರ್ ಚಳ್ಳಕೆರೆಯಲ್ಲಿ ಬಸ್ಸು ನಿಲ್ಲಿಸಿದ. —ಎಸ್. ಎ. ಕರಡಿ

# ಶುದ್ಧ-ಅವಿವೇಕ

ಮನವೆಂಬ ಮರ್ಕಟ ಮನುಷ್ಯನನ್ನು ಎತ್ತೆತ್ತಲೂ ತಿರುಗಿಸಬಲ್ಲದು. ಸಂದೇಹದ ಸುಳಿಯಲ್ಲಿ ಸಿಕ್ಕ ಮಧ್ಯ ವಯಸ್ಸು ಮೀರಿದ ಪುರುಷನನ್ನು ನೀವು ಭೇಟಿಯಾಗಬೇಕೆ? ಬನ್ನಿ, ಅವನ ಅಂತರಂಗವನ್ನೆಲ್ಲ ಸುತ್ತಾಡಿ ಬನ್ನಿ....

ಫ!...ಫ್ಫು!...ಫ್ಫುಫ್ಫು!...ಫ್ಲಾ...ಹ್ಲಾ!.... ಸ್ಸ!ಸ್ಸ!"

ನನ್ನ ಬೆನ್ನ ಹಿಂದೆಯೇ ಹೆಣ್ಣುಮಕ್ಕಳ ಗುಂಪೊಂದರ ಅದುಮು ನಗೆ ಕೇಳಿಸಿದಂತಾಗುತ್ತದೆ. ಆ ನಗೆ, ಆ ತಗ್ಗಿ ಸ್ವರದ ಗುಜು ಗುಜು ಅಸ್ಪಷ್ಟ ಮಾತುಗಳು ದೂರ ದೂರವಾದಂತಾಗುತ್ತದೆ.

ಆಗ ನಾನು ಸುಂದರ ಪಾರ್ಕಿನಲ್ಲಿ ನಡೆದಾರಿ ಪಕ್ಕದ ಕಲ್ಲು ಬೆಂಚಿನ ಮೇಲೆ ಬೆನ್ನು ತಿರುಗಿಸಿ ಕುಳಿತು, ಲಕ್ಷ್ಮೀ ಗುಡ್ಡದ ಮೇಲಿನ ಅರಿಷಿನ-ಕುಂಕುಮ ಹಳದಿ ಕೆಂಪು ಸೂರ್ಯಾಸ್ತದಲ್ಲಿ ಮಗ್ನನಾಗಿರುತ್ತೇನೆ. ಏರೇರು ಮೋಡಗಳ ಜೋರೊಂದರ ಹಿಂದೆ ಸೂರ್ಯ ಮರೆಯಾದಾಗ ಆ ಜೋರು ಕಪ್ಪಾಗುತ್ತದೆ. ಅದರ ಹಿಂದೆ ಹೊಗೆ ಕಪ್ಪಿನ ಛಾಯಿ ಪಟ್ಟಿಗಳೇಳುತ್ತವೆ. ಅದರೆ ಆ ಮೋಡ ಮನೋಹರವಾದ ಚಿನ್ನ ಬೆಳ್ಳಿ ಹೊಳೆಯುಂಚಿನಿಂದ ಶೋಭಿಸುತ್ತದೆ.

ಸೂರ್ಯಾಸ್ತ ಪೂರ್ತಿಯಾಗುತ್ತದೆ. ನಾನು ನನ್ನ ಎಡ ಪಕ್ಕಕ್ಕೆ ತಿರುಗಿದಾಗ ಅಲ್ಲಿ ಇನ್ನೊಂದು ಬೆಂಚಿನ ಮೇಲೆ ಕುಳಿತಿರುವ ನನ್ನಂಥ ತಾತ ಒಬ್ಬರು ಸುಮಾರು ಮೂರು ವರ್ಷದ ಸುಂದರ ಮೊಮ್ಮಗಳನ್ನು ಮುದ್ದಿಸುತ್ತ ಅವಳೊಡನೆ ಆಡುತ್ತಿರುವದು ಕಾಣಿಸುತ್ತದೆ. ಬಲ ಪಕ್ಕದ ಬೆಂಚಿನ ಮೇಲೆ ಇರುವ ವಿದ್ಯಾರ್ಥಿ 'ಮಯೂರ' ಪತ್ರಿಕೆಯಲ್ಲಿ ಮಗ್ನನಾಗಿದ್ದಾನೆ. ಅಂದ ಹಾಗೆ ನನಗೇಕೆ 'ಮಯೂರ'ದ ಕಾಂಪ್ಲಿಮೆಂಟರಿ ಪ್ರತಿ ಇನ್ನೂ ಬಂದಿಲ್ಲ, ಈ ತಿಂಗಳ ಸಂಚಿಕೆಯಲ್ಲಿ ನನ್ನ 'ಸಂಹೆರಿಯ ಕಥೆ' ಬಂದಿರಬೇಕಲ್ಲ! ಎಂದು ಕೊಳ್ಳುತ್ತೇನೆ. ಆ ಕಥೆಯು ಬಸ್ ದೃಶ್ಯ, ಅ ಗುಡು ಹೆಣ್ಣುಮಕ್ಕಳ ವೇಷಭೂಷಣ. ಚೇಷ್ಟೆ ಗಳ ವರ್ಣನೆ, ದ್ವಂದ್ವ ವ್ಯಕ್ತಿತ್ವದ ರೋಗಿ ಸರ ಹರಿ ಆ ಹೆಣ್ಣುಮಗಳನ್ನು ಹಿಂಬಾಲಿಸಿ ಅರಿತೂ ಅರಿಯದೆ ಮಾಡಿಕೊಂಡ ಅವಿವೇಕ ಮತ್ತೊಮ್ಮೆ ಮುಂದೆ ಬಂದು ಹೋಗುತ್ತವೆ. ಅಲ್ಲಿಯ ಚೆಲ್ಲಾ ಟದ ಹೆಣ್ಣುಮಕ್ಕಳು ಇಲ್ಲಿ ನಗುತ್ತ ಹಾಯು ಹೋದ ಮಕ್ಕಳನ್ನು ತಟ್ಟನೆ ಮತ್ತೆ ನೆನಪಿಗೆ ತರುತ್ತಾರೆ.

'ಹ್ಲಾ!'

'......ಆ ಮಕ್ಕಳೇಕೆ ನಗುತ್ತಿದ್ದರು?' ಮಾ

ನನ್ನ ಬೆನ್ನಿನ ಹಿಂದೆ?

'ಆ?'

ನನ್ನಲ್ಲಿ ಏಳುತ್ತಿವೆ ಆ ಪ್ರಶ್ನೆ, ಈಗ ಎಲ್ಲೋ ಆಳದಿಂದ ಎನ್ನುವಂತೆ.

ದಕ್ಷಿಣ ಪಶ್ಚಿಮ ಮೋಡ ಮೇಲೆ ಮೇಲೆದ್ದು ಆಕಾಶವನ್ನು ಆವರಿಸುತ್ತಿದೆ; ಕಬಳಿಸುವಂತೆ.

"ಹುಂ, ಅವರೇಕೆ ನಗುತ್ತಿದ್ದರು? ಅದು ಇಲ್ಲಿ ಹತ್ತಿರ ಬಂದಾಗಲೇ?"

"ಯಾಕೋ ಏನೋ...ಹ್ಹ, ಹೆಣ್ಣು ಮಕ್ಕಳು ವಯಸ್ಸಿಗೆ ಬರುತ್ತಿರುವ, ಆಗ ತಾನೇ ಬಂದಿರುವ ಹೆಣ್ಣುಮಕ್ಕಳು ಅವರು ಹಾಗೆಯೇ ಇರಬೇಕು– ಅದೂ, ಗುಂಪಿನಲ್ಲಿರುವವರು, ನಗುವುದಕ್ಕೆ ಕಾರಣವೇನು. ಬೇಕು ಅಂಥಾ ಮಹತ್ತರವಾದದ್ದು? ಏನಾದರೂ ಸಾಕು ಒಂದು ಚೂರು, ಏನೂ ಇಲ್ಲದಿದ್ದರೂ ಸಾಕೇನು. ಆ ಏರು ಯೌವನ ಚಿಲುಮೆ ಪುಟಿಯುವ ವಯೋಧರ್ಮವೇ ಹಾಗೇನೋ...... ಹ್ಞು, ಆ ಯೋಚನೆಯೇಕೆ, ಅವರನ್ನು ಕಟ್ಟಿಕೊಂಡು ನನಗೇನು. ಏಕೋ ನಕ್ಕರು, ಹೋದರು– ಗುಜು ಗುಜಿಸಿಕೊಂಡು.

'ಆದರೆ... ನನ್ನ ಬೆನ್ನ ಹಿಂದೆಯೇ ನಕ್ಕರಲ್ಲ?'

'ಆ?'

ಏನೋ ಆಕಸ್ಮಿಕ ಸ್ಥಳದ್ದು, ಇರಬೇಕು. ಹುಂ, ಅಷ್ಟೆ. ಅದನ್ನೇನು ದೊಡ್ಡದು ಮಾಡುವುದು. ಕಾಲುಗೇಡು, ಬುದ್ಧಿಗೇಡು. ಯೋಚನೆಯನ್ನು ಅತ್ತ ಒತ್ತರಿಸುತ್ತೇನೆ– ಒತ್ತರಿಸಲು ಯತ್ನಿಸುತ್ತೇನೆ.

'ಅಲ್ಲಾ, ಹಾಗೆ ನಕ್ಕರಲ್ಲಾ ಮತ್ತೆ? ಅದು ಮಂದ ನಗೆ, Supressed laughter. ನನ್ನ ಬಳಿಯಲ್ಲಿಯೇ, ನನಗೇನೋ ಸಂಬಂಧಿಸಿದ್ದಂತೆ, ಅದು ನನ್ನಿಂದ ಮುಚ್ಚದೆಯೇ ಮುಚ್ಚಿದಂತೆ?

'ಆ?'

ಅದಕ್ಕೆ ಅರ್ಥವೇನಾದರೂ ಇರಬಹುದೇ? ಅದು ನನಗೇನಾದರೂ ಸಂಬಂಧಿಸಿರಬಹುದೇ– ನಿಜವಾಗಿ?

'ಏನೂ!'

"ಛೇ! ಇಲ್ಲ ಇಲ್ಲ, ಏನೂ ಇಲ್ಲ. Nonsense, pure nonsense. ಅದು ಹೇಗಾದೀತು, ಹ್ಹ! Sylly ಆ ಯೋಚನೆಯೂ ಸಲ್ಲದು. ಹೌದು."

ನಾನು ಮೇಲೇಳುತ್ತೇನೆ– ಅಲ್ಲಿ ಕುಳಿತಿದ್ದುದು ಸಾಕೆನಿಸಿ. ಮೇಲೆ ಮೋಡ ಮುಚ್ಚುತ್ತಿದೆ. ಅಬ್ಬ ಏನು ಸೆಕೆ! ಮೂಗು ಧಗೆ! ಮಳೆ ಬರುವ ಮುನ್ನಿನದು. ಷರಟಿನ ಗುಂಡಿಯನ್ನು ಬಿಚ್ಚಿಕೊಳ್ಳುತ್ತ ನಡೆಯುತ್ತೇನೆ.

ಅವರು ಯಾರು ಆ ಮಕ್ಕಳು? ನನಗೆ ತಿಳಿದವರು ಯಾರಾದರೂ ಇದ್ದರೆ ಅವರಲ್ಲಿ, ಗೊತ್ತಿಲ್ಲವಲ್ಲ? ಅತ್ತ ನೋಡಲಿಲ್ಲವಲ್ಲ. ನೋಡಿದ್ದರೆ ಚೆನ್ನಾಗಿತ್ತು.

ಈಗ ಪಾರ್ಕಿನ ಸುತ್ತ ಎಲ್ಲೆಲ್ಲೋ ದೃಷ್ಟಿ ಹರಿಸುತ್ತೇನೆ. ಅಂಥ ಗುಂಪು ಯಾವುದೂ ಕಾಣಿಸುವುದಿಲ್ಲ. ಆಗಲೇ ಎಲ್ಲೋ ಹೋಗಿಬಿಟ್ಟಿದ್ದಾರೆ.

ಹೌದು, ಅವರು ಯಾರೆಂದು ಗೊತ್ತಾಗಿದ್ದರೆ ಅವರು ಏಕೆ ನಕ್ಕರು, ಅದಕ್ಕೇನಾದರೂ ಅರ್ಥ ಇತ್ತೇ, ವಿಶೇಷ ಅರ್ಥವಿತ್ತೆ, ಅದು ನನಗೆ ಸಂಬಂಧಿಸಿತ್ತೆ ಎನ್ನುವುದಕ್ಕೆ ಸ್ವಲ್ಪ ಸುಳಿವೇನಾದರೂ ಕಂಡು ಬರುತ್ತಿತ್ತೇನೋ ಅಲ್ಲವೆ?

ಹ್ಹ, ಸುಳಿವೇನಿರುತ್ತದೆ, ಮಣ್ಣು! ಸಂಬಂಧವೂ ಇಲ್ಲ, ಸಕಲವೂ ಇಲ್ಲ, ಏನೂ ಇಲ್ಲ, ಯಾವುದೂ ಇಲ್ಲ. ಎಲ್ಲ ನನ್ನ ಬರಿ ಭ್ರಾಂತಿ...ಹ್ಞು ಸುಮ್ಮನಿರಬಾರದೇ ಈ ಯೋಚನೆಯನ್ನು ಬಿಟ್ಟು?

'ಆಗಲಿ, ಆಗಲಿ, ಮುಂದೇನಾದರೂ ಇನ್ನೊಂದು ಸಾರಿ ಅಂಥ ನಗು ಅಂಥವರಿಂದ ಕೇಳಿಸಿಗೀಳಿಸಿದರೆ ಕೂಡಲೇ ಅವರನ್ನು ನೋಡಿ ಕಾರಣವೇನೆಂದು ಕೇಳಿಬಿಟ್ಟರಾಯಿತಲ್ಲ, ಹೇಳುತ್ತಾರೆ. ಏನಾದರೂ ತಪ್ಪು ತಿಳುವಳಿಕೆ ಇದ್ದರೆ ಬಗೆಹರಿಸಿದರಾಯಿತು. ನಾನು ಸಭ್ಯಸ್ಥನೆಂದು ಖಚಿತಪಡಿಸಿದರಾಯಿತು.

ಹ್ಞು, ಕೇಳು, ಕೇಳು, ಚೆನ್ನಾಗಿರುತ್ತದೆ! ಅವರು ಯಾವ ಹೆಣ್ಣುಮಕ್ಕಳೋ. ಎಂಥ ಹೆಣ್ಣುಮಕ್ಕಳೋ ಏನೋ? ಅವರು ಏತಕ್ಕಾಗಿ ನಕ್ಕರೋ ಮುಂದೆಯೂ ಅಂಥವರು ಏತಕ್ಕಾಗಿ ನಗುತ್ತಾರೆಯೋ ಏನೋ. ಸುಮ್ಮನೆ ಗಂಭೀರವಾಗಿ ಇರಲಾರದೆ ಅದನ್ನು ಅವರಿಂದ ಪೆದ್ದುಪೆದ್ದಾಗಿ ವಿಚಾರಿಸ ಹೋಗಿ ನಿಜವಾಗಿಯೂ ಮೂರ್ಖನಾಗಲೇನು?

ಕಣ್ಣು ಮುಚ್ಚಿಕೊಂಡು, ಬಾಯಿ ಮುಚ್ಚಿಕೊಂಡು ಇರಬಾರದೇನೋ. ಆಮೇಲೆ ಅದೇ ಒಂದು ಹಾಸ್ಯಾಸ್ಪದ ಪ್ರಕರಣ ಹಗರಣವಾಗಬೇಕೋ– ಏನೋ. ದಾರಿಯಲ್ಲಿ ಹೋಗುವ ಮಾರಿಯನ್ನು ಮನೆ ಹೊಕ್ಕು ಹೋಗು ಎಂದ ಹಾಗೆ? ಇಲ್ಲವೇ ಇಲ್ಲದ್ದನ್ನು ನಾನೇ ಪ್ರಾರಂಭಿಸಬೇಕೆ?

ನಿಜ ನಿಜ ಅದು ಸರಿಯಲ್ಲ. ಹೌದು, ಆ ಅಪಾಯವೂ ಇದೆ – ನಗೆಪಾಟಲಾಗುವುದು. ಹ್ಞ, ಕಂಡ ಕಂಡ ಹೆಣ್ಣು ಮಕ್ಕಳನ್ನು ಮಾತನಾಡಿಸುವುದಕ್ಕಿಂತ – ಅದೂ ನಮ್ಮ ಬಿಗಿ ಸಂಕೋಚ ಸಂಶಯದ ಸಮಾಜದಲ್ಲಿ? ನನಗೆ ಎಷ್ಟು ವಯಸ್ಸಾಗಿದ್ದರೇನು. ಉಹುಂ ಉಹುಂ ಆದಾಗದು ಆಗದು. ಒಂದು ವೇಳೆ ಅವರೇ ಮಾತಾಡಿಸಿಕೊಂಡು ಬಂದರೆ ಆಗಬಹುದು, ನಾನು ಹೇಳಿಕೇಳಿ ಮಾಡಬಹುದು, ಎಲ್ಲ ಸರಿ ಹೋಗುತ್ತದೆ. ಆ ದಿಟ್ಟ ಮಗು ಯಾರನ್ನಾದರೂ ಮಾತಾಡಿಸಬಲ್ಲವಳು. ಅಲ್ಲೊಂದು ಇಲ್ಲೊಂದು ಇದ್ದರೂ ಇರಬಹುದು – ಅದೂ ಅವರು ಗುಂಪಿನಲ್ಲಿದ್ದಾಗ. ಆದರೂ ಹೇಳುವಂತಿಲ್ಲ. ಹೇಳಲಾರದೆ ಅವರು ಮನಸ್ಸಿನಲ್ಲೇ ಏನೇನನ್ನೋ ಕಲ್ಪಿಸಿಕೊಂಡು ಹೇಗೆ ಹೇಗೋ ನಡೆದುಕೊಳ್ಳುತ್ತಿದ್ದರೆ– ಈಗಿನಂತೆ?

ಅಯ್ಯೋ ಅವರು ಏನನ್ನು ಕಲ್ಪಿಸಿಕೊಂಡರು? ಹೇಗೆ ನಡೆದುಕೊಂಡರು? ನಾನೇಕೆ ಹೀಗೆ ಚಡಪಡಿಸುತ್ತಿದ್ದೇನೆ– ಕಳ್ಳ ಮನಸ್ಸು ಹುಳ್ಳ ಹುಳ್ಳಗೆ ಎನ್ನುವಂತೆ?

ಏನು ಕಳ್ಳ ಮನಸ್ಸೇ? ಹುಳ್ಳ ಹುಳ್ಳಗೆ? ಅದಕ್ಕೆ ಆಧಾರವಾದರೂ ಏನಿದೆ? ಏನಿದೆ? ಆ?

ಏನೂ ಇಲ್ಲ, ಏನೇನೂ ಇಲ್ಲ.

ಏನೂ ಇಲ್ಲವೆ? ಇಲ್ಲವೇ ಇಲ್ಲವೆ? ಯೋಚಿಸೋಣ, ಸ್ವಲ್ಪ ಚೆನ್ನಾಗಿ ಯೋಚಿಸಿ ನೋಡೋಣ. ಆ ಆ ಆ.

'ಹ್ಞಾ!... ತಾಳು ತಾಳು!... ಇರಬಹುದೆ? ಇರಬಹುದೆ ಅದು? ಆ?'

ವಿಪರೀತ ಸೆಕೆ, ಮೈ ಬೆವರುತ್ತಿದೆ. ಕೈಚೀಲವನ್ನು ತೆಗೆದು ಕತ್ತು, ಎದೆ, ಹಣೆಗಳನ್ನು ಒರೆಸಿಕೊಳ್ಳುತ್ತೇನೆ. ಎಡಗಡೆ ಬ್ಯಾಂಡ್‌ಸ್ಟ್ಯಾಂಡ್ ವೇದಿಕೆಯ ಮೆಟ್ಟಲುಗಳ ಪಕ್ಕದ ಸಿಮೆಂಟ್ ಗಾರೆ ಇಳಿಜಾರು ದಿಂಡಿನ ಮೇಲೆ ತಾಯಿಯರು ಪುಟ್ಟ ಪುಟ್ಟ ಬಣ್ಣದ ಚಿಟ್ಟೆ ಮಕ್ಕಳನ್ನು ಜಾರಿಸುವುದೂ, ವಿಸ್ತಾರ ಹುಲ್ಲು ಮೈದಾನದ ಮೇಲೆ ಚಿಕ್ಕ ಹುಡುಗರು ಹಿಡಿದಾಡುತ್ತಿರುವುದನ್ನೂ ಪೊದೆಗಿಡಗಳ ಹಿಂದೆ ರೇಡಿಯೋ ರೂಂ ಸುತ್ತ ಐಸ್‌ಪಾಯ್ಸ್ ಆಡುತ್ತಿರುವುದೂ, ಬಲಗಡೆ ಉದ್ದ ಕಲ್ಲುಬೆಂಚಿನ ಮೇಲೆ ರಸ್ತೆಯ ಬಸ್ ಸ್ಟಾಪಿಗೆ ಇದಿರಾಗಿ ಒತ್ತಾಗಿ ಕುಳಿತ ಪೆನ್‌ಷನ್ ದಾರರೂ, ಅಲ್ಲಲ್ಲಿ ಎಲ್ಲೆಲ್ಲೂ ಹುಲ್ಲಿನ ಮೇಲೆ ಕುಳಿತು ಕಡಲೇಕಾಯಿ ತಿನ್ನುತ್ತಿರುವ ಸಣ್ಣ ಸಣ್ಣ



ಸಂಸಾರ ಗುಂಪುಗಳೂ, ದಾರಿಯಲ್ಲಿ ಒಂಟಿಯೊಂಟಿ ಒಟ್ಟೊಟ್ಟಿಗೆ ಓಡಾಡುವವರೂ ಈಗ ನನ್ನ ಕಣ್ಣಿಗೆ ಬೀಳುತ್ತಿಲ್ಲ – ಎಂದೂ ಬೀಳುತ್ತಿದ್ದಂತೆ. ಪಾರ್ಕಿನ ಗೇಟಿಗೇ ಬಂದು ದಾಟಿ ಬಿಟ್ಟಿದ್ದೇನೆ. ನನ್ನದು ಈಗ ಒಳದೃಷ್ಟಿ. ಹಿಂದೆ ಹಿಂದೆ ಸುರುಳಿ ಸುರುಳಿ ಬಿಚ್ಚಿಕೊಳ್ಳುತ್ತಿದೆ. ಅಡ್ಡ ರಸ್ತೆಯನ್ನು ದಾಯ್ದು ಕೃಷ್ಣರಾಜ ರಸ್ತೆಯ ಪಕ್ಕದ ಪಾದ ದಾರಿಯಲ್ಲಿ ನಡೆಯುತ್ತಿರುವುದು ಕೇವಲ ಯಾಂತ್ರಿಕ.

ಹ್ಞಾ – – ಇರಬಹುದೆ ಅದು ?

ಮತ್ತೆ ಕೇಳಿಕೊಳ್ಳುತ್ತೇನೆ.

ಅದು– ಆ ಸಿನಿಮಾ ಸಂದರ್ಭದಲ್ಲೇನಾದರೂ ಅವಿವೇಕವಾಯಿತೆ? ಅ?

'ಕೆಲವು ದಿನಗಳ ಕೆಳಗೆ ನನ್ನ ಪುಸ್ತಕ "ಹಂಬಲ"ವನ್ನು ಚಿತ್ರೀಕರಿಸುವ ಕರಾರಿಗೆ ರುಜು ಹಾಕಿದಾಗ ಆ ಚಿತ್ರದ ನಟ–ನಟಿಯರ ಆಯ್ಕೆಯ ವಿಚಾರವೂ ಬಂದಿತ್ತು. ಚಿತ್ರ ತಯಾರಕರು ಮುಖ್ಯ ನಾಯಕ ಗಂಗಾಧರನ ಪಾತ್ರಕ್ಕೆ ರಾಜಕುಮಾರ್ ಅವರೇ ಆಗಬೇಕು, ಇಲ್ಲದಿದ್ದರೆ ಚಿತ್ರ ಪ್ರಜಾರಂಜನೆಯನ್ನೂ, ಹಣವನ್ನೂ ಗಳಿಸುವುದಿಲ್ಲ ಎಂದು ತೀರ್ಮಾನ ಹೇಳಿದ್ದರು. ಹಾಗೂ ಶೀವಿಯ ಹೆಣ್ಣು ಭಾಗೀರಥಿಯ ಪಾತ್ರಕ್ಕೆ ರಾಜಕುಮಾರ್ ಜೋಡಿ ಭಾರತಿ, ಒರಿಯಣ್ಣನವರ ಪಾತ್ರಕ್ಕೆ ಅಶ್ವತ್ಥ, ನಿಮಾಣಯ್ಯನಾಗಿ ಬಾಲಕೃಷ್ಣ, ನಂಜತ್ತೆಯಾಗಿ ಅನ್ನಪೂರ್ಣಮ್ಮ ಇತ್ಯಾದಿ ಇತ್ಯಾದಿ ಈಗಿನ ನಟ ನಟಿಯರ ಪಟ್ಟಿಯೇ ಆಗಿತ್ತು. ಆದರೆ ನಾನು ಹೊಸ ಮುಖಗಳನ್ನು ಆರಿಸಬೇಕೆಂದು ಸಲಹೆ ಮಾಡಿ ತಯಾರಕರು ಆ ಮುಖಗಳ ಆಯ್ಕೆಗೆ ಸ್ಕೌಟ್‌ಗಳನ್ನು (ಶೋಧಕರನ್ನು) ನಿಯಮಿಸಬೇಕೆಂದು ಸೂಚಿಸಿದ್ದೆ. ಅವರು ಕೆಲವೊಂದು ಹೆಸರುಗಳನ್ನು ಬಿಡಲು ಇಷ್ಟಪಡದಿದ್ದರೂ ಇನ್ನು ಕೆಲವು ಪಾತ್ರಗಳಿಗೆ ಹೊಸಬರನ್ನು ಹುಡುಕುವುದರಲ್ಲಿ ಆಸಕ್ತಿ ತೋರಿಸಿದರು. ಆಗಲೇ ನಾನು ನಮ್ಮ ನೆರೆಯಲ್ಲಿದ್ದು ಹವ್ಯಾಸಿ ನಾಟಕಗಳಲ್ಲಿ ಪಾತ್ರ ವಹಿಸುತ್ತಿದ್ದ ಗೃಹಿಣಿಯೊಬ್ಬರನ್ನು ಸೂಚಿಸಿದ್ದೆ. ತಯಾರಕರು ಕೂಡಲೆ ಉಭಯ ಮಿತ್ರರೊಂದಿಗೆ ಅವರಲ್ಲಿಗೆ ಹೋಗಿ ವಿಚಾರಿಸಿಕೊಂಡು ಬಂದಿದ್ದರು. ಆದೇನು ಕಾರಣವೋ ಆ ತಾಯಿ ಒಪ್ಪಿಕೊಳ್ಳಲಿಲ್ಲ. ತಯಾರಕರು ಬೀಳ್ಕೊಳ್ಳುವಾಗ ಈ ಶೋಧನೆಯ ಕೆಲಸ ನಡೆಯುತ್ತಿರುವುದೆಂದೂ, ಯಾರಾದರೂ ಸಿಕ್ಕಿದರೆ ಅವರಿಗೆ ಫಿಲ್ಮ್ ಟೆಸ್ಟ್ (ಚಿತ್ರ ಪರೀಕ್ಷೆ) ಕೊಡಲಾಗುವುದೆಂದೂ ಮಾತಾಗಿತ್ತು. ಅನಂತರ ದಾರಿಗಳಲ್ಲಿ ನನ್ನ ಪರೀಕ್ಷಾ ದೃಷ್ಟಿ ಅತ್ತ ಇತ್ತ ಅಲ್ಲಿ ಇಲ್ಲಿ ಸ್ವಲ್ಪ ಹರಿದಾಡಿತ್ತಲ್ಲವೆ? ಸ್ವಲ್ಪ ಮೋಜಿನ ಹವ್ಯಾಸವೂ ಆಗಿತ್ತಲ್ಲ ?

'ಹಾಗಾದರೆ ನನ್ನ ಶೋಧನೆಯನ್ನು ವಿಪರೀತ ಚೆನ್ನಾಗಿಯೇ ಮಾಡಿಬಿಟ್ಟಿದ್ದೇನೆನೋ! ಅವರಿವರಲ್ಲಿ ಅದೂ ಯಾರು ಯಾರೋ ಹೆಣ್ಣು ಮಕ್ಕಳೂ ಸೇರಿ, ಅಪಾರ್ಥಕ್ಕೇ ಎಡೆಗೊಡುವಂತೆಯೂ… ಹ್ಛ!

'ಅಥವಾ…ಹುಂ, ಅಥವಾ ಸಾಮಾನ್ಯವಾಗಿ ಗಂಡು ಹೆಣ್ಣುಗಳಿಗೆ ಗಂಟು ಹಾಕುತ್ತಿರುವ ವೃದ್ಧರ ಹವ್ಯಾಸಕ್ಕೆ ತಕ್ಕಂತೆ, ನನ್ನ ಮೊಮ್ಮಗನಿಗೆ ರಾಷ್ಟ್ರಾಧ್ಯಕ್ಷ ರಾಧಾಕೃಷ್ಣನ್‌ರವರ ನೇರ ರೀತಿಯಲ್ಲಿಯೇ ಅವರು ಕಾಲೇಜ್ ಉತ್ಸವವೊಂದರ ಸಮಯದಲ್ಲಿ ಕಣ್ಣಿಗೆ ಬಿದ್ದ ಹುಡುಗಿಯನ್ನು ವಿಚಾರಿಸಿ, ಅವಳ ತಂದೆ ತಾಯಿಗಳನ್ನು ಕಂಡು, ಅವಳನ್ನು ತಮ್ಮ ಮಗನಿಗೆ ತಂದುಕೊಂಡಿದ್ದರೆಂದು ಯಾರೋ ಹೇಳಿದ್ದರಲ್ಲ ಹುಂ, ಆ ನೇರ ರೀತಿಯಲ್ಲಿಯೂ ವಧುವೊಂದನ್ನು ಅರಸುವ ಯತ್ನದಲ್ಲಿ ಎಡವಿದ್ದೇನೋ?

'ಅಯ್ಯೋ, ಇದರಲ್ಲಿ ಎಡವಿಗೆ ಅಪಾರ್ಥಕ್ಕೆ ಎಡೆಯೆಲ್ಲಿ? ಅಸಂಪ್ರದಾಯಕವಾದರೂ ಹೀಗೆಲ್ಲ ನಟ ನಟಿಯರಿಗಾಗಿ, ವಧೂವರರಿಗಾಗಿ ಯತ್ನಗಳು ನಡೆಯುತ್ತವೆಯಲ್ಲ, ಪಾಶ್ಚಾತ್ಯ ಸಮಾಜದ ಮಾತಿರಲಿ, ನಮ್ಮ ನಷ್ಟೆ ಸಮಾಜದಲ್ಲೂ. ಹಾಗಿಲ್ಲದಿದ್ದರೆ ಅಷ್ಟೊಂದು ಜನ ಹವ್ಯಾಸಿ ನಟ ನಟಿಯರು, ಅನಂತರ ಔದ್ಯೋಗಿಕ ಕಲಾವಿದರಾದವರು ಉದಾಹರಣೆಗೆ ನಮ್ಮಲ್ಲೇ ಬಿಟ್ಟರು ಸರೋಜಾದೇವಿಯೋ ಆಯಿತು, ಎಲ್. ವಿ. ಶಾರದಾನೇ ಆಯಿತು – ಸಿನಿಮಾರಂಗದಲ್ಲಿರುತ್ತಿದ್ದರು? ಮೊನ್ನೆ ಮೊನ್ನೆ ನಿರ್ದೇಶಕ ಸತ್ಯು 'ಗರಂ ಹವಾ' ಚಿತ್ರವನ್ನು ಆಗ್ರಾದಲ್ಲಿ ಶೂಟ್ ಮಾಡು

ತ್ತಿದ್ದಾಗ ಮನೆ ಬಾಗಿಲಲ್ಲಿ ಕಂಡ ಅಪರಿಚಿತಳೊಬ್ಬಳನ್ನು ಸಿನಿಮಾದಲ್ಲಿ ಪಾರ್ಟು ಮಾಡುತ್ತೀಯಾ ಎಂದು ಕೇಳಿದರಂತೆ. ಅವಳು ಒಪ್ಪಿಕೊಂಡು ಪಾತ್ರ ವಹಿಸಿಯೇಬಿಟ್ಟಳಂತೆ. ವಿಚಿತ್ರವೆಂದರೆ ಅವಳು ಸಿನಿಮಾ ಸೇರಲು ಎಷ್ಟೋ ಕಾಲದಿಂದ ಆಸೆಪಡುತ್ತಿದ್ದು, ನಮ್ಮವರಲ್ಲೂ ಹಲವರು ಒಳಗೊಳಗೇ ಹಂಬಲಿಸುವಂತೆ ಬೊಂಬಾಯಿಗೆ ಹೋಗಿ ಕೂಡ ಯತ್ನಿಸಿ ಕೈಯಿನ ಕಾಸೆಲ್ಲವನ್ನೂ ಖರ್ಚು ಮಾಡಿಕೊಂಡು ವಿಫಲರಾಗಿ ಹಿಂದಿರುಗಿ ಬಂದಿದ್ದರಂತೆ.

‘ನಿಜಾ, ಅದೆಲ್ಲ ನಿಜಾ...ಆದರೆ ನಾನು ರಾಷ್ಟ್ರಾಧ್ಯಕ್ಷನೂ ಅಲ್ಲ, ಚಿತ್ರ ನಿರ್ದೇಶಕ ತಯಾರಕನೂ ಅಲ್ಲ, ಈ ಸಮಾಜದಲ್ಲಿ ಕಂಡಂತೆ ಹೇಳಿಕೊಳ್ಳುವ ಗಣ್ಯನೂ ಅಲ್ಲ, ಕೇವಲ ಶ್ರೀಸಾಮಾನ್ಯ. ಅಬ್ಬಬ್ಬಾ ಎಂದರೆ ಚಿತ್ರತಯಾರಕರೊಬ್ಬರ ಪರಿಚಯವಿದ್ದು ಸಹಾಯ ಮಾಡಲೆತ್ನಿಸುತ್ತಿದ್ದ ಒಬ್ಬ ಬರಹಗಾರ ಅಷ್ಟೆ. ಅದೂ ಒಂದೆರಡು ವರ್ಷ ಈ ಊರಿನಲ್ಲಿ ಇರಬೇಕಾಗಿ ಬಂದಿದ್ದವನು, ಸ್ವಪ್ರಚಾರ ಮಾಡಿಕೊಳ್ಳಲು ಎಲ್ಲೂ ಎಂದೂ ಇಷ್ಟಪಡದೆ ಬೇಕಾಗಿಯೇ ಅಜ್ಞಾತನಾಗಿರುವವನು. ನನ್ನಲ್ಲಿದ್ದ ಉದ್ದೇಶವಾದರೂ ಇತರರಿಗೆ ಹೇಗೆ ಗೊತ್ತಾಗಬೇಕು? ರಾಧಾಕೃಷ್ಣನ್ ಸತ್ಯ ಎಂದರೆ ಉದ್ದೇಶವನ್ನು ತಿಳಿಸಿಬಿಟ್ಟಿದ್ದರು–ಸಂದೇಹಕ್ಕೆ ಕಾರಣವೇ ಇಲ್ಲದಂತೆ. ನಾನುವರೂ ಅರಸುವ ಯೋಚನೆ ಮಾಡಿದ್ದರೂ ಮಾತನಾಡುವ ಧೈರ್ಯ ಮೂಡದೆ ನುಂಗಿಕೊಂಡು ಬಿಟ್ಟಿದ್ದೆನಲ್ಲ. ಪರೋಕ್ಷವಾಗಿ ಅವರಿವರಲ್ಲಿ ಮಾಡಿದ್ದ ಪ್ರಸ್ತಾಪವನ್ನೂ ಅವರು ಮೊಳಕೆಯಲ್ಲೇ ಚಿಗಟಹಾಕಿಬಿಟ್ಟಿದ್ದರು. ನಮ್ಮ ಜನ, ಅಂದರೆ ಆ ಮಕ್ಕಳ ತಂದೆತಾಯಿಯರು ಒಪ್ಪುವುದಿಲ್ಲವೆಂದು ಪ್ರಯತ್ನಿಸಿಯೇ ಇರಲಿಲ್ಲ. ಹೌದಲ್ಲ, ಅವರು ಅಂದದ್ದು ನಿಜವೇ. ನಾವು ನಟನಟಿಯರ ದರ್ಶನಕ್ಕಾಗಿ ಮೈಲಿಗಟ್ಟಲೆ ಹೋಗುತ್ತೇವೆ, ಗಂಟೆಗಟ್ಟಲೆ ನಿಂತು ಕಾಯುತ್ತೇವೆ, ಅವರ ಹಾವ ಭಾವ ಮಾತುಕತೆ ವೇಷ ಭೂಷಣ ಅಲಂಕಾರ ಫ್ಯಾಷನ್ ಅನುಸರಿಸುತ್ತೇವೆ. ಆದರೆ ನಾವು ನಮ್ಮ ಮಕ್ಕಳು ನಟಿಸುವ ಮಾತು ಬಂದರೆ ಇನ್ನು ಊಹುಂ ಉಂಟೆ ಎಲ್ಲಾದರೂ ಹೇಪಪ್ಪಾ ಎನ್ನುತ್ತೇವೆ, ಬಹಳವಾಗಿ. ಹಾಗೂ ನಾನು ಆ ಯತ್ನವನ್ನು ಪೂರ್ತಿಯಾಗಿ ಬಿಟ್ಟಿಲ್ಲ. ಸಕಾಲದಲ್ಲಿ ಅಂದರೆ ಚಿತ್ರತಯಾರಿಕೆಯ ಕಾಲ ಸಮೀಪಿಸಿದಾಗ ಇಲ್ಲಿಯ ಸ್ಥಳವಂದಿಗ ಸುಬ್ಬಣ್ಣನವರ ಮೂಲಕ ವಿಚಾರಿಸೋಣವೆಂದಿದ್ದೇನಲ್ಲವೆ? ನೋಡೋಣ ಸಧ್ಯಕ್ಕಂತೂ ಆದಿಲ್ಲ. ಆಗಲಿ ಹೀಗಿಷ್ಟು ಉದ್ದೇಶವೇ ತಿಳಿಯದಿದ್ದರೆ ಇವರು ಇನ್ನೇನು ಬೇಕಾದರೂ ತಿಳಿಯಬಹುದು, ಆಗಲೂಬಹುದು, ಅಲ್ಲವೆ?

ಅಯ್ಯೋ ಇದೇನು ನನ್ನ ಭಾಗವತ ಪುರಾಣ ಏನಾಗಿದೆಯೆಂದು ಇಷ್ಟು ಏನೇನೋ ಚಿಂತೆ? ಯಾರೋ ಮಕ್ಕಳು ಏಕೋ ನಕ್ಕರು, ಅದನ್ನು ಅದ್ಭುತಾಕಾರವಾಗಿ ಬೆಟ್ಟದಂತೆ ಬೆಳೆಸುವುದೆ? ಏನು ಹುಚ್ಚು! ಛಿ. ಬಿಡೋಣ ಅತ್ತ, ಅದನ್ನು. ಹುಂ, ಹೌದು ?

ಆದರೆ ಮಕ್ಕಳು ನನ್ನ ಬೆನ್ನಿನ ಹಿಂದೆಯೇ ನಗುವ ಪ್ರಮೇಯವೇನಿತ್ತು. ನಗು ವಿಶೇಷ ರೀತಿಯವಾಗಿರಲಿಲ್ಲವೆ? ನನಗೆ ಕೇಳಿಸಲೆಂದೇ ನಕ್ಕಂತೆ ಭಾಸವಾಯಿತಲ್ಲ ಮತ್ತೆ?

ರಾಮ ರಾಮಾ ಮತ್ತೆ ಅದೇ, ಅದದೇ ಮತ್ತು ಹಗ್ಗದ ಬಂಧನ. ರೇಷ್ಮೆ ಹುಳುವಿನ ನೆಯ್ಗೆ. ಛಿ!

ನಾನೀಗ ರಾಮಕೃಷ್ಣ ಮಂದಿರದ ಬಳಿಗೆ ಬಂದಿರುವುದು ತಿಳಿಯುತ್ತದೆ. ಎಷ್ಟೋ ಜನರಂತೆ ಒಳಗೆ ಹೋಗಿ ಪರಮಹಂಸರ ದರ್ಶನ ಮಾಡಿಕೊಂಡು ಕೈಮುಗಿದು ಬರುತ್ತೇನೆ. ಅಹಾ ಈತ ಎಂಥ ಜಿತೇಂದ್ರಿಯ, ಶಾರದಾ ಮಣಿದೇವಿಯನ್ನು ಮದುವೆಯಾಗಿದ್ದರೂ ಆ ಪ್ರಾಯದಿಂದಲೂ ಬ್ರಹ್ಮಚರ್ಯವನ್ನು ಪಾಲಿಸಿಕೊಂಡು ಬಂದು ಬಿಟ್ಟನಲ್ಲ, ಕಡೆಯವರೆಗೂ ಆ ತಾಯಿಯೇ ಹುಡುಗಿಯ ಹೆಣ್ಣಿನ ನವ ವಧುವಿನ ಹೃದಯದಲ್ಲಿ ಎಷ್ಟೊಂದು ಆಸೆಗಳನ್ನು ತುಂಬಿಕೊಂಡಿದ್ದಳೋ, ಅವೆಲ್ಲವನ್ನೂ ಆ ಹೃದಯದಲ್ಲೇ ಸಮಾಧಿ ಮಾಡಿ ತಾನೂ ಸಂನ್ಯಾಸಿಯಂತೆಯೇ ಇದ್ದುಬಿಟ್ಟಳಲ್ಲ. ಓ, ನಿಮಗೆ ನಮಸ್ಕಾರ ! ನಮಸ್ಕಾರ ! ನಾವು ಸಣ್ಣವರು ಲೌಕಿಕರು, ಎಷ್ಟು ದುರ್ಬಲರು! ಎಂದುಕೊಳ್ಳುತ್ತೇನೆ. ಹಾಗೆಯೇ ನಮ್ಮ ಸಂಸಾರದ

ಎಂದು ಈಗಲೂ ಅಂದುಕೊಳ್ಳುತ್ತೇನೆ, ಹಿಂದೆ ಎಷ್ಟೋ ಬಾರಿ ಅಂದುಕೊಂಡಿದ್ದಂತೆ. ಆದರೆ ಅವರು ಯಾರೋ ನಿವೃತ್ತ ಅಧಿಕಾರಿಗಳಿರಬೇಕು, ಅವರೇಕೆ ಸಿನಿಮಾದಲ್ಲಿ ಪಾತ್ರ ವಹಿಸಲು ಒಪ್ಪಿಯಾರು ಹ್ಞ! ಪಾತ್ರವನ್ನು ನಿರ್ವಹಿಸಬೇಕಲ್ಲ, ಆಕಾರದ ಜತೆಗೆ ಉಹುಂ, ಅದು ಆಗದ ಹೋಗದ ಮಾತು. ಇಷ್ಟಕ್ಕೂ ಚಿತ್ರ ತಯಾರಕರು ನಟ ಬಾಲಕೃಷ್ಣನನ್ನು ಬಿಡುವಂತೆಯೇ ಇಲ್ಲ ಎಂದಿದ್ದಾರೆ. ಅಂದ ಮೇಲೆ ಬಾಲಕೃಷ್ಣ ನರಸಿಂಹರಾಜು ಜತೆಯೇ ಖಂಡಿತ, ಅದು ಸರಿಯಾಗಿಯೂ ಇರುತ್ತದೆ ಎಂದುಕೊಳ್ಳುತ್ತ ಹೆಜ್ಜೆ ಹಾಕುತ್ತೇನೆ.

ಹರಿಹರ ರಸ್ತೆ ತಿರುವಿನಲ್ಲಿ ಎದುರಿಗೆ ಸ್ವಲ್ಪ ದೂರದಲ್ಲಿ ಬೈಸಿಕಲ್ ಮೇಲೆ ಆ ಲಕ್ಷಣ ಭಾವಯುತ ಮುಖದ ಚುರುಕು ಯುವಕ ದಿನಸಿ ಅಂಗಡಿಯವನು ಬರುತ್ತಿದ್ದಾನೆ. ಇವನನ್ನು ನೋಡಿದಾಗಲೆಲ್ಲ ಇವನಿಗೆ ಸ್ವಲ್ಪ ತಯಾರಿಕೊಟ್ಟರೆ ಮುಖ್ಯನಾಯಕ ಗಂಗಾಧರನ ಪಾತ್ರವನ್ನು ನಿರ್ವಹಿಸಿಯಾನು ಎನ್ನಿಸಿದೆ. ಆದರೆ ನಟ ರಾಜ್‌ಕುಮಾರ್ ಇಲ್ಲದೆ ಚಿತ್ರವಾಗುವಂತಿಲ್ಲವಲ್ಲ, ಚಿತ್ರ ತಯಾರಕರ ಪ್ರಕಾರ, ಅಂದ ಮೇಲೆ ಇವನು ವೀರಪ್ಪನ ಪಾರ್ಟು ಮಾಡಬಹುದು ಎಂದುಕೊಂಡಿದ್ದೇನೆ. ಇವನು ಅಂಗಡಿಯಲ್ಲಿದ್ದಾಗಲೂ ಮಯೂರ, ಸುಧಾ, ಕಸ್ತೂರಿ ಮುಂತಾದ ಪತ್ರಿಕೆಗಳನ್ನು ಓದುತ್ತಿರುವುದು ಅವನು ಓದಿನಲ್ಲಿ ಅಭಿರುಚಿ ಇರುವ ಸುಸಂಸ್ಕೃತ. ಬರಿ ವ್ಯಾಪಾರಿಯಲ್ಲ ಎಂದು ಸೂಚಿಸುತ್ತದೆ. ಒಳ್ಳೆಯದೇ ಆಯಿತು. ವೀರಪ್ಪನೂ ಸುಸಂಸ್ಕೃತ ವ್ಯಾಪಾರಿಯೇ. ನಿಜ, ಇವನೊಡನೆ ವ್ಯಾಪಾರದ ನಾಲ್ಕು ಮಾತನಲ್ಲದೆ ಹೆಚ್ಚೇನನ್ನೂ ಇನ್ನೂ ಆಡಿಲ್ಲ. ಆದರೆ ಸಮಯ ಬಂದಾಗ ವಿಚಾರಿಸಬಹುದು. ಹೇಗೂ ಗಂಡಸು. ಹೆಣ್ಣು ಮಕ್ಕಳನ್ನು ವಿಚಾರಿಸುವ ಸೂಕ್ಷ್ಮತೆ ತೊಂದರೆಗಳಿರುವುದಿಲ್ಲವಲ್ಲ ಎಂದುಕೊಂಡು ಕಾಲ ಕಾಯುತ್ತಿದ್ದೇನೆ. ಅವನು ಹತ್ತಿರ ಬಂದು ಹಾಯ್ದು ಮುಂದೆ ಹೋಗುತ್ತಾನೆ ನನ್ನನ್ನು ನೋಡುತ್ತ.

'ಅರೆರೆ, ಇವನ ಮುಖದ ಮೇಲೂ ಕೆನ್ನೆ ನುಕ್ಕು ತಿಂದ ದೊಡ್ಡ ನಗು! ಹುಂ, ಅವನೂ ನನ್ನನ್ನು ನೋಡಿಯೇ—ಇರಬೇಕು. ಹೌದು. ನನ್ನನ್ನು ನೋಡಿಯೇ. ಇದೇನು ನನ್ನ ಮುಖದಲ್ಲೇನಾದರೆ. ಕೋತಿ ಕುಣಿಯುತ್ತಿದೆಯೆ?'

ಮುಖವನ್ನು ಚೌಕದಿಂದ ಒರೆಸಿಕೊಳ್ಳುತ್ತೇನೆ ಕನ್ನಡಿಯಲ್ಲಿ ನೋಡಿಕೊಳ್ಳಬೇಕೆನ್ನಿಸುತ್ತದೆ. ಆದರೆ ಹೆಂಗಸರ ವ್ಯಾನಿಟಿ ಬ್ಯಾಗ್ ಅನುಕೂಲ ನಮಗೆ ಗಂಡಸರಿಗೆ ಇಲ್ಲವಲ್ಲ!

ಊಹುಂ ಮುಖದಲ್ಲೇನೂ ಇಲ್ಲ. ಈ ನುಕ್ಕು ಬಿದ್ದ ಮುಖದಲ್ಲೇನಿರುತ್ತದೆ, ಅಂಥಾದ್ದು. ಇತರರು ಗಮನಿಸುವಂಥಾದ್ದು...ಮತ್ತೆ...ಮತ್ತೇನು ನನ್ನ ಬಗ್ಗೆ ಏನೋ ಕಲ್ಪನೆಯಿಂದಲೇ ಅವಿಚಾರ ಕಲ್ಪನೆಯಿಂದಲೇ ನಕ್ಕಿರಬೇಕು. ನಿಜವೆ ನಿಜವೆ ಇದೂ ನನ್ನ ಬರಿ ಊಹಾಪೋಹವೋ? ಇಲ್ಲ, ಅವನು ನನ್ನನ್ನು ನೋಡಿಯೇ ನಕ್ಕ?

ಅಬ್ಬ, ಎಷ್ಟು ಅಹಿತ ಸೆಕೆ ಇವತ್ತು! ಮಳೆ ಬೇಗ ಬಾರದೆ, ಮೋಡ ಕವಿಯುತ್ತಿದೆಯಲ್ಲ. ಕವಿಕವಿದಷ್ಟೂ ಹೆಚ್ಚು ಹೆಚ್ಚು ಧಗೆ?

ಕೈಚೌಕದಿಂದ ಬೀಸಿ ಗಾಳಿ ಹಾಕಿಕೊಳ್ಳುತ್ತ ನಡೆಯುತ್ತೇನೆ.

ಥೂ ಧೂಳು, ಧೂಳು. ಬರಿಯ ಧೂಳು, ಹಾಳು ಲಾರಿ ಬಸ್ಸುಗಳು! ಊರಿನ ಧೂಳೆಲ್ಲ ನನ್ನ ಕಡೆಗೇ ಬರುತ್ತಿದೆ! ಚೌಕದಿಂದ ಮೂಗು ಮುಚ್ಚಿಕೊಳ್ಳುತ್ತೇನೆ. ದಾರಿಯ ಇನ್ನೊಂದು ಕಡೆಗೆ ದಾಟಿಕೊಳ್ಳುತ್ತೇನೆ.

ಮೂರನೇ ರಸ್ತೆಯ ಬಳಿ ಬಸ್ ಸ್ಟಾಪ್ ಬೆಂಚಿನ ತುಂಬ ಒತ್ತಿ ಕುಳಿತ ಇನ್ನೊಂದು ಮಾಮೂಲಿ ಪೆನ್‌ಷನ್‌ದಾರರ ಸಂಜೆ ಹರಟೆ ಸಭೆ ಸೇರಿದೆ. ನಾನು ಅವರ ಮುಂದೆ ಹಾಯುವಾಗ ಅವರಲ್ಲಿ ಒಬ್ಬರು ತಮ್ಮ ದಪ್ಪ ಕನ್ನಡಕದ ಕಣ್ಣನ್ನೂ ತಲೆಯನ್ನೂ ಮೇಲೆತ್ತಿ ನೋಡುತ್ತಾರೆ. ಆ ಕೊನೆಯಲ್ಲಿರುವ ಅಡ್ಡ ಗಂಧಾಕ್ಷತೆಯ ದಪ್ಪ ಶಾಸ್ತ್ರಿಗಳಲ್ಲಿ ಜೋತಿಷ್ಯ ಬ್ರಾಹ್ಮಣಾರ್ಥಿಗಳ ಕೀಳು ಪಾತ್ರದ ನಾರಪ್ಪನನ್ನು [illegible] ಕಂಡಿದ್ದೇನೆ. ಅವರ ಪಕ್ಕದಲ್ಲಿರುವ ಗಂಭೀರ ಮುಖದವರಲ್ಲಿ ಪುಸ್ತಕದ ಹಿರಿಯಣ್ಣನವರನ್ನು ಗುರುತಿಸಿದ್ದೇನೆ. ಆದರೆ ಆ ಪಾತ್ರಕ್ಕೆ ನಟ ಅಶ್ವತ್ಥ

ರವರನ್ನು ಬಿಟ್ಟರೆ ಬೇರೆಯಿಲ್ಲವೆಂದೂ ಒಪ್ಪಿಕೊಳ್ಳುತ್ತೇನೆ. ಹಾಗಾಗಿ ಇದೊಂದು ಬರಿಯ ಮನದ ಮೋಜಿನಾಟ ಮಾತ್ರ ನನಗೆ. ಆಲಿಸಿದರೆ ಈ ನಘಿಕರ ಮಾತಿನಲ್ಲಿ ದೈನಂದಿನ ಪತ್ರಿಕೆ ಓದಿನ ಸರ್ವಿಸ್ ಕೇಳಿಸುತ್ತವೆ. ಹೆಚ್ಚಿನ ಓದು ಚರ್ಚೆಗಳನ್ನು ಇವರು ಹಿಂದೆ ಬಿಟ್ಟುಬಿಟ್ಟಂತಿದೆ.

ಸಿಮ್ಲಾದ ಮಾಲ್ ಡೆಲ್ಲಿಯ ಕನಾಟ್ ಸರ್ಕಸ್ ಕಲಕತ್ತೆಯ ಚೌರಂಗಿಗಳಂತೆ ನಮ್ಮ ಹರಿಹರ ರಸ್ತೆಗೆ ಸಂಜೆ ಮೆರವಣಿಗೆಯ ಜನರಿಂದ ತುಂಬಿದೆ. ಮುಖ್ಯವಾಗಿ ಅಡ್ಡಸಾಲಿನ ಗಂಡು ಮಕ್ಕಳು, ಇವರೊಡನೆ ಸ್ಪರ್ಧಿಸುವ ಹೆಣ್ಣು ಮಕ್ಕಳಿಂದ ಶೋಭಿಸುತ್ತಿದೆ. ಎಲ್ಲೆಲ್ಲೂ ಕಾಣುವ ಇವರ ವರ್ಣನೆ ಅನಗತ್ಯ; ಒಂದೇ ಮಾತಿನಲ್ಲಿ ಆಕಾರ ಅಲಂಕಾರ ನಡೆನುಡಿ ಎಲ್ಲವೂ ವರ್ಣರಂಜಿತವೆಂದರೆ ಸಾಕು. ಇನ್ನು ಸಾಮಾನಿನ ಕೈಚೀಲ ಪ್ಲಾಸ್ಟಿಕ್ ಬುಟ್ಟಿಗಳನ್ನು ಹಿಡಿದ ಸಂಸಾರಿಗರು, ಸಣ್ಣ ಮಕ್ಕಳನ್ನು ಎತ್ತಿಕೊಂಡೋ ಕೈಹಿಡಿದು ನಡೆಯಿಸಿಕೊಂಡೋ ತಾಯಿತಂದೆ ಅಜ್ಜ ಅಜ್ಜಿ ಮೊದಲಾದವರು ಬಸ್ ಕಾಯುತ್ತಿರುವ ಇಳಿಯುತ್ತಿರುವವರು ದೇವರ ದರ್ಶನ ಪುರಾಣ ಪ್ರವಚನ ಕಾವ್ಯವಾಚನಗಳಿಗಾಗಿ ಹೊರಟ ಇಳಿವಯಸ್ಸಿನ ಶ್ರದ್ಧಾವಂತರು, ಸುತ್ತು ಕೋಟೆಯ ಜನರ ಮಧ್ಯೆ ಅಂಬೊಡೆ ಕರಿಯುವ ಅಂಗಡಿಗಳು, ಹಣ್ಣಿನ ಗಾಡಿಗಳು ದಾರಿ ತರಕಾರಿಯವರು ಹೀಗೆಲ್ಲವಂತೂ ಸರಿಯೇ ಸರಿ.

ಮುಂದೆ ನಡೆದು ಎಡಗಡೆ ಪೇಟೆಗೆ ದಾಟಿಕೊಳ್ಳುತ್ತಿರುವಲ್ಲಿ ವಿಶ್ವೇಶ್ವರಯ್ಯ ಸಂಧಿಸುತ್ತಾರೆ. ನನ್ನ ಹರ್ಷ ನಮಸ್ಕಾರಕ್ಕೆ ಗಂಭೀರ ಪ್ರತಿ ನಮಸ್ಕಾರ ಮಾಡಿ ನಿಲ್ಲದೆಯೇ ಹೊರಟು ಹೋಗುತ್ತಾರೆ.

ಎಲ ಎಲಾ ಇವರೇಕೆ ಹೀಗೆ ಮಾಡಿದರು ಇವತ್ತು ನಾವು ಸಾಕಾದಷ್ಟು ಬಳಕೆಯವರು, ಸಿಕ್ಕಾಗಲೆಲ್ಲ ನಿಂತು ನಗುನಗುತ್ತ ನಾಲ್ಕಾರು ಮಾತನ್ನಾದರೂ ಆಡದೆ ಹೋಗುವವರೇ ಅಲ್ಲ. ಈ ದಿನವೇನು ಇಷ್ಟು ಅವಸರ ಗಂಭೀರ?

'ಅಯ್ಯೋ ಅದಕ್ಕೇನು, ಏನೋ ತುರ್ತು ಕೆಲಸವಿರಬೇಕು...ಅಥವ ದೇವಸ್ಥಾನ ರಸ್ತೆಯ ಗದಿಬಿಡಿ ಜಾಗದಲ್ಲಿ ಸಂಧಿಸಿದೆವಲ್ಲ ಅಲ್ಲಿ ಹೇಗೆ ಮಾತಾಡುತ್ತ ನಿಲ್ಲುವುದೆಂದಿದ್ದರೂ ಇರಬಹುದು ಅಲ್ಲವೆ...ಯಾರೊಡನೆಯೋ ಅಸಮಾಧಾನ ಮಾಡಿಕೊಂಡು ಮೂಡ್ ಇಲ್ಲದಿರಬೇಕು... ಏನೋ ನೂರೆಂಟು ಕಾರಣವಿರಬಹುದು. ಅದಕ್ಕೋಸ್ಕರ ಚಿಂತೆಯೇಕೆ.

'ಆದರೂ...ಆದರೂ...ಏನಾದರೂ ಎರಡು ಮಾತಾಡಿದಷ್ಟೆ ನನ್ನೊಡನೆಯೂ ಅ? ಹೋಗಲಿ ಮಾತು ಹೋಗಲಿ, ಮುಖದ ಮೇಲೆ ಸೌಜನ್ಯದ ನಸುನಗೆಯೂ ಇರಲಿಲ್ಲವಲ್ಲ?

ಇದೊಳ್ಳೆ ಚೆನ್ನಾಯಿತು! ಅಲ್ಲ ನಕ್ಕರೂ ಆ ಪಾರ್ಕಿನ ಹೆಣ್ಣುಮಕ್ಕಳು, ಆ ಜಗ್ಗು ದಂಪತಿಗಳು, ಆ ಶೇಷಣ್ಣನ ಅಂಗಡಿಯ ಯುವಕ ಇವರಂತೆ ಹುಂ ಯಾರಾದರೂ ನಕ್ಕರೂ ಕಸಿವಿಸಿ ಈಗ ನಗದಿದ್ದರೂ ಕಸಿವಿಸಿ. ಇದೇನಾಗಿದೆ ನನಗೆ?

ಹಾಗೆಲ್ಲ ನಗಬಾರದು ನಗಬಾರದು, ನಗಬೇಕಾದವರು ನಗಬೇಕು, ಹಾಗಿಲ್ಲದಿದ್ದರೆ ಕಸಿವಿಸಿಯಾಗುವುದೇ. ಅಡ್ಡಿಯೇನು? ಅವರುಗಳೆಲ್ಲ ಏತಕ್ಕೆ ನಕ್ಕರೋ? ಹೇಗೋ ಹೋಗಲಿ ಅಂದರೆ ಈತ ಹೀಗೆ ಯಾರ ಮೇಲೋ ಅಸಮಾಧಾನ ಮಾಡಿಕೊಂಡು ನನ್ನ ಮೇಲೆ ಅದನ್ನು ತೀರಿಸಿಕೊಳ್ಳುವುದೆ?

ಹ್ನಾ! ಅಸಮಾಧಾನ ನನ್ನ ಮೇಲೆಯೋ? ಯಾಕೆ ನನ್ನ ಮೇಲೆ? ನಾನೇನು ಮಾಡಿದ್ದೇನೆ ಅಂಥಾದ್ದನ್ನು ಈತನಿಗೆ ಗೊತ್ತೆ ಇಲ್ಲವಲ್ಲ... ಈತನಿಗಲ್ಲದಿದ್ದರೆ ಇನ್ನು ಯಾರಿಗೋ. ಅವರು ಈತನಿಗೆ ಹೇಳಿ ಮಾಡಿ...

ಅಂಥಾದ್ದೇನಪ್ಪ, ನನ್ನ ನಡೆವಳಿಕೆಯಲ್ಲಿ ಆಗಿರುವುದು ಈತನಿಗೆ?...ಓ. ಇರಬಹುದೆ? ಅದೇ ಅವರೆಲ್ಲ ನಕ್ಕರಲ್ಲ, ಅದಕ್ಕೆ ಕಾರಣವಾದದ್ದೇ ಈತನಿಗೆ ತಿಳಿದು ಈತ ಬೇಸರಗೊಂಡು... ಇರಬೇಕು ಇರಬೇಕು ಅದೇ ಇರಬೇಕು.

ಏನಾದರೂ ಆಗಿ ಹೋಗಲಿ ಅದಕ್ಕೆ ಯಾರು ಸುಮ್ಮನೆ ತಲೆ ಚಚ್ಚಿಕೊಂಡಾರು. ಆದದ್ದಾಯಿತು. ಹೋಯಿತು ಅಷ್ಟೆ. ಈತ ಹೇಗೆ ನಡೆದುಕೊಂಡರೆ ನನಗೇನು ನನ್ನ ಮನಸ್ಸಿನಲ್ಲೇನೂ ಆತಂಕವಿಲ್ಲವಲ್ಲ.

ಅಯ್ಯೋ ಏನೋ ಈತ ಹಾಗೇ ಹೋಗಿ ಬಿಟ್ಟ. ಅದಕ್ಕೆ ಕಾರಣವೇ ಇರಬೇಕೆ? ಹುಂ. ಆಗಲಿ. ಇನ್ನೊಮ್ಮೆ ಸಿಕ್ಕಾಗ ವಿಚಾರಿಸಿದರಾಯಿತು. ಹಾಗೇಕೆ ನೋಡಿದಿರಿ ಅಂತ, ವಿಶೇಷವೇನಾದರೂ ಇತ್ತೆ ಅಂತ.

ಏನಿದ್ದರೂ ಬಿಟ್ಟರೂ ಸ್ವಲ್ಪ ವಿಚಿತ್ರವಲ್ಲವೆ ಈತನ ರೀತಿ?...ಅದು ನನ್ನ ಕಡೆಗೇ ಬೆರಳಿಟ್ಟು ತೋರಿಸುವಂತಿದೆಯಲ್ಲ? ...ಛೆ. ಈ ದಿನ ಆಗಬಾರದ್ದೇನೇನೂ ಆಗುತ್ತಿರುವಂತಿದೆ.

ಹುಂ ಸಣ್ಣ ವಿಷಯ ಸಣ್ಣ ಸಣ್ಣ ವಿಷಯ. ಸುಮ್ಮನಿರು, ಸುಮ್ಮನಿರು.

ಇಲ್ಲಂತೂ ಎಷ್ಟು ಸೆಕೆ ಧೂಳು ಉಸಿರು ಕಟ್ಟಿಸುವಂತೆ! ಇಷ್ಟೊಂದು ಸಂತೆ ಜನರ ತಿಕ್ಕಾಟ ಉಸಿರಾಟದಲ್ಲಿ ಇನ್ನು ಹೇಗಿರುತ್ತದೆ?

ನಾನು ಯೋಚಿಸುತ್ತಲೇ ಹರಿಹರ ರಸ್ತೆಯನ್ನು ಸುರಕ್ಷಿತವಾಗಿಯೇ ದಾಟಿ ಪೇಟೆ ಬಾಯಿನ ಬಳಿಯ ಅಂಚೊಡೆಯ ಜನಜಂಗುಳಿಯನ್ನು ಹಿಂದೆ ಬಿಟ್ಟು ಪತ್ರಿಕೆಗಳ ಅಂಗಡಿಗೆ ಬಂದಿದ್ದೇನೆ. ನಾನು ಮಾಮೂಲಾಗಿ ಮಾಸಪತ್ರಿಕೆ ವಾರ ಪತ್ರಿಕೆಗಳನ್ನು ಕೊಳ್ಳುವುದು ಇಲ್ಲಿಯೇ. ಆ ತಿಂಗಳ ಕಸ್ತೂರಿ ಪ್ರತಿಯನ್ನು ಕೊಳ್ಳುತ್ತೇನೆ. ಅಂಗಡಿಯವನು ಮಯೂರ ಬೇಡವೆ ಸಾರ್? ಎಂದು ಕೇಳುತ್ತಾನೆ. ನಾನು ಈ ತಿಂಗಳದ್ದು ನಂಗೇ ಬರುತ್ತೆ ಎನ್ನುತ್ತೇನೆ. ರೀ ಫಿಲ್ಮ್‌ಫೇರ್ ಕೊಡ್ರೀ ಹೆಣ್ಣು ಧ್ವನಿ ಹಿಂದೆಯೇ ಪಕ್ಕದಲ್ಲೇ ಕೇಳಿಸುತ್ತದೆ, ಆಗಲೇ ಬಂದೊಬ್ಬ ಹೆಣ್ಣು ಮಗಳಿಂದ. ನಾನು ಹೋಗಲು ಹಿಂದಿರುಗಿದಾಗ ಅವಳ ನಸುನಗೆಯ ಅಂಡ ಮೊಗ, ಇತ್ತ ಮಿಂಚಿದ ಕಣ್ಣು ಕಾಣುತ್ತವೆ. ಆ ಕ್ಷಣದಲ್ಲೆ ಅವಳ ನಸುನಗೆ ಬಿರಿದ ದಾಳಿಂಬೆಯೂ ಆಗುತ್ತದೆ.

ಈ ಮಗುವನ್ನು ಎಲ್ಲಿ ನೋಡಿದ್ದೇನೆ? ನೋಡಿದಂತಿದೆಯಲ್ಲ?

ಬೀದಿಗೆ ಬರುತ್ತ ಯೋಚಿಸುತ್ತೇನೆ. ತಕ್ಷಣವೇ ನೆನಪಿಗೆ ಬರುವುದಿಲ್ಲ.

ಹೌದು ! ಹೌದು ಹೌದು, ಆ ದಿನ ಎಂಟನೆಯ ಬೀದಿ ಮಧ್ಯೆ ಟೀವಿಯಿಂದ ನೃತ್ಯ ಭಂಗಿಯಲ್ಲಿ ನಿಂತು ಫಿಲ್ಮ್‌ಫೇರ್ ಪತ್ರಿಕೆಯಲ್ಲಿ ಮಗ್ನಳಾಗಿದ್ದವಳಲ್ಲವೆ? ಅವಳೆ, ಅವಳೇ ಇರಬೇಕು: ನಮ್ಮ ನಟಿ ಜಯಂತಿಯಂತೆ ಠೊಳು ಜಯಂತಿಯಂತೆ ಇದ್ದಾಳೆ ಎಂದುಕೊಂಡಿದ್ದೆ. ಇವಳಿಗೆ ಸೊಗಸುಗಾತಿ ಭಾಗೀರಥಿಯ ಪಾತ್ರ ಚೆನ್ನಾಗಿ ಒಪ್ಪುತ್ತದೆ ಎಂದೂ ಅನ್ನಿಸಿತ್ತು. ಒಂದು ವೇಳೆ ಯಾವ ಕಾರಣದಿಂದಲಾದರೂ ನಟಿ ಭಾರತಿ ತಪ್ಪಿ ಹೋದರೆ ಈ ಮಗುವನ್ನು ವಿಚಾರಿಸುವುದನ್ನು ಖಂಡಿತ ಮಾಡಿಕೊಂಡಿದ್ದೆ. ಇವಳ ಬಟ್ಟೆ ತರದ ಸಿನಿಮಾ ಪ್ರಪಂಚದಲ್ಲಿ ಆಸಕ್ತಿ ಇದ್ದಂತಿದ್ದುದು ಪ್ರೋತ್ಸಾಹ ನೀಡಿತ್ತು. ಭಾಗೀರಥಿಯ ಪಾತ್ರ ಖಾಲಿ ಇಲ್ಲದಿದ್ದರೂ ಇನ್ನು ಅದೆಷ್ಟೊಂದು ಹೆಣ್ಣು ಮಕ್ಕಳ ಪಾತ್ರಗಳಿದ್ದುವಲ್ಲ, ಸಾವಿತ್ರಿ ರೇವತಿ ಇಂಥವು ಎಂದೂ ಯೋಚಿಸಿಕೊಂಡಿದ್ದೆ.

ಅದೆಲ್ಲ ಸರೀ...ಇವಳೇಕೆ ಹೀಗೆ ನೋಡಿದಳು ಈಗ? ಆ ನೋಟದಲ್ಲೇನಿತ್ತು? ಸಾಮಾನ್ಯ ಕುತೂಹಲವೆ ಒಬ್ಬರ ಬಗ್ಗೆ ಇನ್ನೊಬ್ಬರಿಗಿರುವುದು? ಅಥವ ವಿಶೇಷವೇನಾದರೂ ಇತ್ತೊ... ಏಕೆ?... ಅದೇ ಅವರಿವರು ಏನಾದರೂ ಹೇಳಿಗೀಳಿ, ಅಥವ ನಾನು ಆಗ ನಡೆದುಕೊಂಡದ್ದೆಲ್ಲೋ ಸಾಮಾನ್ಯತೆಯನ್ನು ದಾಟಿ ಗಮನ ಸೆಳೆದಿದ್ದೆನೋ? ಇರಲಾರದು ಇರಲಾರದು ಹಾಗೆ ನೆನಪಿಲ್ಲವಲ್ಲ?... ಆದರೂ ಏನೋ ಆದರೂ...ಯಾರಿಗೆ ಗೊತ್ತು... ಯಾರಿಗೆ ಗೊತ್ತು......ಏನಾದರೂ ಇರಬೇಕು, ಆಗಿರಬೇಕು, ಆಗಿರಲೇ ಬೇಕು...ಅವಿವೇಕ... ಹೌದೆ? ಹಾಗೆ ಸ್ಪಷ್ಟವಾಗಿಯೇ ನಕ್ಕಳಲ್ಲ ಮತ್ತೆ? ಆ?

ಹಿಂದಿರುಗಿ ಹೋಗಿ ಅವಳನ್ನು ಕಾರಣ ಕೇಳಿ ನನ್ನ ಕಾರಣ ತಿಳಿಸಿ ನನ್ನಿಂದೇನಾದರೂ ಅಪಚಾರವಾಗಿದ್ದರೆ ಕ್ಷಮಿಸು ಎಂದು ಹೇಳಿಬಿಡುತ್ತೇನೆ. ನಾನು ನಡೆಯಲ್ಲಿ ನಿಲ್ಲುತ್ತೇನೆ, ಹಿಂದಿರುಗುವುದಕ್ಕೆ. ಆದರೆ ಹಿಂದಿರುಗುವುದಿಲ್ಲ.

ಉಹುಂ, ಉಹುಂ, ಬೇಡ ದುಡುಕಬಾರದು. ಏನಿದೆಯೋ ಇಲ್ಲವೋ. ಸುಮ್ಮನಿರೋಣ ಹಾಗೇನಾದರೂ ಇದ್ದರೆ ಇಂದಲ್ಲ ನಾಳೆ ಗುಟ್ಟು ರಟ್ಟಾಗಿಯೇ ಆಗುತ್ತದೆ ಆಗ ಇದ್ದದ್ದನ್ನು ಸ್ಪಷ್ಟಪಡಿಸಿದರಾಯಿತು?

ಸಮಾಧಾನ ಹೊಂದಲೆತ್ನಿಸುತ್ತೇನೆ. ಆಗುವುದಿಲ್ಲ.

ಏನು ಕಡಿತ ಉರಿತ! ಇಲ್ಲೂ prickly heat (ಬೇಸಿಗೆಯ ಬೊಕ್ಕೆ) ಆಗಿದೆಯೋ ಮೈ ಪರಚಿಕೊಳ್ಳಬೇಕೆನ್ನಿಸುತ್ತದೆ. ಚೆನ್ನಾಗಿ ಕರಕರ ಕೆರೆಯುತ್ತೇನೆ ಕತ್ತಿನ ಹಿಂದೆ ಬೆನ್ನು ಎದೆಗಳನ್ನು.

ಶೃಂಗಾರ ಸಂಕೇರಣೆ, ಸರ್ಕ್ಯುಲೇಟಿಂಗ್ ಲೈಬ್ರರಿ ಅಂಗಡಿಯ ಮುಂದೆ ಎಂದಿನಂತೆ ಹೆಣ್ಣು ಮಕ್ಕಳ ದೊಡ್ಡ ಹಿಂಡೇ ನೆರೆದಿರುತ್ತದೆ. ಅವರ ಉಡುಗೆ ತೊಡುಗೆಗಳ ಸ್ಪೆಕ್ಟ್ರಂ (ವರ್ಣಪಟಲ) ಅಲಂಕಾರ ಮಿಶ್ರಣ ಗಡಿಬಿಡಿಯ ಮಾತು, ಕಿಲಕಿಲ ನಗೆ, ಮೈ ಕೈ ಬಳುಕಾಟ ಅತ್ತ ಇತ್ತ ಚಂಚಲ ನೋಟಗಳನ್ನು ಅತ್ತಿತ್ತಗದೆಯೋ ಅರಿಯುತ್ತೇನೆ ಹಾದು ಹೋಗುತ್ತ.

ನಾನು ಹಾಯುತ್ತಿದ್ದಾಗ ಅವರ ಲವಲವಿಕೆ ಕೊಂಚ ಮಬ್ಬಾಗುತ್ತಲ್ಲವೆ? ಮಾತು, ನಗು? ಕೆಲವು ಕಣ್ಣು ಇತ್ತ ಹೊರಳಿದವೆ? ತೋರು ಬೆರಳಾಟವೇನಾದರೂ ಇತ್ತೆ...? ಇವರ ಪೈಕಿ ಯಾರಾದರೂ ಆ ಪಾರ್ಕಿನಲ್ಲಿ ನಕ್ಕವರು ಇದ್ದರೇ? ಅವರು ಆಗಲೇ ಅಲ್ಲಿಂದ ಹೊರಟುಬಿಟ್ಟಿದ್ದಾರೆ?

ಛೆ, ನನಗೆ ಏನಾಗಿದೆ? ಬೇರೆ ಕೆಲಸವೇನೂ ಇಲ್ಲವೇನು? ಚೆನ್ನಾಯಿತು, ಚೆನ್ನಾಯಿತು. ತಲೆ ಕೊಡಹುತ್ತ ನಡೆಯುತ್ತೇನೆ. ಹಿಂದಿರುಗಿ ನೋಡೋಣವೆನ್ನಿಸುತ್ತದೆ. ಆ ಮಕ್ಕಳು ಏನೇನು ಮಾತು ಈಚೆಗೇನು ಮಾಡುತ್ತಿದ್ದಾರೆ. ಇತ್ತ, ನನ್ನ ಕಡೆಗೆ ನೋಡುತ್ತಿದ್ದಾರೆಯೋ ಎಂದು ತಿಳಿದುಕೊಳ್ಳಬೇಕೆನ್ನಿಸುತ್ತದೆ. ಆದರೆ ಹಾಗೆ ಮಾಡುವುದಿಲ್ಲ. ಈಗಾಗಲೆ ತಪ್ಪಾಗಿದ್ದರೆ ಇನ್ನೂ ಹೆಚ್ಚು ತಪ್ಪು ದೀತೆಂದೋ ಅಂತೂ ಕುತೂಹಲವನ್ನು ಬದಿಗೆ ಕೊಂಡುಬಿಡುತ್ತೇನೆ. ಮುಂದೆ ಹೆಜ್ಜೆ ಹಾಕುತ್ತೇನೆ.

ಈ ತರಕಾರಿ ಅಂಗಡಿಯ ಒಡತಿಯನ್ನು ನೋಡಿದಾಗಲೆಲ್ಲ ಈ ತಾಯಿ ನಂಜತ್ತೆಯ ಪಾತ್ರಕ್ಕೆ ಆಗಬಹುದೆನ್ನಿಸಿದೆ. ಆದರೆ ನಂಜತ್ತೆಗೆ ಬೇಕಾದ ಗಡಸು ಇವರಲ್ಲಿಲ್ಲ. ಮಾತು ನಡವಳಿಕೆ

ಬಹಳ ಮೃದು, ಗಂಭೀರ. ಊಹುಂ ಆಗುವುದಿಲ್ಲ ಮೇಲಾಗಿ ಇವರು ಒಪ್ಪಿಕೊಳ್ಳುವಂಥವರೂ ಅಲ್ಲವೆನ್ನಿಸುತ್ತದೆ. ಅಂದ ಮೇಲೆ ನಟಿ ಅನ್ನಪೂರ್ಣಮ್ಮನೇ ಗತಿ; ಅವರು ಬೇಷಾಗಿಯೇ ಮಾಡಿಯಾರು.

ಅಂಗಡಿಯ ಪಕ್ಕದಲ್ಲಿ ಬಗ್ಗಿ ನಿಂತು ದಪ್ಪ ಆಲೂಗಡ್ಡೆಗಳನ್ನು ಆರಿಸಿ ತಕ್ಕಡಿಗೆ ಹಾಕಿ ಸೊಂಟ ನೆಟ್ಟಗೆ ಮಾಡಿ ಕತ್ತೆತ್ತಿದಾಗ ಆಗೋ ಅವರು! ರಸ್ತೆಯ ಆ ಅಂಚಿನಲ್ಲಿ ಕಾಣಿಸುತ್ತಾರೆ......ಆ ಗಂಡ ಹೆಂಡತಿಯ ಜೋಡಿ ಅವರು ನನ್ನ ಸಂಜೆ ವಿಹಾರದ ಪರಿಚಯ. ಅಂದರೆ ನೋಡಿ ಮಾತ್ರ ಮಾತಾಡಿ ಅಲ್ಲ. ಪಾರ್ಕಿನಲ್ಲಿ ಕೃಷ್ಣರಾಜ ರಸ್ತೆ. ಹರಿಹರ ರಸ್ತೆ, ಆರನೇ ಬೀದಿ ಪೇಟೆ ಬೀದಿ ಹೀಗೆ ಅಲ್ಲಲ್ಲಿ ಕಾಣುತ್ತಲೇ ಇರುತ್ತಾರೆ. ಆದರೆ ನಮ್ಮ ಸಮಾಜದ ಬಿಗುಮಾನ ಇನ್ನೂ ಮಾತಾಡಗೊಡಿಸಿಲ್ಲ. ಹಾಗೆಂದರೆ ನಾನು ಈ ಸಮಾಜದ ಬಿಗುಮಾನ ಹಾಗೂ ಸಂಪ್ರದಾಯ ಬಂಧಿತನೆಂದಲ್ಲ. ಎಲ್ಲರೊಡನೆಯೂ ಸರಳವಾಗಿಯೇ ನಡೆದುಕೊಳ್ಳಲು ಇಚ್ಛಿಸುವವನು. ಆದರೆ ಇದು ಅವರಿಗೆ ಗೊತ್ತಾಗಬೇಕಲ್ಲ. ಇವರು ಪರಸ್ಪರ ಅನುರೂಪರಾಗಿದ್ದಾರೆ. ನನ್ನ ಮಗ ಸೊಸೆಯಿರುವಂತೆ. ಇನ್ನೂ ಹೆಚ್ಚೇ ಅನ್ನಬಹುದೇನೋ.

ನನ್ನ ದೃಷ್ಟಿಗೆ ಅವರು ಬಿದ್ದಾಗ ಆ ತಾಯಿ ನನ್ನ ಕಡೆಗೇ ನೋಡುತ್ತಿದ್ದರೆಂದು ತಿಳಿಯುತ್ತದೆ. ಈಗ ಅವಳು ಗಂಡನ ಕಿವಿಯಲ್ಲೇನೋ ಹೇಳುತ್ತಿದ್ದಂತಿದೆ ಹೋಗುಹೋಗುತ್ತ.

ಏನಿರಬಹುದು? ನನ್ನ ವಿಚಾರವೇ ಇದ್ದಂತಿದೆಯಲ್ಲ?...ಇನ್ನೇನು, ಅದೇ ಸ್ವಪ್ನದೇನೋ ಅವಿವೇಕವೋ...ಹೂಂ...ಹೂಂ... ವಿಷಯ ಎಲ್ಲಿಗೊ ಬಂದು ಬಿಟ್ಟಿದೆಯೋ? ಚಿನ್ನ ಹಿಂದೆ ನನಗೆ, ಎದುರಿಗೇ ಮಾರ್ಮಿಕ ನೋಟ, ನಗೆ, ನಗೆ ನೋಟ, ಈಗ ಕಿವಿಮಾತಾಡಿಕೊಳ್ಳುವುದೂ!... ಕಂಡೂ ಮಾತಾಡದ ಸ್ನೇಹಿತರ ಅಸಮಾಧಾನ ತಿರಸ್ಕಾರ ಬೇರೆ, ಹುಂ ಅದೇ ಇರಬೇಕು... ಸರಿ ಸರಿ... ಆಗಲಿ ಆಗಲಿ. ಇದು ಎಲ್ಲಿಗೆ ನಿಲ್ಲುತ್ತದೆ ಏನೇನಾಗುತ್ತದೆಯೋ.

ಇಲ್ಲ ಇಲ್ಲ ಇದನ್ನು ಹಾಗೆಯೇ ಬಿಡಬಾರದು, ಬೆಳೆಯುವುದಕ್ಕೆ. ಸಾಧು. ಈ ಹೆಣ್ಣು ಮಕ್ಕಳೊಡನೆ ನೇರವಾಗಿ ಮಾತನಾಡುವುದು ಅನುಚಿತವೆನ್ನಿಸಿದರೂ ಸಾಧ್ಯವಾಗದಿದ್ದರೂ ಈ ಜೋಡಿಯೊಡನಾದರೂ ಆಡಬಹುದಲ್ಲ ಧೈರ್ಯವಾಗಿ. ಅವರೇನಾದರೂ ಅಂದುಕೊಳ್ಳಲಿ, ಹೀಗೆ ಮಾತಾಡಿಸಿಕೊಂಡು ಬರುತ್ತಾನಲ್ಲ, ಈ ಮುದುಕನಿಗೆ ಏನು ಚಪಲ ಅಂತ. ಅವರಿಗೆ ನನ್ನ ಉದ್ದೇಶ, ಅದರಿಂದ ಆಗಿರಬಹುದಾದ ಆಗಿರಬಹುದೇನು ಆಗಿರುವ ಅನ್ಯೋನ್ಯ ತಪ್ಪು ತಿಳಿವಳಿಕೆ ಎಲ್ಲವನ್ನೂ ವಿವರಿಸಬೇಕು, ಚೆನ್ನಾಗಿ ವಿವರಿಸಿಬಿಡಬೇಕು. ಅದು ಒಬ್ಬರಿಂದ ಒಬ್ಬರಿಗೆ ಹೋಗಿ ಸರಿಯಾಗಿ ಬಿಡುತ್ತದೆ, ಈಗ ತಪ್ಪಾಗಿ ಬಿಟ್ಟಿರುವಂತೆ...ಆಗಲಿ, ಅವರು ಇನ್ನೊಂದು ಬಾರಿ ಸಿಕ್ಕಿದಾಗ ಬಿಡುವುದಿಲ್ಲ. ಅವಕಾಶವನ್ನು ನಿಜ, ಇದು ಅಗತ್ಯ, ತೀರಾ ಅಗತ್ಯ A MUST. ನಾನೊಬ್ಬ ವಿಚಿತ್ರ ಮನುಷ್ಯ. ಮಹಾ ಮೂರ್ಖ, ಹುಚ್ಚನೇ ಎಂದುಕೊಂಡರೂ ಚಿಂತೆಯಿಲ್ಲ. ಮರ್ಯಾದೆ ಮುಖ್ಯ ಹುಂ.

ಅಯ್ಯೋ ನನಗೇನೋ ಆಗಿದೆ ಇವತ್ತು! ಹೀಗೆ ಕುದಿಯುತ್ತಿದ್ದೇನಲ್ಲ, ಏನೋ ಇದ್ದೋ ಇಲ್ಲದೇನೋ? ಖಂಡಿತವಾಗಿ ಬುದ್ಧಿ ಕೆಡುತ್ತಿದೆ. ಸಂಶಯವಿಲ್ಲ ಬಿಡು! ಬಿಡು! ಬಿಡು! ಸುಮ್ಮನೆ ನಿನ್ನ ದಾರಿ ನೀನು ನೋಡಿಕೋ– ಅವರಿವರನ್ನು ನೋಡ ಹೋಗಬೇಡ, ಕೇಳ ಹೋಗಬೇಡ, ಅವರೊಡನೆ ಆಡಹೋಗಲೂ ಬೇಡ.

ಅಥವ ನನಗೇನೂ ಆಗಿದೆ ಇವರಿಗೆಲ್ಲ ಏನೋ ಆಗಿದೆಯೋ. ಹೀಗೆ ನಡೆದುಕೊಳ್ಳುತ್ತಿದ್ದಾರಲ್ಲ? ಏಕೆ? ಏಕೆ?

ಏಕೆ ಏನು ಅದಕ್ಕೇ! ಹೆಚ್ಚುತನ ಮಾಡಿಕೊಂಡಿರುವುದಕ್ಕೇ! ಅನುಮಾನವಿಲ್ಲ. ಅನುಮಾನವೇ ಇಲ್ಲ.

ನನಗೆ ತಿಳಿಯದಂತೆಯೇ ತರಕಾರಿ ವ್ಯಾಪಾರ ಮುಗಿಸಿ ಮತ್ತೆ ಹರಿಹರ ರಸ್ತೆಗೆ ಹಿಂದಿರುಗಿ ಬಂದು ಫುಟ್‌ಪಾತ್ ಮೇಲೆ ನಡೆಯುತ್ತಿದ್ದೇನೆ. ಇನ್ನು ಯಾರ ಕಡೆಗೂ ನೋಡಬಾರದು, ಯಾರ ಮಾತಿಗೂ ನಗುವಿಗೂ ಕಿವಿಗೊಡಬಾರದು ಎಂದು ನಿರ್ಧರಿಸುತ್ತೇನೆ. ಏಕೆ ತ[illegible]ಬೇಕಾದ ಪ್ರಮೇಯವಿಲ್ಲವೆಂದುಕೊಂಡು ಸ್ವಭಾವದಂತೆ

ಕತ್ತು ನೆಟ್ಟಗಿಟ್ಟಿದ್ದರೂ ದೃಷ್ಟಿಯನ್ನಷ್ಟು ಕೆಳಗಿಟ್ಟಿರುತ್ತೇನೆ, ಮುಂದಿಟ್ಟಿರುತ್ತೇನೆ, ಅಕ್ಕ ಪಕ್ಕದಲ್ಲಲ್ಲ.

ಆದರೂ ರಸ್ತೆಯ ಪಕ್ಕದಲ್ಲಿ ಅಡ್ಡ ಸಾಲಿನ ನಮ್ಮ ಗಂಡು ಮಕ್ಕಳ ವೇಷ, ಉಲ್ಲಾಸ ಮುಖಗಳು, ಸಿಗರೇಟಿನ ಹೊಗೆ, ತುದಿ ಬೆಂಕಿ ಕಾಣಿಸದಿರುವುದಿಲ್ಲ. ಅವರವರಲ್ಲೇ ಉತ್ಸಾಹ ಆತುರಗಳಿಂದ ಆಡಿಕೊಳ್ಳುವ 'ಅವಳು ಇವಳು' ಇಷ್ಟೇ ಸ್ಪಷ್ಟವಾದ ನಗೆಚಾಟಿಕೆಯ ಶಬ್ದಗಳು ಗುಂಪಿನ ಹೆಣ್ಣು ಮಕ್ಕಳ 'ಅವನು ಇವನು' ಇದ್ದ ಹಾಗೆ, ಕೇಳಿಸದಿರುವುದಿಲ್ಲ. ಇಂಥವರಲ್ಲಿ ಸ್ವಲ್ಪ ಅರಿಸಿದರೆ ಚಿತ್ರದಲ್ಲಿನ ಗುಂಡ ಭೀಮಣ್ಣ ಮುಂತಾದ ಕೆಲವು ಯುವಕರ ಪಾತ್ರಗಳಿಗೆ ಬೇಕಾದಷ್ಟು ಸಿಕ್ಕುತ್ತಾರೆ, 'ನಾಗರ ಹಾವು' ಚಿತ್ರದ-ಕಂಟ್ರಿ ಯುವಕರನ್ನು ಮರೆಹೋಗಬೇಕಾಗಿಲ್ಲ ಎಂದೆನಿಸುತ್ತದೆ, ಹಿಂದೆಷ್ಟೋ ಬಾರಿ ಅನ್ನಿಸಿದ್ದಂತೆಯೆ.

ಎಡ ಪಕ್ಕದ ಡಾ. ರಾಮಾನುಜಂ ಚಿಕಿತ್ಸಾಲಯದಿಂದ ಬರುತ್ತಿರುವ ಇಳಿ ಬಿಳಿ ಮೀಸೆ ಹಾಗು ಸ್ವರ್ಣ ಕರ್ಣಕುಂಡಲ ದೊಡ್ಡ ಮುಖದ ಈ ಅಜಾನುಬಾಹು ಭವ್ಯ ವ್ಯಕ್ತಿ ಚಿತ್ರ ಪಾತ್ರ ಸಾಕ್ಷಾತ್ ಸಿದ್ದೇಗೌಡರೇ ಆಗಿದ್ದಾನೆ. ಇಂಥ ಹಳ್ಳಿಗರನ್ನು ಬಿಟ್ಟು ನಾವು ಪಟ್ಟಣಿಗರಿಗೆ ಹಳ್ಳಿಗರ ವೇಷ ಹಾಕುತ್ತೇವಲ್ಲ, ಎಂಥ ವಿಪರ್ಯಾಸ! ಈತನೇ ಸಿಕ್ಕುವುದಾದರೆ!

ಅರೆ! 'ತಟ್ಟನೆ ಬಲಕ್ಕೆ ಕೊಂಚ ಓಲಿ ಸರಿದು ಕೊಳ್ಳುತ್ತೇನೆ ಎಡಗಡೆ—ಬೀಸು ಸೆರಗೊಂದು ತೀರ ಹತ್ತಿರದಲ್ಲೇ, ಇನ್ನೇನು ಸೋಂಕಿಯೇ ಹಾರಿ ಹೋದಂತಾದಾಗ ಕಿಸಿ ಕಿಸಿ ನಗು ಗಮನ ಸೆಳೆಯುವಂಥ ಗುಜುಗುಜು ಮಾತಿನೊಡನೆ. ಕೂಡಲೇ ಮೊನ್ನೆ ದಿನದ ಸ್ಥಳೀಯ ಪತ್ರಿಕೆಯೊಂದರಲ್ಲಿ ಬಂದಿದ್ದ 'ವೇಶ್ಯೆಯರ ಕೂಟ' ಎಂಬ ಹೇಳಿಕೆ ಮನಸ್ಸಿಗೆ ಬಂದರೂ ಆ ಕ್ಷಣವೇ ಅದನ್ನು ತಳ್ಳಿಹಾಕುತ್ತೇನೆ. ಇಲ್ಲೆಲ್ಲಿ ಬಂತು ಅದು ಎಂದುಕೊಂಡು. ಹೌದು, ಅಂಥವರು ಯಾರೂ ಅಲ್ಲ. ಇಲ್ಲೆಲ್ಲ ಬೀದಿಯ ತುಂಬ ವಯ್ಯಾರವಾಗಿ ಓಡಾಡುವ ಮಗು ಅವಳು ಎಂದು ತಿಳಿಯುತ್ತದೆ. ಅವಳೊಡನೆ ಇನ್ನು ಯಾರೋ. ಇವಳಲ್ಲಿ ಹೇಳಿಕೊಳ್ಳುವಂಥದ್ದು ಏನೇನೂ ಇಲ್ಲ ನಿಜ. ಆದರೆ ಆ ಅತಿ ಚಪಲವಿಕೆ ಅಲಂಕಾರ ವಯ್ಯಾರಗಳನ್ನು ಉಪಯೋಗಿಸಿಕೊಳ್ಳಬಹುದೆಂದುಕೊಂಡಿದ್ದೇನೆ. ವೇಶ್ಯೆ ಚಂಪಕ್ಕನ ಪಾತ್ರಕ್ಕೆ. ಆ ಬಂದು ಅದ್ದಿಯನ್ನೂ ಯೋಜಿಸಿಕೊಂಡಿದ್ದೇನೆ ಚಂದ್ರಪ್ಪನದೇನೋ ಉದಾತ್ತವಾದ ಪಾತ್ರವೇ ಆದರೂ ಆ ವೃತ್ತಿಪಾಠ ಇದೆ. ಈ ದಿಟ್ಟ ಮಗುವಿನ ತರಹ ನೋಡಿದರೆ ಅದಕ್ಕೇನೂ ಹೆದರುವುದಿಲ್ಲವೆನ್ನಿಸಿದೆ. ಅಂತೂ ಆಯ್ಕೆ ವಿಷಯ ಅನುಮಾನಾಸ್ಪದವಾಗಿಯೇ ಉಳಿದಿದೆ.

'ಇವಳ ಮಾತು ನಗು ವಿಶೇಷವೇನಲ್ಲ ಆ ವಯ್ಯಾರಕ್ಕೆ ಸೇರಿದುವೇ—ಅದರ ಅಂಗಗಳಾಗಿ... ಉಹುಂ ಉಹುಂ ಇನ್ನೂ ಅತಿಯಾಗಿ ನಕ್ಕಳೋ?... ಅದೇನು ಅವಳು ಅನ್ನುತ್ತಿದ್ದುದು? ಇವ, ಇವ ಅಂತಲೇನೋ ಅಷ್ಟೇ ಕೇಳಿಸಿದ್ದು? ಮುಂದೇನು ಹೇಳಿದಳು? ಅದೇ ಹೆಣ್ಣು ಮಕ್ಕಳ 'ಇವನು' ಎನ್ನುವುದೋ ? ಯಾರು ಇವನು ಅಂದರೆ ನಾನೇ...ನಾನಿರಬಹುದೆ? ನನ್ನ ವಿಚಾರವನ್ನೇ ಆಡಿದಳೆ ನನ್ನ ಹತ್ತಿರದಲ್ಲಿ? ಏನು, ಅದು? ಸ್ಪಷ್ಟವಾಗಿ ಕೇಳಿಸಲಿಲ್ಲವಲ್ಲ. ಛೆ!... ಅಯ್ಯೋ ಇವಳ ಇವ... 'ಯಾರೋ ಪ್ರಿಯತಮನಿರಬೇಕು – ರೋಡ್ ರೋಮಿಯೊ, ಅಥವ ಇನ್ನು ಯಾವನೋ ಹತ್ತಿರದವನು. ಯಾವನೋ ಯಾವನೋ ನಾನಂತೂ ಅಲ್ಲವಲ್ಲ... ಮತ್ತೆ... ಏನೋ ಇತ್ತು ಅಂತೀನಿ ಸ್ವಲ್ಪ ಹಾಗಿರಲಿಲ್ಲವೆ? ಓ ಓ! ಇದೇನು ಇದೇನು ಹಾಳು?

ಆವರಿಸಿದ ಬಸ್ ಧೂಳಿನಲ್ಲಿ ಮೂಗು ಮುಖ ಮುಚ್ಚಿಕೊಳ್ಳುತ್ತೇನೆ. ಆರನೆಯ ಬೀದಿ ಸ್ಟಾಪ್‌ನಲ್ಲಿ ನಿಂತ ತುಂಬು ಪೇಟೆ ಬಸ್ಸಿನಿಂದ ಜನರು ಉದುರಿಕೊಳ್ಳುತ್ತಿದ್ದಾರೆ. ಸುತ್ತ ನಾಲ್ಕು ಕಡೆಗಳಿಗೆ ಹಂಚಿಕೊಳ್ಳುವವರು. ಇವರ ಪೈಕಿ ಎಷ್ಟೋ ಮುಖ ಪರಿಚಯದವರೇ. ನಮ್ಮ ಮನೆ ಹಿಂದಿನ ಮನೆಯ ಪುಟ್ಟ ಮಗು ನಂದೂ ನಂದಲಾಲ. ಅವನ ತಂದೆ ಇಳಿಯುತ್ತಾರೆ. ಇನ್ನೊಂದು ಕ್ಷಣದಲ್ಲಿ ಮುಂದಿನ ಬಾಗಿಲಿಂದ ಇಳಿದ ತಾಯಿಯೂ ಬರುತ್ತಾರೆ. ನಮಸ್ಕಾರ ಪ್ರತಿ ನಮಸ್ಕಾರ. ನಾಲ್ಕು ಮಾಮೂಲಿ ಮಾತು, ನಂದುವಿನೊಡನೆ

## "10 ಶಾಲಾ ಮಕ್ಕಳಲ್ಲಿ 7 ಮಂದಿಗೆ ಹಲ್ಲುಗಳಲ್ಲಿ ಕುಳಿಗಳಿರುತ್ತವೆ"

—ಸ್ಕೂಲ್ ಸರ್ವೇ, ಮಾರ್ಚ್ 1978.
ಇಂಡಿಯನ್ ಡೆಂಟಲ್ ಅಸೋಸಿಯೇಶನ್.



ಹಲ್ಲು ನೋವೇ ? ಅದು ದಂತಕ್ಷಯದ ಚಿಹ್ನೆಯಾಗಿದೆ. ಬಾಯಿಯಲ್ಲಿ ಉಂಟಾಗುವ ಕೀಟಾಣುಗಳು ಆಹಾರದ ಕಣಗಳನ್ನು ಹಾನಿಕರ ಆಮ್ಲಗಳನ್ನಾಗಿ ಪರಿವರ್ತಿಸುತ್ತವೆ. ಈ ಆಮ್ಲಗಳು ನಿಮ್ಮ ಹಲ್ಲುಗಳನ್ನು ಆಕ್ರಮಿಸುತ್ತವೆ. ಮತ್ತು ಅದರಿಂದಾಗಿ ಕೊಳೆತ, ನೋಯುವ ಕುಳಿಗಳು ಉಂಟಾಗುತ್ತವೆ.

# ಉಪಯೋಗಿಸಿರಿ ಫ್ಲೋರೈಡ್‌ಯುಕ್ತ ಸಿಗ್ನಲ್ 2

# ದಂತ ಕುಳಿ-ರೋಗ ನಿವಾರಕ ಟೂಥ್‌ಪೇಸ್ಟ್

ಫ್ಲೋರೈಡ್‌ಯುಕ್ತ ಸಿಗ್ನಲ್ 2 ದಂತಕ್ಷಯವನ್ನು ಎರಡು ರೀತಿಗಳಲ್ಲಿ ಪ್ರತಿಭಟಿಸುತ್ತದೆ. ಕುಳಿ ಅಗೆಯುವ ಆಮ್ಲಗಳು ಬಾಯಿಯಲ್ಲಿ ಹುಟ್ಟುವಂತೆ ಮಾಡುವ ಕೀಟಗಳನ್ನು ತಡೆಗಟ್ಟುತ್ತದೆ. ಮಾತ್ರವಲ್ಲದೆ ಹಲ್ಲಿನ ಎನಾಮಲ್‌ನೊಂದಿಗೆ ಇದು ಹೊಂದಿಕೊಳ್ಳುತ್ತದೆ. ಮತ್ತು, ಆ ಮೂಲಕ ಹಲ್ಲುಗಳು ಅಧಿಕ ಗಟ್ಟಿಯಾಗುವಂತೆ, ಕುಳಿಗಳಿಗೆ ಅಧಿಕ ನಿರೋಧಕವಾಗುವಂತೆ ಮಾಡುತ್ತದೆ. ಇದಕ್ಕೆ ಕಾರಣವೆಂದರೆ ಕುಳಿಗಳ ನಿವಾರಕ ವಿಶೇಷ ಘಟಕ ಫ್ಲೋರೈಡ್ ಸಿಗ್ನಲ್‌ನ ಅಪೂರ್ವ ಸೂತ್ರದಲ್ಲಿ ಹೆಚ್ಚು ಚೆನ್ನಾಗಿ ಕೆಲಸ ಮಾಡುತ್ತದೆ.

ಪರಿಸ್ಥಿತಿ ಕೈಮೀರುವ ಮೊದಲೇ, ಈಗಲೇ ದಂತ ಕುಳಿ-ರೋಗ ನಿವಾರಕ ಸಿಗ್ನಲ್ 2 ಉಪಯೋಗಿಸಿರಿ.




## ಬೇರೆ ಯಾವುದೇ ಟೂಥ್‌ಪೇಸ್ಟ್, ಕುಳಿಗಳನ್ನು ಇದರಷ್ಟು ಚೆನ್ನಾಗಿ ಎದುರಿಸಲಾರದು.

LINTAS-

ವಯಸ್ಸು ಸ್ಥಿತಿಗತಿಗಳ ಅಂತರ ಸಂದರ್ಭಗಳಿದ್ದರೂ ಮೊಟ್ಟ ಮೊದಲು ಬರುವ ಭಾವನೆ ಕೆಟ್ಟದ್ದೇಯೇನೋ ಗಿಲ್ಟಿ ಕಾನ್ಷಸ್ನಸದು ಎನ್ನುವಂತೆ. ಮೊನ್ನೆ ಮೊನ್ನೆ ಮಾಜಿ ರಾಷ್ಟ್ರಾಧ್ಯಕ್ಷ ಬಾಬು ರಾಜೇಂದ್ರಪ್ರಸಾದರು ದೇವರ ಮುಂದೆ ಮಗಳನ್ನಾಗಿ ಸ್ವೀಕರಿಸಿದ ಗ್ರಾಸಗೆ ಬರೆದ ಪತ್ರಗಳ ಪುಸ್ತಕವನ್ನು ವಿಮರ್ಶಿಸಿದ ಮಹನೀಯರು ಅಲ್ಲಿ ಫ್ರಾಯ್ಡ್ ಮಾನಸಿಕ ಕಾಮ ಕಳೆ ಪದರುಗಳು ಇರಬಹುದೆ ಎಂದು ಸೂಚಿಸಿದ್ದಾರೆ! ಗಾಂಧೀಜಿ ಎಪ್ಪತ್ತನೆಯ ವಯಸ್ಸಿನಲ್ಲಿ ಹೆಣ್ಣು ಮಕ್ಕಳ ಮಧ್ಯೆ (ಅವರ ವಾಕಿಂಗ್ ಸ್ಟಿಕ್ಸ್ ಕೈ ಕೋಲುಗಳು) ಇರುತ್ತಿದ್ದರೆ ಪಾಶ್ಚಾತ್ಯ ಪ್ರಸಿದ್ಧ ಬರಹಗಾರ ಒಬ್ಬ ತನ್ನ ಪುಸ್ತಕದಲ್ಲಿ ಇನ್ನೂ ಸ್ವಲ್ಪ ಮುಂದೆ ಹೋಗಿ ಅಪಪ್ರಚಾರದ ಮಾತನ್ನು ಬರೆದಿದ್ದಾನಂತೆಂದರೆ ಎಂಥ ಪ್ರಪಂಚ ಇದು ದುರಂತವು! ಎಲ್ಲರೂ ಅವರವರ ಅಳತೆಗೆ ತಕ್ಕಂತೆ ಯೋಚಿಸುವುದು ಸಹಜವೇ! ಹುಂ ಹೋಗಲಿ.

ಆ ಮಗುವನ್ನು ಮಗಳು ಮೊಮ್ಮಗಳು ಎಂದೆನಲ್ಲವೆ? ಅವು ನನ್ನ ಕಡೆಯಿಂದಲೇ ಸಾಧ್ಯವಾಗದಿದ್ದಾಗ ಅವಳನ್ನು ಮೊಮ್ಮಗಿನ ಭಾವಿ ಹೆಂಡತಿಯಾಗಿ ಕಂಡು ಮೊಮ್ಮಗಳನ್ನಾಗಿಸಿಕೊಂಡಿದ್ದೇನೆ. ಇದನ್ನು ನಿಜವಾಗಿಸುವುದಕ್ಕೆ ನಡೆಯಬೇಕಾದ ಬಗ್ಗೆ ಯೋಚಿಸಿದ್ದೇನೆ– ಆಗಲೇ ಕನ್ಯಾನ್ವೇಷಣದ ವಿಚಾರದಲ್ಲಿ ಹೇಳಿದಂತೆ.

ಹಾಗೂ ಚಿತ್ರದ ನಾಯಕ ಗಂಗಾಧರನ ನೆರಳಾಗಿ, ಅವನ ಯೋಜನೆ ಸಾಧನೆಗಳಲ್ಲಿ ಸಂಪೂರ್ಣ ನೆರವಾಗಿ ತನ್ನನ್ನೇ ಯತ್ನಕ್ಕೆ ಸಮರ್ಪಿಸಿಕೊಂಡ ಪಾತ್ರಿಯನ್ನು ಅವಳಲ್ಲಿ ಕಲ್ಪಿಸಿಕೊಂಡಿದ್ದನಾದರೂ ಅದು ಅಷ್ಟಾಗಿ ಅಲ್ಲ. ಏಕೆ ಅದನ್ನು ಕೈಬಿಟ್ಟಿದ್ದೆನೆಂದೇ ಹೇಳಬೇಕು. ಏಕೆಂದರೆ ಅವಳ ಉಡುಗೆ ತೊಡಿಗೆ ನೋಟ ನಡಿಗೆಗಳಲ್ಲಿ ನಟಿಯನ್ನು ಗುರುತಿಸುವುದು ಕಷ್ಟವಾಗಿತ್ತು, ಮುಂದಿನ ಗತಿಯನ್ನು ಗುರುತಿಸುವುದು ಸುಲಭವಾಗಿತ್ತು.

ಓ ಇದೇನು! ನಸುನಗೆ! ಇವಳ ಮುಖದಲ್ಲೂ! ನಸುನಗೆ ನಿಜ. ಸ್ಪಷ್ಟ ನಸುನಗೆಯಲ್ಲ, ಅದರ ಛಾಯೆ. ಗಾಂಭೀರ್ಯದ ಲಜ್ಜೆಯ ಹೊರೆಯಲ್ಲೇ... ಬರುತ್ತಿದ್ದಂತೆಯೇ ಹೋಯಿತು ಕೂಡ ಸುಳಿದು ಅಲೆಯಂತೆ ತೇಲಿ...ಕಂಡೂ ಕಾಣದಂತೆ... ಏನಾದರೇನು ಎಷ್ಟಾದರೇನು, ನಗು, ನಗುವೇ! ಸಂಶಯವೇ ಇಲ್ಲ...ಏಕೆ ನಕ್ಕಳು ? ಏನನ್ನು ನೋಡಿ? ಯಾವುದನ್ನು? ಯಾರನ್ನು?...ನನ್ನನ್ನೆ ನನ್ನನ್ನೇ? ಅ?......ಯಾವಾಗ ನೋಡಿದಳು? ಮೇಲಿನ ಮೆಟ್ಟಿಲಿನಲ್ಲಿರುವಾಗಲೇ? ಬಸ್ಸಿನ ಒಳಗಿರುವಾಗಲೇ? ಕಿಟಕಿಯಲ್ಲೇ ಕಂಡೆ?...ಆ ...ನೀನೂ ಮಗಳೆ Et to brute··· ಏನು ಕಂಡೆ? ಏನು ಏನು ಏನು– ನನ್ನಲ್ಲಿ!

ಇವರೆಲ್ಲ ಏಕೆ ನಗುತ್ತಿದ್ದಾರೆ, ಕೆಲವರು ದುರುಗಟ್ಟಿಕೊಂಡು ನೋಡುತ್ತಿದ್ದಾರೆ, ನೋಡಿ ಪಿಸಿಗುಟ್ಟುತ್ತಿದ್ದಾರೆ, ಇನ್ನೂ ಏನೇನನ್ನೋ ಮಾಡುತ್ತಿದ್ದಾರೆ ನನ್ನನ್ನು ನೋಡಿ, ಈ ದಿನ?... ಈ ದಿನವೇನು, ಎಷ್ಟೋ ದಿನಗಳಿಂದಲೂ ಹಾಗೆ ಮಾಡುತ್ತಲೇ ಇರಬಹುದು, ನನ್ನ ವಿಚಾರದಲ್ಲಿ ಪುಕಾರಾಗಿ ನನ್ನ ಕಣ್ಣಿಗೆ ಈ ದಿನ ಕಂಡಿರಬಹುದು, ಅಷ್ಟೆ.

ಏಕೆ ? ನಾನು ಅಂಥ ಮೂರ್ಖತನ ಮಾಡಿಕೊಂಡಿದ್ದೇನೆಯೆ ? ಅಂಥ ಸ್ವಭಾವ, ಚಾಪಲ್ಯ ತಪ್ಪು, ಕೆಟ್ಟತನ ಇದೆಯೆನ್ನಿಸುವುದಿಲ್ಲವಲ್ಲ?

ಇದ್ದೇ ಇರಬೇಕು.. ಇಲ್ಲದಿದ್ದರೆ ಇವರೆಲ್ಲ ಹೀಗೆ ಆಡುತ್ತಿದ್ದರೆ? ಹೌದು, ಇದೆ, ಇದೆ.

ಒಮ್ಮೊಮ್ಮೆ ನಮ್ಮ ವಿಚಾರ ನಮಗೆ ತಿಳಿಯುವುದಕ್ಕಿಂತ ಇತರರಿಗೆ ಹೆಚ್ಚು ಚೆನ್ನಾಗಿ ತಿಳಿಯುತ್ತದೆ. ನಾವು ನಮ್ಮ ವಿಷಯದಲ್ಲಿ ಕುರುಡರಾಗಿ ಕಿವುಡರಾಗಿ ಇರುತ್ತೇವೆ–ನಮ್ಮ ಅವಗುಣಕ್ಕೆ ಬಗ್ಗಿ ಹೋಗಿ. ನಿಜ, ನಿಜ, ಅದು ಸಾಧ್ಯ. ನಾವು ನಮ್ಮನ್ನು ಯಾವಾಗಲೂ ಸಮರ್ಥಿಸಿಕೊಳ್ಳುವುದಕ್ಕೆ ಇದೇ ಕಾರಣ ತಾನೆ? ಅದರೇನು, ತಿಳಿದೋ ತಿಳಿಯದೆಯೋ ನಮ್ಮನ್ನು ನಾವು ಮೋಸಗೊಳಿಸಿಕೊಂಡರೂ ನಮ್ಮ ಬಣ್ಣ ಇತರರಿಗೆ ಗೊತ್ತಾಗಬಹುದಲ್ಲ.

“Face is the index of the mind” ಅನ್ನುತ್ತಾರಲ್ಲ, ಹಾಗೆ ನಮಗೇ ತಿಳಿ

ಯುದೆ ನಮ್ಮ ಮನಸ್ಸಿನಲ್ಲಿರುವುದು ನಮ್ಮ ಮುಖದಲ್ಲಿ ಕಾಣಿಸುತ್ತದೆಯೇ? ಅಕಸ್ಮಾತ್ತಾಗಿ ಮುಖ ದೃಷ್ಟಿ ನಿಜವಾಗಿ ಮಾರ್ಪಡುತ್ತ ಇಯೆ ಆಸ್ಕರ್ ವೈಲ್ಡ್‌ನ "face of Dorian Gray" ಹಾಗೆ? ನನ್ನ ಮನಸ್ಸಿನಲ್ಲಿ ಅಂಥಾದ್ದು ಇದೆಯೆ? ನನಗೇಕೆ ಕಾಣಿಸುತ್ತಿಲ್ಲ?

ಮೇಲು ಪದರದಲ್ಲಿ ಇಲ್ಲದಿರಬಹುದು, ಆಳ ಪದರದಲ್ಲಿ ಸುಪ್ತ ಚೇತನದಲ್ಲಿ ಇದ್ದರೋ?

ನನ್ನೊಳಗೆ ಹೆಡೆಯೆತ್ತಿ ಕಂಡ ಘಟಸರ್ಪಗಳನ್ನು ತುಳಿ ತುಳಿಯುತ್ತಿರುವುದು ಎಂದಿನಿಂದಲೂ ಆಗುತ್ತಲೇ ಇದೆ, ಸರ್ಪಗಳು ಸಾಯದಿದ್ದರೂ. ಆದರೆ ಕಾಣದ ಸರ್ಪಗಳ ಹೆಡೆ ತುಳಿಯುವುದು ಹೇಗೆ?

ಹಾಗಾದರೆ...ಹಾಗಾದರೆ... ಈ ನಟ ನಟಿ ಚಿತ್ರ ವಿಚಾರ, ಈ ಕನ್ಯಾನ್ವೇಷಣ ಇವೆಲ್ಲ ಒಂದರ ಮೇಲೊಂದು ಹೊದಿಕೆಗಳು—ಕೆಳಗಿನದನ್ನು ಮುಚ್ಚಿಡುವುದಕ್ಕೆ?......ನನ್ನದು ಸೋಗೇ ಏನಿ ನಟನೆಯೇ, ನನ್ನನ್ನು ನನ್ನಿಂದಲೇ ಬೇಕಾದರೆ ಬಚ್ಚಿಟ್ಟುಕೊಳ್ಳುವುದಕ್ಕೆ?

①

②

ನನ್ನದು ಬಹಳ ಹಿಂದಿನಿಂದಲೂ ಸುಶಿಕ್ಷಿತ ಮನಸ್ಸು ಎಂದು ಅರಿತಿದ್ದೆನಲ್ಲ, ಅದರ ಮೇಲೆ ಈಗಲಂತೂ ಆಸೆ ಚಾಪಲ್ಯಗಳು ಅಡಗಿದ ವಯಸ್ಸು, ಸಂಶಯೋತ್ಪತ್ತಿಗೆ ಕಾರಣವೇ ಆಗದ ರಕ್ಷೆ ಅದು, ಎಂದು ಸ್ವಲ್ಪ ಸ್ವತಂತ್ರಿಸಿದ್ದೆನೆ? ಅದು ತಪ್ಪು ಮಾಡಿಸಿದ್ದಿತೆ?

ಅಥವ ಆ "Girls in summer dresses" (ಬೇಸಿಗೆಯುಡುಪಿನ ಹುಡುಗಿಯರು) ರಸಿಕ ಕರ್ತೃವಿನಂತೆ ಚೆಲುವಿನ ಆಕರ್ಷಣೆಯಲ್ಲಿ, ನೇರ ವೀಕ್ಷಣ ಆಕರ್ಷಣೆಯಲ್ಲಿ ಸಿಲುಕಿದ್ದೆನೆ?

ಏನು ಕಣ್ಣಲ್ಲಿ ಹುಳಿ ಹಿಂಗದ ಹಳೆಯ ಹುಣಸೆ ಮರವೆ ನಾನು ಇನ್ನೂ? ಯಾರಿಗೆ ಗೊತ್ತು, ಯಾರಿಗೆ ಗೊತ್ತಪ್ಪಾ...ಏನೆಂದರೂ ಆದರೂ ಮೂಲದಲ್ಲಿ ನಾನೂ ಒಂದು ಗಂಡೇ ತಾನೆ?

ಅಂದ ಮೇಲೆ ಹುಡುಗಿಯರೆಂದರೆ ಬಾಯಿ ಬಿಡುವ ವ್ಯಂಗ್ಯ ಚಿತ್ರಗಳ ಪಾಪ್ ಜಗ್ಸ್ ಗೋತ್ರಕ್ಕೆ ನಾನೂ ಸೇರಿದ್ದೇನೆಯೆ? ನಿಜವೆ?

ಕಾಮ ವಿಷಯದ ಬಗ್ಗೆ ಕೇಳಿದಾಗ ಮುದಿ ಸಫೋಕ್ಲಿಸ್ ಕವಿ ಅಂದನಂತೆ ಆ ಮಲಗಿದ ದೈತ್ಯ ಭೂತವನ್ನು ಎಚ್ಚರಿಸಬೇಡ ಅಂತಲೇನೋ. ...ಪರ್ಥರ್ ಮೀಸ್ಟರ್, ಫಾಸ್ಟಗಳ ಕರ್ತೃ ಗಯಟೆ ತನ್ನ ಎಂಬತ್ತನೆಯ ವಯಸ್ಸಿನಲ್ಲೇನೋ ಹದಿನೆಂಟರ ತರುಣಿಯೊಬ್ಬಳಲ್ಲಿ ಹುಚ್ಚು ಮೋಹಾಗಿ ಅನುರಕ್ತನಾಗಿ ಬಿಟ್ಟಿದ್ದನಂತೆ ಏನು ಹೇಳುವುದು ಹೆಂಗಸರ ವಿಚಾರವೆಂದರೆ ಶವಪೆಟ್ಟಿಗೆಯಲ್ಲಿ ಮಲಗಿಕೊಂಡು ಹೇಳಿಬಿಟ್ಟು ಕೂಡಲೇ ಮುಚ್ಚಳ ಹಾಕಿಕೊಂಡು ಬಿಡಬೇಕೆಂದು ಅನುಭವಿ ಟಾಲ್ಸ್ ಟಾಯ್ ಹೇಳಿದುದು ಯಾವ ಯಾವ ಅರ್ಥದಲ್ಲೋ...ಮುಪ್ಪಡರಿದ ಯಯಾತಿ ಪುರೂರವನ ಯೌವನವನ್ನಾಶಿಸಿ ಪಡೆದು...ಕೈಕೇಯಿ [illegible] ಮಾಡಿಕೊಂಡ ದಶರಥ ರಾಮಾಯಣವನ್ನೇ ಮಾಡಿದ...ಪ್ರಾಯ ಬಂದ ಮಗನಿದ್ದ ಶಂತನು ಯೋಜನಗಂಧಿಗೆ ಮರುಳಾಗಿ ಮಹಾಭಾರತ ಮಾಡಿದ, ಅಷ್ಟೇ ಆ ಜನ್ಮಾಂತ [illegible]

ಅದೇ, ಅದೇ ಅಂಗಡಿ, ಅದೇ ಚಹಾ
ಸ್ವಾದ ಮಾತ್ರ ಪ್ರತಿ ಸಲ ಬೇರೆ!
ಇದಕ್ಕೇನು ಉಪಾಯ?






# ಬೃಂದಾವನ ಚಹಾ



## ಪ್ರತಿ ಸಲ ಅದೇ ಸ್ವಾದ, ಅದೇ ಚಹಾದ ಮೋದ!

ದಿನ ಪ್ರತಿ ದಿನ ಚಹಾದ 500 ಕಪ್‌ಗಳ ಪರೀಕ್ಷೆಯ
ನಂತರವೇ ಈ ಚಹಾದ ಮಿಶ್ರಣ ಸಿದ್ಧವಾಗುತ್ತದೆ;
ಇದರಿಂದ ಬೇರೆ ಬೇರೆ ಗುಣಮಟ್ಟದ ಬಿಡಿಯಾದ
ಬೃಂದಾವನ ಚಹಾ ತಯಾರಿಸಲಾಗುತ್ತದೆ.
ಈ ಕಟ್ಟುನಿಟ್ಟಿನ ಮೇಲ್ವಿಚಾರಣೆಯಲ್ಲಿ ನಮ್ಮ
40 ವರ್ಷಗಳ ಅನುಭವವೂ ಸೇರಿದೆ.
ಎಂಥ ಪ್ರಕಾರದ ಬೃಂದಾವನ ಚಹಾ ನಿಮಗೆ ಬೇಕು?
ಕಡುಸ್ವಾದದ್ದು, ಸ್ವಾದಭರಿತ ಅಥವಾ ಸುವಾಸಿತ?
ಯಾವುದೇ ಇರಲಿ—ನೀವು ಮೊದಲು ಪಡೆದ ಸುಖವನ್ನೇ
ಪ್ರತಿ ಸಲ ಪಡೆಯಬಹುದಾಗಿದೆ.




**ಸದಾ ಅದೇ ಮಿಶ್ರಣ, ಸದಾ ಅದೇ ಗುಣ ಮಟ್ಟದ ಉತ್ತಮ ಬೃಂದಾವನ ಚಹಾ**

ಆಯ್ದ ನಗರಗಳಲ್ಲಿ ಮಾತ್ರ ಲಭ್ಯ.

UNTAS.BRZ.8

ಗಂಧಿಯ ಸಂಬಂಧ ಮಾಡಿದ ಮಹಾಮುನಿ ಪರಾಶರರಿಗೆ ಹೋಗಬೇಕೇನೋ... ಶುಕಮುನಿ ಹತ್ತಿರದಲ್ಲೇ ಹೋಗುತ್ತಿದ್ದರೆ ಜಲಕ್ರೀಡೆಯಲ್ಲೇ ಇರುತ್ತಿದ್ದ ಸ್ತ್ರೀಯರು ವ್ಯಾಸರನ್ನು ದೂರದಲ್ಲಿ ಕಂಡೊಡನೆಯೇ ದಡಕ್ಕೆ ಓಡಿ ಹೋಗಿ ಬಟ್ಟೆ ಸುತ್ತಿಕೊಳ್ಳುತ್ತಿದ್ದರಂತೆ!... ವಿಶ್ವಾಮಿತ್ರನೂ ರಾವಣನೂ ಕೂಡ ಮಹಾತಪಸ್ವಿಗಳೇ!...ಹುಂ ಈ ಪಟ್ಟಿಗೆ ಕೊನೆಯಲ್ಲಿ, ಮೊದಲೆಲ್ಲಿ? ಮಾನವ ಚರಿತ್ರೆಯ ತುಂಬ ಈ ಪ್ರಾಣಿ ಚರಿತ್ರೆಯೇ!... ಅಂದ ಮೇಲೆ ನಾನು ಯಾವ ರಾಮ, ಭೀಷ್ಮ, ಶುಕಮುನಿ?... ನಾನು ಆರಿದೆಯೆಂದು ತಿಳಿದು ಕೊಂಡ ಈ ನನ್ನ ಪುರಾತನ ಅಗ್ನಿಪರ್ವತದ ಆಳ ದಲ್ಲಿ ಎಲ್ಲೋ ಅಷ್ಟಿಷ್ಟು ಬಿಸಿ ಇನ್ನೂ ಇದ್ದರೆ ಆಶ್ಚರ್ಯವೇನು?

ನಮ್ಮ ಮನುಸ್ಮೃತಿಯಲ್ಲಿ ಯಾರೊಬ್ಬನೂ ತನ್ನ ತಾಯಿಯೊಡನಾಗಲೀ ಸಹೋದರಿಯೊಡನಾಗಲೀ ಮಗಳೊಡನೆಯಾಗಲೀ ಕೂಡ ಏಕಾಂತ ಹಾವ ಸ್ಥಳದಲ್ಲಿರಕೂಡದು ಎಂತಲೋ ಇಲ್ಲವೆ? ಅಂದರೆ ವಿಷಯ ವ್ಯಾಪ್ತಿ ಶಕ್ತಿ ಎಷ್ಟೆಂದು ಹೇಳೋಣ ನಾನು ಹೊರತು ಹೇಗಾಗಬಲ್ಲೆ?

ಮಹಾ ಮನೋವಿಜ್ಞಾನಿ ಫ್ರಾಯ್ಡನನ್ನು ನಂಬುವುದಾದರೆ ಲಿಬಿಡೊ (Libido) ಲೇಪ ವಿಲ್ಲದ ಬಹಳ ಮಟ್ಟಿಗೆ ಲೈಂಗಿಕ ಕಾಮವೆನ್ನುವ ಅರ್ಥದಲ್ಲೇ ಮಾನವ ಕ್ರಿಯೆಗಳು ಸಂಬಂಧಗಳು ಇಲ್ಲವೇ ಇಲ್ಲವೆನ್ನುತ್ತದೆಯೋ. ಆಗ ತಾನೆ ಹುಟ್ಟಿ ಎದೆ ಹಾಲು ಕುಡಿಯುವ ಕಂದನಿಂದ ಕಡೆಯ ಉಸಿರೆಳೆಯುತ್ತಿರುವ ಅಜ್ಜ ಅಜ್ಜಿ ಮುದು ಕರ ವರೆಗೆ ಎಲ್ಲರೂ ಲೈಂಗಿಕಾಸಕ್ತಿಯ ತಳಹದಿಯ ಮೇಲೆ ನಡೆಯುವವರೇ? ನೋಡಿದರೆ ಮುಟ್ಟಿ ದರೆ ಮಾಸಿದರೆ ಮಾಡಿದರೆ ವಾಯ್ಯೂರಿಸಂ ಫೆಟಿಷಿಸಂ ಇಸಂ ಇಸಂ ಪರಂಪರೆಯೇ. ತಾಯಿ ಮಗನೆಂದರೆ ಇಡಿಪಸ್ ಕಾಂಪ್ಲೆಕ್ಸ್, ತಂದೆ ಮಗ ಳೆಂದರೆ ಇಲೆಕ್ಟ್ರಾ ಕಾಂಪ್ಲೆಕ್ಸ್, ಗಂಡು ಗಂಡಿನ ಸ್ನೇಹವೆಂದರೆ ಹೋಮೋಸೆಕ್ಷುವಾಲಿಟಿ ಕಾಂಪ್ಲೆಕ್ಸ್, ಹೆಣ್ಣು ಹೆಣ್ಣಿನ ಸ್ನೇಹ ಲೆಸ್ಬಿಯನ್ ಕಾಂಪ್ಲೆಕ್ಸ್ ಎಲ್ಲ ಕಾಂಪ್ಲೆಕ್ಸಗಳೇ (ಸಂಕೀರ್ಣವೇ). ಸರಳ ವಾದದ್ದೇನೂ ಇಲ್ಲ. ಗಂಡು ಹೆಣ್ಣಿನೊಡನೆ ರಭಸದಿಂದ ನಡೆದುಕೊಂಡರೆ ಸ್ಯಾಡಿಸಂ ಹೆಣ್ಣು ಒರಟಾಟಕ್ಕೆ ಇಷ್ಟಪಟ್ಟರೆ ಮಾಸೋಕಿಸಂ... ಅಂತೂ ಕಾಮಮಯ ಜಗತ್ ನನಗೂ ಇದು ಬಳಿದುಕೊಂಡೇ ಅಂಟಿಕೊಂಡೇ ಏಕಿರಬಾರದು?

ಮತ್ತಷ್ಟು ಸ್ವಸಮರ್ಥನೆ!

ಇಷ್ಟಕ್ಕೂ ಆ ಫ್ರಾಯ್ಡನಿಗೇ ಕಡೆ ಕಡೆಗೆ ತನ್ನ ಲಿಬಿಡೋ ಪುರಾಣ ವಿಪರೀತವಾಗಿ ಕಂಡು ನಂಬಿಕೆ ಸಡಲಿ ಅವನು ತನ್ನ ಅಭಿಪ್ರಾಯವನ್ನು ಬದಲಾಯಿಸಿಕೊಳ್ಳುತ್ತಿದ್ದನಂತಲ್ಲ ಅದೇ ನನಗೆ ಊರುಗೋಲು?...ಈ ಪದಪದಮಯ ಸೂತ್ರ ಸೂತ್ರಮಯ ಸಾಮಾನ್ಯಕ್ಕೆಲ್ಲ......ಲಿಬಿಡೋ ಮನೋವಿಜ್ಞಾನ, ಆತ್ಮ ಪರಮಾತ್ಮ ತತ್ತ್ವ ಶಾಸ್ತ್ರ ಬಂಡವಾಳಗಳತ ಬೇಕಿ ಕಾರ್ಮಿಕ ಸರ್ವಾ ಧಿಕಾರ ವರ್ಗದ್ವೇಷ ವಿಷಜ್ವಾಲೆಯ ಅರ್ಥಶಾಸ್ತ್ರ ಇವುಗಳಲ್ಲಿರುವಷ್ಟು ಹೋಕಸ್ ಪೋಕಸ್ (ಸುಳ್ಳು ಜೊಳ್ಳು) ಇನ್ನಾವುದರಲ್ಲಿಯೂ ಇಲ್ಲ. ಜಗತ್ತು ಈ ಮಾನಸಿಕ ರೋಗಗ್ರಸ್ತವಾಗಿದೆಯೋ ಇಲ್ಲವೋ, ಇಲ್ಲದ ಸಲ್ಲದ ಕಾಮ ಸಾಂಕ್ರಾಮಿ ಸನ್ನಿಜ್ವರ ಹರಡಿದ ಫ್ರಾಯ್ಡನಂತೂ ಮಹಾ ರೋಗಿಷ್ಠ. ಅವನ ಹಿಂದೆ ಅವಿತುಕೊಂಡು ಸಮಾಜದ ಕೈಯಿಂದ ತಪ್ಪಿಸಿಕೊಳ್ಳಲೆ? ಸ್ವಾಸ್ಥ್ಯ ಚೆನ್ನಾಯಿತು, ಚೆನ್ನಾಯಿತು!......ಲೈಂಗಿಕತೆಯ ಲೇಪವಿಲ್ಲದ ಭಾವನೆ ಸಂಬಂಧಗಳಿಲ್ಲವೆ? ಇವೆ ಇವೆ ಬೇಕಾದಷ್ಟು...ರಾಮ ಭೀಷ್ಮ ಶು ಇದ್ದರಲ್ಲ. ನಾನು ಕೂಡ ಇಲ್ಲಿ ನಿರ್ಲೇಪದಿಂ ಇರಬಾರದೆ?...ಫ್ರಾಯ್ಡನೊಬ್ಬ ಕೆಟ್ಟ, ಅವ ತಲೆ ಬೋಳಿಸಿದರು.

ಇಷ್ಟಕ್ಕೂ ಆ ಲಿಬಿಡೋ ಸರ್ವವ್ಯಾಪಿ ಸರ್ವ ಶಕ್ತ ಆಗಿರಲಿ ಬಿಡಲಿ, ಈಗ ಜನ ಸಾಮಾನ್ಯ ಇಲ್ಲವೆ ಆಯಾ ಸಮಾಜದ ಶಿಸ್ತು ಮರ್ಯಾ ಗಳನ್ನು ಮೀರದೆ? ನನ್ನ ನಂಬಿಕೆ ನನ್ನ ಕಾರ ಯಥಾರ್ಥವೇ ಆಗಲಿ, ಸ್ವಂತ ಮೋಸವೇ ಆಗ ಏನೇ ಆಗಲಿ, ನಾನೂ be a Romon i Rome ಆಗಿ ಇಲ್ಲಿಯ ಮೇರೆಗಳನ್ನು ಮೀರ ಇರಬೇಕಲ್ಲ, ಇಲ್ಲಿ ಬದುಕಿ ಬಾಳುವಾಗ ಹೌದು ಹೌದು ನನ್ನಿಂದ ಇಲ್ಲಿ ಸಾಮಾಜಿಕ ಅಪಚಾ ಆಗಿಯೇ ಇರಬೇಕು. ಹೇಗಾದರೂ ಆಗಿಯೇ ಇ

ಇದೆ, ಸಂಶಯವೇ ಇಲ್ಲ. ಇಲ್ಲದಿದ್ದರೆ ಇವರೆಲ್ಲ ಹೀಗೆ ನಡೆದುಕೊಳ್ಳಬೇಕೆಂದರೆ...ಎಂಥ ನಾಚಿಕೆಗೇಡು! ಎಂಥ ದುರಂತ!

ಆಗಲಿ, ಕಟ್ಟಳೆಯ ಪ್ರಕಾರ ಆಟವಾಡದ ಮೇಲೆ ತಪ್ಪಿಗೆ ತಕ್ಕ ಶಿಕ್ಷೆ ಅನುಭವಿಸೋಣ. ಅದು ನ್ಯಾಯವೇ. ಇವರು ನಗಲಿ, ಅಣಕಿಸಲಿ ಆಕ್ಷೇಪಿಸಲಿ. ಹುಂ ಹುಂ ಸಹಿಸೋಣ ಸಹಿಸಬೇಕಾದದ್ದೆ.

ಅಬ್ಬಬ್ಬ, ಮೈ ಎಷ್ಟು ಉರಿಯುತ್ತಿದೆ!... ಹಾಳು ಧಗೆ ಹೇಗೆ ಏರುತ್ತಿದೆ ಕ್ಷಣಕ್ಷಣಕ್ಕೂ. ಮಳೆ ಬರಬಾರದೆ, ಅದೆಷ್ಟು ಬೇಗ! ಇನ್ನೂ ಮೋಡ ಆವರಿಸುತ್ತಿರುವುದೇ ಆಗದೆಯಲ್ಲ.

ಹೌದು ಮುಖ ಕತ್ತು ಮೇಲು ಬೆನ್ನು ಎದೆಗಳನ್ನು ವಿಪರೀತವಾಗಿ ಉರಿಯುವಷ್ಟು ಉಜ್ಜುತ್ತಿದ್ದೇನೆನಿಸುತ್ತದೆ.

ಓ ಆಗಲೆ ಆರನೆಯ ಬೀದಿಗೆ ಬಂದು ಬಿಟ್ಟಿದ್ದೇನೆ, ಅಲ್ಲಿ ಕಾಲು ಭಾಗದಷ್ಟನ್ನು ನಡೆದೂ ಬಿಟ್ಟಿದ್ದೇನೆ...ಆ ಬಸ್ಸಿನ ಮಾಗು, ಇತರ ಜನರು ಹೊರಟು ಹೋದದ್ದು ಬಸ್ಸು ಹೋದದ್ದು, ನಾನು ಹರಿಹರ ರಸ್ತೆ ದಾಟಿಕೊಂಡದ್ದು, ನನ್ನ ಗಮನಕ್ಕೆ ಬರಲೇ ಇಲ್ಲವಲ್ಲ!

ಅಲ್ಲಾ ಹೀಗೆ, ಮಾಡಿಕೊಂಡೆನಲ್ಲಾ ಅಂತ–ಅವರಿವರು...

ಹ್ಞ ಅವರಿವರು ಯಾರೇನು ಅಂದುಕೊಂಡರೆ ನನಗೇನು? ಒಬ್ಬರು ಅಂದು ಮಾಡಿ ಇನ್ನೊಬ್ಬರು ಕೆಟ್ಟವರಾಗುತ್ತಾರೆಯೆ ಅವರವರೇ, ಅವರವರಿಗೆ ತಿಳಿಯುದಂತೆಯೇ ಕೆಟ್ಟವರಾಗದೇ ನನ್ನ ವಿಚಾರದಲ್ಲಂತೂ ನನಗೆ ಭರವಸೆ ಸಂಪೂರ್ಣ ಭರವಸೆ ತೃಪ್ತಿ ಇವೆಯಲ್ಲ; ಇನ್ನೇನು ಬೇಕು. ಕ್ಷುದ್ರ ಲೋಕ ಏನಾದರೂ ತಿಳಿದುಕೊಳ್ಳಲಿ, ಬೇಕಾದಂತೆ ಬೊಗಳಲಿ, ಮನಸಿಗೆ ಬಂದದ್ದು ಮಾಡಲಿ! ಅಷ್ಟೆ. ಸಮಯ ಬಂದಿತೋ, ಸ್ಪಷ್ಟಪಡಿಸಿದರಾಯಿತು; ಇಲ್ಲದಿದ್ದರೆ ಹಾಗೆಯೇ ಇರಲಿ ಇರಲಿ...?

ಮಳೆಗಾಳಿ ಎಲ್ಲೋ ಸ್ವಲ್ಪ ಬೀಸಿ ಹೋಗುತ್ತದೆ. ಮಳೆಯ ವಾಸನೆಯೂ ಬಂದಂತಾಗುತ್ತದೆ.

ಆದರೂ...ಆದರೂ ಸಾರ್ವಜನಿಕಾಭಿಪ್ರಾಯ ಅಂತ ಒಂದು ಇದೆಯಲ್ಲಪ್ಪಾ!

ಇರಲಿ ಇರಲಿ ಅದಕ್ಕೆ ನನ್ನ ಎಡಗಾಲನ್ನು ತೋರಿಸುತ್ತೇನೆ ನಾನು ಸರಿಯಾಗಿದ್ದೇನೆಂದಾಗ.

ಹಾಸ್ಯಾಸ್ಪದಕ್ಕಾಗುತ್ತದೆಯೇ– ಇಷ್ಟು ಬಾಳಬೇಕಾದುದಾಗ ನ್ಯಾಯ ನ್ಯಾಯವಾದರೆ ಸಾಕಷ್ಟೇ ಅಲ್ಲ, ನ್ಯಾಯವಾಗಿ ಕಾಣಲೂ ಬೇಕು ಎಂದಿರುವಂತೆ ಸಾರ್ವಜನಿಕ ಜೀವನದಲ್ಲೂ ಸರಿಯಾಗಿ ಕಾಣಲೂ ಬೇಕಲ್ಲ.

ಊ ಹುಂ. ಪರವಾಗಿಲ್ಲ. ಸಾರ್ವಜನಿಕರಿಗೆ ಸರಿಯಾಗಿರಬೇಕೆಂದು ಹೆದರಿಹೆದರಿಕೊಂಡು ಹೊಂದಿ ಹೊಂದಿಕೊಂಡು ಒಂದೊಂದಾಗಿ ನಮ್ಮ ವೈಶಿಷ್ಟ್ಯಗಳನ್ನೆಲ್ಲ ಕಡಿದು ಹಾಕುತ್ತ ಹೋದರೆ ನಾವು ಕಡೆಗಾಗುವುದು ಕೋಳಿಮೊಟ್ಟೆಯೇ – ದುಂಡಗೆ ನುಣ್ಣಗೆ ಬೆಳ್ಳಗೆ ನೂರಲ್ಲಿ ತೊಂಬತ್ತೊಂಬತ್ತು ಜನ ಇರುವಂತೆ ಒಬ್ಬರ ಕಾರ್ಬನ್ ಪ್ರತಿಯಂತೆ ಇನ್ನೊಬ್ಬರು ಅಭಿರುಚಿಯಲ್ಲಿ ನಡೆವಳಿಕೆಯಲ್ಲಿ ನಾನೇಕೆ ನಾನೇ ಆಗಿರಬಾರದು, ನಿರ್ನಾಮವೇಕಾಗಬೇಕು ? ತಪ್ಪೆಲ್ಲಿ ? ವೈಶಿಷ್ಟ್ಯವನ್ನೇಕೆ ಕಳೆದುಕೊಳ್ಳಬೇಕು ?

ಆದು ಸರೀ...ವೈಶಿಷ್ಟ್ಯವೆಂದರೆ ಶಿಷ್ಟವಾಗಿರಬೇಕಲ್ಲ, ದುಷ್ಟವಾಗಿರಬಾರದಲ್ಲ.

ಏನು ದುಷ್ಟ? ಏನು ದುಷ್ಟ? ಎಲ್ಲಿ ಹೇಗೆ, ಸುಳ್ಳು! ಬರಿ ಸುಳ್ಳು! ಒಪ್ಪುವುದಿಲ್ಲ, ನಾನು ಒಪ್ಪುವುದಿಲ್ಲ ಹಾಳಾಗಲಿ! damn it !

ಅಯ್ಯೋ ಅಯ್ಯೋ ನನಗೇನಾಗಿದೆ ಈಗ ಇವತ್ತು! ಹೀಗಾಡುತ್ತಿದ್ದೇನಲ್ಲ–ದೋಸೆ ಮಗುಚಿ ಮಗುಚಿ ಹಾಕಿದಂತೆ !

ಥೂ ! ಥೂ ! ಸಾಕು ! ಒತ್ತರಿಸು ಅತ್ತ ಬಾಯಿ ಮುಚ್ಚು! ಹುಚ್ಚನಂತಾಗಬೇಡ! ಏನಾದದ್ದಕ್ಕೆ? ಬಿಡು ನಿನ್ನ ಕಲ್ಪನೆ ! ಧೈರ್ಯವಾಗಿ ಜೋರಾಗಿ ನಾಲ್ಕು ಹೆಜ್ಜೆ ಹಾಕುತ್ತೇನೆ.

ನನ್ನ ಕಲ್ಪನೆಯೇ? ಅಷ್ಟೇಯೆ?...ಅಲ್ಲವಲ್ಲ ಕಣ್ಣಾರೆ ಕಂಡಿದ್ದೇನೆ ಸ್ಪಷ್ಟವಾಗಿ, ಕಿವಿಯಾರ ಕೇಳಿದ್ದೇನೆ, ಅರ್ಧಂಬರ್ಧ, ಅಸ್ಪಷ್ಟವಾದ್ದರೂ, ಬಸ್ಸಿನಲ್ಲಿ, ಬೀದಿಗಳಲ್ಲಿ, ಪೇಟೆಯ ಅಂಗಡಿಗಳಲ್ಲಿ...

ಯೋಚಿಸುತ್ತಿದ್ದಂತೆ ಹೆಜ್ಜೆ ತಾನಾಗಿಯೇ ನಿಧಾನವಾಗುತ್ತದೆ, ಇನ್ನೂ ನಾಲ್ಕು ಹೆಜ್ಜೆ

ಹಾಕುತ್ತೇನೆ.

ಅಗೋ, ಈಗಲೂ ಇಲ್ಲಿ ಕೂಡ!

ಎಡಗಡೆಯ ಅಡ್ಡ ದಾರಿಯನ್ನು ಹಿಂದೆ ಬಿಡುತ್ತಿರುವಂತೆ ಅಲ್ಲಿಂದ ನಗು ಮಾತು ಕೇಳಿಸುತ್ತದೆ. ಹೆಣ್ಣು ಮಕ್ಕಳ ಗುಂಪಿನದು ಸಂದೇಹವೇ ಇಲ್ಲ.

ಯಾರಿವರು? ಅವರೇ—ಪಾರ್ಕಿನವರೇ?

ಹೇಗೆ ಗೊತ್ತಾಗಬೇಕು, ಅವರನ್ನು ನೋಡಲೇ ಇಲ್ಲವಲ್ಲ.

ಅವರತ್ತ ಕತ್ತು ತಿರುಗಿಸದೆಯೇ, ಕಡೆಗಣ್ಣಿನಿಂದಲೂ ನೋಡದೆಯೇ ಮುಂದೆ ಸಾಗುತ್ತೇನೆ.

ಓ ಅವರೂ, ಈ ಆರನೇ ಬೀದಿಗೆ ತಿರುಗಿ ಹಿಂದೆ ಬರುವಂತಿದೆಯಲ್ಲ? ಹುಂ ಬರುತ್ತಿದ್ದಾರೆ. ನನ್ನ ಹಿಂದೆಯೇ.

ಬೇಕಾಗಿಯೇ ನನ್ನನ್ನು ಹಿಂಬಾಲಿಸುತ್ತಿದ್ದಾರೆಯೆ? ಏನೋ ಹೇಗೋ.

ಛೆ ಭ್ರಾಂತಿ! ಅವರ ಕೆಲಸಕ್ಕೆನೋ ಏಕೆ ತಿರುಗಿರಬಾರದು, ಬರುತ್ತಿರಬಾರದು? ಸುಮ್ಮನೆ ಅಲ್ಲಿ ಇಲ್ಲಿ ಅಲೆಯುತ್ತಲೂ ಇರಬಹುದು – ಸಂಜೆ ಮೆರವಣಿಗೆ.

ಸ್ವಲ್ಪ ಹೆಜ್ಜೆ ನಿಧಾನಿಸೋಣ, ಅವರು ಇನ್ನೂ ಹತ್ತಿರವಾಗಲಿ, ಅವರ ಮಾತನ್ನು ಕಿವಿಗೊಟ್ಟು ಆಲಿಸೋಣ, ಆಗ ಎಲ್ಲವೂ ತಿಳಿದೇ ತಿಳಿಯುತ್ತದೆ.

ಊಹುಂ ಊಹುಂ ಕಂಡಂತೆ ಹೆಜ್ಜೆ ನಿಧಾನಿಸಬಾರದು. ಅದು ಇಲ್ಲದ ಸಲ್ಲದ ಸಂಶಯಕ್ಕೆ ಎಡೆಗೊಟ್ಟೀತು. ಈ ವರೆಗೆ ಆಗಿರುವುದೇ ಸಾಕು. ಕಿವಿ ಬೇಕಾದರೆ ಕೊಡೋಣ.

ಬರಿ ಗುಜುಗುಜು ಕಿಸಿಕಿಸಿಯಲ್ಲಾ। ಏನೂ ಸ್ಪಷ್ಟವಾಗಿ ಕೇಳಿಸುತ್ತಲೇ ಇಲ್ಲವಲ್ಲ ಆ? ಅ?

"ಆ... ಹುಚ್ಚ ಕಣೇ..." ಒಂದು ಮಗುವಿನ ಮಾತು.

ಅಂದರೆ ಅಂದರೆ? ಆ ಅಂದರೆ ಅವನು ಅವನಿಗೆ ಅಂತಲೆ? ಹುಚ್ಚ ಹುಚ್ಚ ಎಂಥ ಹುಚ್ಚ? ಹಿಂದಿನ ಮಾತು ಕೇಳಿಸಲಿಲ್ಲವಲ್ಲ......ಹೆಣ್ಣಿನ ಹುಚ್ಚ? ಹಾಗೆ ಅಂತಲೇ...ಯಾರಿಗೆ? ಅವನಿಗೆ ಅಂದರೆ?...ತಾಳು ತಾಳು ಕೇಳು ಇನ್ನೂ?

"ಆಡ್ತಾ...ಆಡ್ತಾ......ತೀಯೆ" ಇನ್ನೊಬ್ಬಳ ಮಾತು.

"ಆಡ್ತಾ-ತೀಯೆ...ಆಡ್ತಾ-ತೀಯೆ"...ಆಡ್ತಾ ಅಂತಿಯೇ...ಹಾಗಿರಬಹುದೆ? ಹೇಗೆ ಆಡ್ತಾ ಆ ಅಂತೀಯೆ ಅಂತಲೇ? ಹೇ ಹೇಗೆ ಹೇಗ ಆಡ್ತಿದೀನಿ ನಾನು?...ಏನೂ ಇಲ್ಲವಲ್ಲ, ಸರಿ ಯಾಗೇ ಇದೀನಲ್ಲ?...ಏನೋ ಕೊಂಚ ನೋಡಿ ರಬಹುದು. ಯಾರು ಯಾರನ್ನೋ, ಎಲ್ಲೆಲ್ಲಿಯೋ ಯಾವ ಯಾವಾಗಲೋ...ನನ್ನ ಕಾರಣಕ್ಕಾಗಿ ಅಷ್ಟೆ...ಹ್ಞಾ ಅದೇನು, ಅದೇನು ಕೇಳಿಸಿದ್ದು?

'...ಅವಳನ್ನ...'

ಅಂದರೆ ಯಾರನ್ನು?...ಬಸ್ಸಿನಿಂದ ಇಳಿದ ದುಂಡು ಮುಖದ ಹುಡುಗೀನೇ?...ಆ ಬೀಸುಸೆರ ಗಿನ ಗಿಡ್ಡ ಹುಡುಗೀನೇ?...ಅಂದ ಮೊಗದ ಉದ್ದ ಮಗುನೇ? ಯಾರನ್ನು?...ಏನು ಮಾಡಿದೆ ಅಂತ? ಇಲ್ಲೇ ನಿಂತು ಇವರು ಹತ್ತಿರಕ್ಕೆ ಬಂದ ಮೇಲೆ...

ನಿಲ್ಲುವುದಿಲ್ಲ, ನಡೆಯುತ್ತಲೇ ಇರುತ್ತೇನೆ ಇನ್ನೂ ಆಲಿಸಿ ಕೇಳುತ್ತಲೇ.

"ಎಂಥ...ಮಗ...ಇಲ್ಲ ಕಣೇ."

ಏನು ಬಯ್ಯುತ್ತ ಇದ್ದಾರೇ – ಎಂಥ ಮುಂಡೆ ಮಗ ಅಂತಲೇನಾದರೂ? ಇಲ್ಲಕಣೆ ಅಂದರೆ? ಏನಿಲ್ಲ ಅಂತ? ನಾಚಿಕೆ ಮೇಟಿಕೆ ಏನೂ ಇಲ್ಲ ಅಂತಗೀತಲೋ?...ಹ್ಞೂ।

"...ಣ ಕಣ್ರೇ...ತೀರಾ?"

ಅವರಿಂದ ಉತ್ಸಾಹದ ಹುಂಕಣೆ, ಹುಂಕಣೆ ಒಪ್ಪಿಗೆ ನಗುವಿನೊಡನೆ.

ಏನು ಅವಳು...ಣ ಅಂದದ್ದು...ಕೇಳೋಣ ಅದನ್ನು ಎಂದೆ?...ಕೇಳೋಣ ಮುಂದಕನ್ನು ಎಂದೋ?... ಮಾಡೋಣ ಏನಾದರೂ ಅಂದಳೋ? ಮಾಡೋದು ಏನನ್ನು?

"ಬ–ಚೆನ್ನಾ..."

ಏನು ಅದು...? ತುಂಬ ಚೆನ್ನಾಗಿರುತ್ತೆ ಅಂತಲೋ? ಏನು, ಚೆನ್ನಾಗಿರೋದು? ಇವರು ಮಾಡಬೇಕು ಅಂತ ಇರೋದು?

ತಲೆಯೊರಿಸಿಕೊಳ್ಳುತ್ತಿದ್ದ ಬಾಕ ಕೈ ತಪ್ಪಿ ರಸ್ತೆಗೆ ಬೀಳುತ್ತದೆ, ಹಿಂದೆ. ನಾನು ಅರೆ ಹಿಂತಿರುಗಿ ಅದನ್ನು ಎತ್ತಿಕೊಳ್ಳುವಾಗ ದೃಷ್ಟಿ ಆ ಮಕ್ಕಳ ಕಡೆಗೆ ಮಿಂಚಿ ಬರದಿರುವುದಿಲ್ಲ. ಅವರೆಲ್ಲರ ಕಣ್ಣು

ಗಳೂ ನನ್ನನ್ನೇ ನೋಡುತ್ತಿವೆಯೆ ಎನ್ನಿಸುತ್ತದೆ. ತುಟಿಗಳ ಕೊನೆ ನಗುವೂ ಮಿನುಗುತ್ತಿರುತ್ತದೆ.

ಅದೇಕೆ, ಚೌಕ ಬಿದ್ದಿತೇನೋ...ಅಥವಾ?

ಅರೆ ಒದ್ದೆಯಾದ ಬೀದಿಯ ಮಣ್ಣಾದ ಚೌಕ ವನ್ನೆತ್ತಿಕೊಂಡು ಬೇಗ ಬೇಗ ನಡೆಯುತ್ತೇನೆ.

ಆಗಲಿ ಆಗಲಿ, ಇವರೇನು ಆಡುತ್ತಾರೋ ಮಾಡುತ್ತಾರೋ ನೋಡೋಣ...ಚೇಷ್ಟೆ ಮಾಡಿ ದರೆ ಸರಿಯಾಗಿ ಉತ್ತರ ಕೊಟ್ಟರಾಯಿತು. ಅದು ನನಗೆ ತಿಳಿಯದೆ? ಈ ಚಿಳ್ಳೆ ಪಿಳ್ಳೆಗಳು ನನಗೆ ಯಾವ ಲೆಕ್ಕ!

'ಹಾಗಲ್ಲ ಒಬ್ಬಳು ಹುಡುಗಿಯರೆಂದರೆ ಮುದು ಕರಿಗೆ ಚಪಲ ಎಂದರೆ?'

ಹೀಗೆ ಹುಬ್ಬುಗಂಟಿಕ್ಕಿಕೊಂಡು ಅವಳನ್ನು ಕೊರೆಯುವಂತೆ ನೋಡುತ್ತ "ಹ್ಞ! ಏನಮ್ಮಾ ನಿನ್ನ ಈ ರೂಪದ ಕಡೆಗೆ ಯಾವ ಗಂಡು ಕೀಟ ತಾನೆ ಕಡೆಗಣ್ಣಿಂದಲಾದರೂ ನೋಡೀತು? ಮರುಳಾಗುವುದಿರಲಿ!" ಎಂದು ಹೊಂಕರಿಸು ವುದು...ಹುಂ ಒಳ್ಳೆ ಜೋರಾಗಿರುತ್ತದೆ, ಕಪಾಳಕ್ಕೆ ಬಾರಿಸಿದ ಹಾಗೆ. ಅವಳ ಗೆಳತಿಯರೇ ನಕ್ಕಾರು. ಅವಳ ಮುಖ ಪೆಚ್ಚಾಗುತ್ತದೆ. ಕಣ್ಣೀರೂ ಕಾಣಿಸಿಕೊಳ್ಳಬಹುದು...ಅವಳು ಚೆಲುವೆಯೆ ಆಗಿ ದ್ದರೇ? ಆಗಿದ್ದರೇನು? ಅದು ಏನೇನೂ ಸಾಲದು, ನನ್ನ ಕಣ್ಣಿನಲ್ಲಿ, ಎಂದು ನನ್ನ ಎತ್ತರದ ಅಭಿರುಚಿ ಯನ್ನೂ ಅವಳ ಬಗ್ಗೆ ತಿರಸ್ಕಾರವನ್ನೂ ತೋರಿ ಸುತ್ತದೆ. ಅದೇ ತಾನೆ ಬೇಕಾದದ್ದು —ಅವಳ ಮುಖ ಭಂಗ ನನ್ನ ಶ್ರೇಷ್ಠತೆಯ ಸಾಧನೆ...

ಉಹುಂ ಉಹುಂ ಪಾಪ...ಏನಾದರೇನು, ಅವಳು ಏನೆಂದರೇನು ಎಷ್ಟೆಂದರೂ ಅವಳು ಮಗು. ಅವಳನ್ನು ನೋಯಿಸುವುದೇ ಸ್ವಲ್ಪ ಚೆಲ್ಲಾಟವಾಡಿದ ಮಾತ್ರಕ್ಕೆ?...ಛಿ... ಅದು ನನ್ನ ವಯಸ್ಸಿಗಾಗಲೀ ಘನತೆಗಾಗಲೀ, ವಿನೋದಪರ ಸ್ವಭಾವಕ್ಕಾಗಲೀ ಹೊಂದಿಕೊಳ್ಳುವುದಿಲ್ಲ. ಹೌದು ಅಲ್ಲವೆ. ಗದರಿಕೆ ಬೈಗಳ ಎಂಥ ಉತ್ತರ ಸಮ ರ್ಥನೆ-ಆಕ್ಷೇಪಣೆಗೆ ಆಹ್ವಾದನೆಗೆ. ಅದು ಇರುವ ಸಂಶಯವನ್ನು ಹೆಚ್ಚಿಸಲೇ ಬಹುದು...ನಿಜ, ಅದು ಬೇಡ, ಆ ಮಾರ್ಗ...ಮತ್ತೆ?

"ನನ್ನ ವಯಸ್ಸೇನು, ನಿಮ್ಮ ವಯಸ್ಸೇನು, ಇದರಲ್ಲಿ ತಪ್ಪು ತಿಳಿಯೋದು ಹೇಗೆ ಸಾಧ್ಯ? ಅಷ್ಟು ವಿವೇಚನೆಯಾದರೂ ಬೇಡವೇನಮ್ಮ ಕಾಯಿ–ನನ್ನ ವಯಸ್ಸು ಸಣ್ಣದಾದರೂ ತಿಳಿವಳಿಕೆ ಸ್ವಲ್ಪವಾದರೂ?" ಎಂದು ಕೇಳುವುದು. ಅದು ಅವಳನ್ನು ಎಚ್ಚರಿಸಿದ ಹಾಗೆಯೂ ಇರುತ್ತದೆ. ಕಠಿಣವಾಗಿ ನೋಯಿಸದಂತೆಯೂ ಇರುತ್ತದೆ... ಹುಂ ಅದು ಸರಿ.

ಅವಳು ಹಿಂತಿರುಗಿಸಿ 'ಅದನ್ನೇ ನಾವೂ ಹೇಳೋದು–ನಿಮ್ಮ ವಯಸ್ಸೇನು ನಮ್ಮ ವಯ ಸ್ಸೇನು ಅಂತಲೇ, ಏಕೆ ಹೀಗೆ ಬಾಯಿ ಬಿಡುತ್ತೀರಿ ಎಂತಲೇ ನಿಮ್ಮ ವಿವೇಚನೆ ಏನಾಯಿತು?' ಎಂದು ಕೇಳಿಬಿಟ್ಟರೆ? ಹುಂ ಆಗ?

ಕೇಳಲಿ, ಅದಕ್ಕೇನು ಮಗು ನನ್ನ ವಿವೇಚನೆ ಸರಿಯಾಗಿಯೇ ಇದೆ. ನಿಮ್ಮ ಹೊಸ ಏರು ಪ್ರಾಯ ನಾರ್ಸಿಸಿಸ್ಟ್ ಆಗಿ ನಿಮ್ಮಲ್ಲಿ ನೀವೇ ಮೋಹಗೊಳ್ಳುವ ಕಾಲ. ಇತರರೂ ಯಾರೇ ಆದರೂ ಏನೇ ಅಂತರವಿದ್ದರೂ ನಿಮಗೆ ಮರುಳಾಗುತ್ತಾರೆಂದುಕೊಳ್ಳುವುದು ಸಹಜವಾಗಿಯೇ ಇದೆ. ಹಾಗಿದ್ದು ನಿಮಗೆ ತೋರೋದು ಒಂದೇ ಕಾರಣ ಗಂಡು ಹೆಣ್ಣು ಅಂದರೆ, ಸಿನಿಮಾ ನಾಟಕ ಕಾದಂಬರಿ ನಿಮ್ಮ ನಿಮ್ಮ ಪರಿಕೆ ಪ್ರಪಂಚವು. ನನ್ನಂಥ ವಯಸ್ಸಾದವನಿಗೆ ಬೇರೆ ಬೇರೆ ಕಾರಣ ವಿರಬಾರದೆ? ಇವೆ. ನಿಮ್ಮನ್ನು ಕಂಡು ಬಾಯಿ ಬಿಡಲೇ ಬೇಕೆ? ಎನ್ನುವುದು ಅಲ್ಲಿಗೆ ತಣ್ಣಗಾಗು ತ್ತಾರೆ ಅವರು ಅಲ್ಲವೆ?

ಒಂದು ವೇಳೆ ಅವರು ಸಂದೇಹಪಟ್ಟು ನನ್ನ ಅಂಥ ಕಾರಣಗಳೇನೆಂದು ಕೇಳಿದರೆ?

ಹುಂ ಹುಂ ಆ ಸಂದರ್ಭವೂ ಇದೆ...ಇರಲಿ ಇರುವ ಕಾರಣ ಕೊಟ್ಟರಾಯಿತು.

ಅವರು ನಂಬಿಯಾರೆ? ಬರಿ ಸೋಗು ಎಂದು ಕೊಂಡರೆ? ಅವರನ್ನು ನಂಬಿಸುತ್ತ ಹೋಗಬೇಕೆ? ವಿಚಿತ್ರವಾಗುವುದಿಲ್ಲವೆ?

ಅಯ್ಯೋ, ಒಂದು ವೇಳೆ ಅವರು ನಂಬಿದರೂ ಆ ಕಾರಣಗಳು, ನಗುಪಾಟಲಾಗುವುದಿಲ್ಲವೆ–ಅದ ರಲ್ಲಾಗಿ ಇಂಥ ಎಳೆಯ ಹುಡುಗಿಯರಿಗೆ ಹೇಳಿ ದರೆ? ಹೌದು ಅದೀತು ಅದೀತು. ಅವರು ಅದೇನೋ ಹೇಳುತ್ತಾರಲ್ಲ ಹಾಗೆ ನಕ್ಕಾರು,

ಇನ್ನೂ ಹಾಸ್ಯಮಾಡಿಬಿಟ್ಟಾರು. ಇಲ್ಲೆಲ್ಲ ಭಾರಿ ಗುಲ್ಲೇ ಎದ್ದೀತು, ಗಲಭೆಯೇ ಆದೀತು. ಅಲ್ಲವೇ... ಮೊದಲೇ ಈ ಹೆಣ್ಣು ಮಕ್ಕಳಿಗೆ ನಗುವುದೇ ತಿಳಿಯದು, ಪಾಪ...ಅಲ್ಲದೆ ಅವರು "ಅಲ್ರಿ ನೀವು ವಯಸ್ಸಾದೋರು ಹಾಗೆ ಹೀಗೆ ಅಂತ ಹೇಳಿ ಕೊಡ್ತೀರಲ್ಲ, ನಿಮ್ಮಂಥೋರು ಕಂಡಕಂಡೋರನ್ನೆಲ್ಲ ಕುಲದ ಹುಡುಗೀರನ್ನೆಲ್ಲ ಸಿನಿಮಾಕ್ಕೆಂತ ಕನ್ಯಾನ್ವೇಷಣ ಅಂತ ಹಾಗೆಲ್ಲ ಪರೀಕ್ಷಿಸೋದು ಯಾವ ವಿವೇಚನೆ ಹೇಳಿ. ಅದೂ ಒಂದು ವೇಳೆ ನಿಜಗಿಜವಾದರೂ" ಅಂತ ಅಂದರೆ?

ನಿಜ ನಿಜ ನಾನು ಮಾಡಿರೋದು ಮಾಡಿಕೊಂಡಿರೋದು ಹಾಗೆಯೇ ಇದೆ; ನನ್ನ ವಿವೇಚನೆಗೇನೂ ಬಹುಮಾನ ಕೊಡುವಂತಿಲ್ಲ: ನಡೆವಳಿಕೆಯಲ್ಲಿ ಸ್ವಲ್ಪ ಹೆಚ್ಚು ಎಚ್ಚರಿಕೆ ವಹಿಸಬೇಕಾಗಿತ್ತು...ನನ್ನ ನಂಬಿಕೆ ಭರವಸೆಗಳನ್ನೇ ದೊಡ್ಡದು ಮಾಡಿಕೊಂಡು ಅಲಕ್ಷ್ಯದಿಂದ ಇರದೆ. ಎಷ್ಟಾದರೂ ಇದು ನಮ್ಮ ಸಮಾಜ...

ಹೌದು ಆ ಉತ್ತರವೂ ಸರಿಯಿಲ್ಲ ಇನ್ನೇನು?

ಉಹುಂ ಅವರೊಡನೆ ವಾದ ವಿವಾದವೇ ಬೇಡ...ಮತ್ತೆ?

'"ನೀವು ಕೇವಲ ಮಕ್ಕಳು, ಏನೂ ಅರಿಯದವರು, ಹೇಗೆ ತಿಳಿದುಕೊಂಡರೂ ಪರವಾಗಿಲ್ಲ. ನಾನು ಮಾತ್ರ ಹಾಗಿಲ್ಲವಲ್ಲ–ನೀವು ಯೋಚಿಸುವಂತೆ. ಅದು ಮುಖ್ಯ ನನಗೆ" ಎಂದರೋ ಸ್ವಂತ ಸಮಾಧಾನವಿದ್ದವರು ಹೇಳುವಂತೆ?

ಅದು ತಮ್ಮ ತಮ್ಮನ್ನು ಸಾಧಿಸಿಕೊಳ್ಳುವವರು ಎಲ್ಲರೂ ಕೆಟ್ಟವರೂ ಹೇಳುವ ಮಾತೇನೋ. ನನ್ನದೇನು ಹೆಚ್ಚು ? ನಂಬಿಕೆ ಹುಟ್ಟಿಸುತ್ತದೆಯೆ?...ಅದೂ ಬೇಡ ಹೋಗಲಿ. ಇನ್ನೇನು?

ಹೀಗೆನ್ನುವುದು: ಹೌದಮ್ಮ, ನಾನು ನಿಮ್ಮೆಲ್ಲರನ್ನೂ ತುಂಬ ಪ್ರೀತಿಸುತ್ತೇನೆ. ಹೌದು ನಮಗಾಗಿರದಿರುವ ಲಕ್ಷಾಂತರ ಮಕ್ಕಳು ಮೊಮ್ಮಕ್ಕಳನ್ನು ನಿಮ್ಮಲ್ಲಿ ಕಾಣುತ್ತ. ಆಗಬಹುದು ತಾನೆ ಎಂದು ಆ ದುಂಡು ಮೊಗದ ಮಗುವಿನ ವಿಚಾರದಲ್ಲಿ ಯೋಚಿಸಿಕೊಂಡಿದ್ದಂತೆ. ಗಿಡದ ಮೇಲಿರುವ ಹೂವನ್ನು ಬರಿ ನೋಡಿ ಸಂತೋಷಪಡಲಾಗುವುದಿಲ್ಲವೆ? ಮುಡಿಯಲು ಆಸೆ ಪಡಲೇಬೇಕೆ? ಗಿಡದ ಮೇಲೆಯೇ ಇರಲಿ ಎನ್ನಬಾರದೆ?' ಎಂದೂ ಸೇರಿಸುವುದು. ಬಾಕಿಯ ವಿಚಾರ ಹೇಳಿದ್ದರೂ, ನನ್ನ ಭಾವನೆಯಾದರೂ ಗೊತ್ತಾಗುತ್ತದೆಯಲ್ಲ ಸ್ಪಷ್ಟವಾಗಿ.

ಅದೂ ಬಹಳ ನಾಟಕೀಯ, ವೃದ್ಧನ ವರಸೆ ವಿಶ್ವಾಸಾರ್ಹವಲ್ಲ ಎಂದುಕೊಂಡು ಇನ್ನೂ ಹೆಚ್ಚು ನಕ್ಕರೇ? ಮೊದಲೇ ಇವರು ಶತಮರ್ಕಟ ವಯಸ್ಸಿನವರು, ನಾನು ಹೆಂಡ ಕುಡಿಸಿದಂತೆ ಚೇಳು ಕುಟುಕಿಸಿದಂತೆ ಆದೀತೋ?

ಬೇಡ ಬೇಡ, "ಹೌದು ತಾಯಿ, ನಾನು ಬಹಳ ಕೆಟ್ಟ ಮನುಷ್ಯ ಕಣಮ್ಮಾ ಏನು ಮಾಡೋದು; ನೀವಾದರೂ ಸಂಭಾವಿತರಾಗಿ," ಎನ್ನೋಣ.

ಊಹುಂ ಅದರಲ್ಲಿ ಇನ್ನೂ ಅವರು ಒಪ್ಪದ ಸ್ವಸಮರ್ಥನೆಯ ಧ್ವನಿ, ಅವರನ್ನು ಆಕ್ಷೇಪಿಸುವ ಧ್ವನಿ ಇದೆ...ಹಾಗೂ ಇರಬಾರದು. ಹಾಗಾದರೆ?

ಹುಂ ಹೀಗೆ: "ಹಾಗೇನಮ್ಮಾ ತಾಯಿ? ನನಗೆ ತಿಳಿದಿರಲಿಲ್ಲ–ತಪ್ಪು ಮಾಡುತ್ತಿದ್ದೇನೆಂದು ದಯವಿಟ್ಟು ಕ್ಷಮಿಸಿಬಿಡಿ. ತಿದ್ದಿಕೊಳ್ಳೋಣ ಸರಿಯೇ" ಎಂದು, ಹೇಗಿದೆ?

ಅದು ನೇರವಾದ down right ತಪ್ಪೊಪ್ಪಿಗೆ. ವಾದ ವಿವಾದಕ್ಕೆ ಎಡೆಗೊಡುವುದಿಲ್ಲ, ಸರಿ.

'ಅದರೆ...'

ಓ, ನಮ್ಮ ರೇಷನ್ ಅಂಗಡಿಗೆ ಬಂದು ಬಿಟ್ಟಿದ್ದೇನೆ. ವಿಪರೀತ ಜನ ತುಂಬಿದ್ದಾರೆ. ನಾನು ಮುನ್ನುಗ್ಗಲು ಇಷ್ಟಪಡುವುದಿಲ್ಲ. ಅದು ಸರಿಯಿಲ್ಲ. ಎಂದಿನಂತೆ ನನ್ನ ಸರದಿಗಾಗಿ ಕಾಯಲು ನಿಶ್ಚಯಿಸುತ್ತೇನೆ. ಅಲ್ಲೆ ಜಗಲಿಯ ಜಾಯಿಕಾಯಿ ಪಟ್ಟಿಗೆಯ ಮೇಲೆ ಕುಳಿತುಕೊಳ್ಳುತ್ತೇನೆ. ಆ ಸಮಯದಲ್ಲೇ ಆ ಆರೇಳು ಮಕ್ಕಳ ಗುಂಪೂ ಅಲ್ಲಿಗೆ ಬರುತ್ತದೆ, ನನ್ನ ಮುಂದೆಯೇ ನಾಲ್ಕೈದು ಹೆಜ್ಜೆ ದೂರದಲ್ಲಿ ನಿಲ್ಲುತ್ತದೆ. ಇವರೇಕೆ ನನಗೆ ಇಷ್ಟು ಹತ್ತಿರ ನಿಂತರು– ಅಲ್ಲಿ ಹೆಂಗಸರ ಗುಂಪಿನ ಬಳಿ ನಿಲ್ಲದೆ? ನಾನು ತಲೆ ತಗ್ಗಿಸುತ್ತೇನಾದರೂ ಅವರ ಅವರ ಲವಲವಿಕೆ ಅಷ್ಟು ಗೋಚರಿಸದೆ ಇರುವುದಿಲ್ಲ, ಮೆಲು ನಗೆ ಮೆಲು ಶಬ್ದ ಕೇಳಿಸದಿರು

ವುದಿಲ್ಲ. ಯಾಕೆ, ನನ್ನ ಗಮನವೆಲ್ಲ ಅವರ ಕಡೆಗೇ ಇದೆ, ಕಾಣದೆಯೂ ಕಂಡು, ಕೇಳದೆಯೂ ಕೇಳಿ.

ಎಕ್ಸರ್‌ಸೈಜ್ ಇದೆಯೇನ್ರಿ? ಜೋರಾದ ಸ್ವರವೊಂದು ಗುಂಪಿನಿಂದ ಕೇಳಿಸುತ್ತದೆ. "ಇದೆ" ಅಂಗಡಿ ಕೃಷ್ಣಪ್ಪ ಹೇಳುತ್ತಾರೆ. ಮತ್ತೆ ಬೆಲೆಯ ಮಾತುಕತೆ ನಡೆದು ಕೃಷ್ಣಪ್ಪ ಈ ಗಿರಾಕಿ ಗುಂಪಿಗೆ ಪ್ರಾಧಾನ್ಯ ಕೊಟ್ಟು ಒಂದು ತೆಳು ಪುಸ್ತಕವನ್ನು ನೆರೆದಿದ್ದ ಇತರ ಗಿರಾಕಿಗಳ ತಲೆಯ ಮೇಲಿನಿಂದ ಹಾಯಿಸಿ ವ್ಯಾಪಾರವನ್ನು ಮುಗಿಸುತ್ತಾರೆ. ಗುಂಪು ಇಷ್ಟರಿಂದೇ ಅಂಗಡಿಗೆ ಪರಿಚಯವಾದದ್ದೇ ಇರಬೇಕು.

ವ್ಯಾಪಾರ ಮುಗಿದರೂ ಗುಂಪು ಅಲ್ಲಿಂದ ಸರಿಯುವುದಿಲ್ಲ.

ಏಕೆ?...ಇನ್ನೇನು ಬೇಕು?...ಏನು ಮಾಡಬೇಕು–ಎಂದಿದ್ದಾರೆ? ನಾನು ತೀಕ್ಷ್ಣವಾಗಿ ಚಿಂತಿಸುತ್ತೇನೆ, ಕುತೂಹಲದಿಂದ. ಪಟ್ಟಿಗೆ ಒತ್ತುತ್ತದೆ. ಚುಚ್ಚುತ್ತದೆ. ಅತ್ತಿತ್ತ ಜರುಗುತ್ತೇನೆ.

"ಸ್ಸ್ ಸ್ಸಿ ಸ್ಸಿ ಹ್ಹಿ ಹ್ಹಿ ಸ್ಸ್ ಸ್ಸ್ ಸ್" ಮಕ್ಕಳ ನಗು–ಅರ್ಧರ್ಧ ಒತ್ತಿದಂತೆ, ಒತ್ತಿಹಿಡಿಯಲಾರದಂತೆ.

'ಹೂಂ!...ಏನು ಇವರ ಆಟ ? ಮಕ್ಕಳ ಮಾಮೂಲಿಯೋ?......ನನಗೇ ಸಂಬಂಧಿಸಿದ್ದೋ? ನನ್ನ ಕಡೆಗೆ ನೋಡುತ್ತಿದ್ದಾರೇ?'

ಅಂಗಡಿಯ ಕಡೆಗೆ ನೋಡಲು ತಲೆ ಎತ್ತಿ ತಿರುಗಿಸಿದಾಗ ನನ್ನ ಕಣ್ಣು ಇವರ ಮೇಲೆ ಹಾಯ್ದು ಹೋಗುತ್ತದೆ.

ಹೌದು, ಅವರ ಕಣ್ಣುಗಳೆಲ್ಲ ಇತ್ತಲೇ ಇವೆ. ಹಲ್ಲುಗಳೆಲ್ಲ ಕಾಣುತ್ತಿವೆ. ಒಬ್ಬರ ಕಿವಿಯಲ್ಲೊಬ್ಬರು, ಒಬ್ಬಳನ್ನು ಕೇಳುತ್ತ ಕೆಲವರು, ಪಿಸಿಗುಟ್ಟುತ್ತಿದ್ದಾರೆ, ಒಬ್ಬರ ಬೆನ್ನನ್ನು ಇನ್ನೊಬ್ಬರು ಇಬ್ಬರು ಮೂವರು ತಿವಿಯುತ್ತಿದ್ದಾರೆ – ಮುಂದೆ ದಬ್ಬುವಂತೆ ಗಿರಾಕಿಗಳು ಎಷ್ಟೋ ಇತ್ತಲೇ ನೋಡುತ್ತಿದ್ದಾರೆ ಇವರನ್ನು.

ನನ್ನ ಮೈ ಶಾಖ ಏರುತ್ತದೆ, ಮೇಲೆ ಮೇಲೆ. 'ಹೋಗೇ ನೀನೇ ಹೋಗೇ ಹೇಳಿದ್ದೆಯಲ್ಲಿ ಉಹುಂ ನೀನು ನೀನು ನೀನೇ? ಶ್ಶಸ್‌ಸ್ ...ಫ್ ಫ್'

ಏನು ಅಡಬೇಕೆಂತಿದ್ದಾರೆ? ಮಾಡಹೋದಿದ್ದಾರೆ? ಇಷ್ಟು ಜನಗಳ ಮುಂದೆ?'

ನನ್ನ ಉಸಿರು ಹತ್ತಿಹತ್ತಿ ಬರುತ್ತಿದೆ.

ಹೋಗೆ ಮತ್ತೆ: 'ಹೋಗೆ ಹೋಗೆ ಹುಂ ಹೋಗೇ.'

ಎಲ್ಲರೂ ಸೇರಿ ಒಬ್ಬಳನ್ನು ನೂಕುತ್ತಾರೆ, ನಗು ನಗುತ್ತಲೇ ನನ್ನ ಮುಂದಕ್ಕೇ...

ನೂಕಿಸಿಕೊಂಡ ಧೈರ್ಯಸ್ಥೆ ಬಂದು ನನ್ನ ಮುಂದೆಯೇ ನಿಂತಾಗ, ನಾನು ಪೂರ್ಣಿಯಾಗಿ ತಲೆಯೆತ್ತುತ್ತೇನೆ ಅವಳನ್ನು ಹಲ್ಲು ಕಿರಿದು ಫ್ ಫ್ ಎಂದು ನಗುತ್ತ ಬಹಳ ಕಷ್ಟದಿಂದ ಮತ್ತೆ ಮತ್ತೆ ಬಾಯಿ ಮುಚ್ಚಿ ತುಟಿ ಬಿಗಿ ಹಿಡಿಯುವ ಅವಳ ಕೆಂಪೇರಿದ ಮುಖವನ್ನು ಕಾಣುತ್ತೇನೆ.

"ನ..."ಅವಳ ಮಾತು ಅಷ್ಟಕ್ಕೆ ನಿಲ್ಲುತ್ತದೆ.

ಏನು ಈ ಮಗು ಹೇಳಬೇಕೆಂದಿರುವುದು? ನನ್ನ ಎದೆ ಎದ್ದೆದ್ದು ಬೀಳುತ್ತದೆ. ಡವಡವ ಹೊಡೆದುಕೊಳ್ಳುತ್ತದೆ. ಬಾರಿಸಿದ ನಗಾರಿ:

...ನ...ಫ್! ಮಾತು ತಡೆಯಲಾರದ ನಗುವಿನಲ್ಲಿ ಕೊನೆಯಾಗುತ್ತದೆ. 'ಉಪಹಾರದ' ಚಿತ್ರದ ಜಯಾ ಭಾದುರಿಯ ನಗುವಿನಂತೆ.

ನಾನು ನೇರ ನೋಟವನ್ನು ತಗ್ಗಿಸುತ್ತೇನೆ.

"ನೀ...ನರ...ಸ್ ಸ್"

ಇತರ ಮಕ್ಕಳಂತೂ ಸ್ಪಷ್ಟವಾಗಿಯೇ ಕಿಲಕಿಲ ನಗುತ್ತಿದ್ದಾರೆ.

"ನೀ...ನರ...ಹರಿ ಸ್"

ಏನೂ. ನನ್ನನ್ನು ನರಹರಿ ಆ ಕಥೆಯ ಮಾನವ ವ್ಯಾಗ ಅಪಾಪೋಲಿ ಅನ್ನುತ್ತಿದ್ದಾಳೇ?

ನನ್ನ ಮೈ ಮುಳ್ಳು ಮುಳ್ಳಾಗುತ್ತದೆ.

"...ನರಹರೀ..."

ನಾನೇನು ಹೇಳಬೇಕು?...ಇದಕ್ಕೆ? ಏನು? ಏನು?...ನಾನು ಅಷ್ಟೊಂದು ಯೋಚಿಸಿ ಗುಟ್ಟು ಮಾಡಿಕೊಂಡ ಉತ್ತರಗಳಲ್ಲೊಂದೂ ಸಹಾಯಕ್ಕೆ ಬರುತ್ತಿಲ್ಲವಲ್ಲ. ಮರೆತು ಹೋಗಿವೆಯಲ್ಲ ಎಲ್ಲ ವಿದ್ಯೆಯಾಗಿ. ಆ ಏನು ಹೇಳಲಿ ಇವಳಿಗೆ?

ನಾಲಿಗೆ ಒಣಗಿದೆ. ಸ್ವರ ಹೊರಡದು. ಮೈ ಛಿಲ್ಲೆಂದು ಬೆವರು ಕಿತ್ತುಕೊಳ್ಳುತ್ತಿದೆ. ನಾನು ಏನನ್ನೂ ಹೇಳುವದಿಲ್ಲ. ತಲೆ ತಗ್ಗಿಸಿ ನಾನು

ಛಲೆ ವಿಜಯ, ಮ್ಯಾಚಿಗೆ ಜಯ, ಬಟ್ಟೆ ಕೊಳೆಯಾದ್ರೆ ಎಲ್ಲಿದೆ ಭಯ?



"ವಿಜಯಶಾಲಿ
ಶರ್ಟ್ ಅಮ್ಮಾ,
–ಮತ್ತೆ ಅದೇ
ಬಿಳುಪು!"

# ಹೈ ಪವರ್ ಸರ್ಫ್
# ಅಪರಿಮಿತ ಬೆಳ್ಳಗೆ ಒಗೆಯುತ್ತದೆ...
# ಅದು ಪ್ರತ್ಯಕ್ಷ ಕಾಣುತ್ತದೆ.




ಬಿಳಿಯ ಬಟ್ಟೆಗಳಿಗೆ ಉತ್ತಮ, ಬಣ್ಣದ ಬಟ್ಟೆಗಳಿಗೂ ಅನುಪಮ

ನಿಸುತ್ತೇನೆ. ಈ ಮಕ್ಕಳು ಈ ಗಿರಾಕಿಗಳ ಗಮನ ವೆಲ್ಲ ನನ್ನ ಮೇಲೆ ಇದೆಯೆಂದು ಊಹಿಸುತ್ತೇನೆ.

"...ನರಹರಿ...ನೀವು...ಹ್ಹ!"

ಮೈ ಒಳಗೆ ನಡುಗುತ್ತದೆ. ಉಸಿರು ಸಿಕ್ಕಿಕೊಂಡಂತಾಗುತ್ತದೆ. ಬೆವರು ಇಳಿಯುತ್ತದೆ. ಹೇಗೋ ತಲೆಯೆತ್ತಿ ಹುಬ್ಬು ಕೂಡಿಸಿ ಅವಳನ್ನು ನೋಡಲು ಸಮರ್ಥನಾಗುತ್ತೇನೆ, ಅಷ್ಟೇ ಅಲ್ಲ ಲ್ಲರ ಮುಖಗಳೂ ಈಗ ನಗುತ್ತಿರುವುದನ್ನು ಗಮನಿಸುತ್ತೇನೆ. ಒಳ ಮುಜುಗರ ಸಹಿಸಲಾರದಾಗುತ್ತದೆ. ಕೂಡಲೇ ಅಲ್ಲಿಂದ ಎದ್ದು ಓಡಿ ಹೋಗಬೇಕೆಂದೆನಿಸುತ್ತದೆ. ಏಳ ಹೋಗುತ್ತೇನೆ ಆದರೆ ಏಳುವುದಿಲ್ಲ.

"...ನೀವು—" ಅವಳ ಮುಂದಿನ ಮಾತು ಮಕ್ಕಳ, ಇತರರ ಗೊಳ್ಳೆಂದು ನಗುವಿನಲ್ಲಿ ಮುಳುಗಿ ಹೋಗುತ್ತದೆ.

ಈಗ ನಾನು ನಿಶ್ಚೇಷ್ಟಿತನಾಗಿಬಿಟ್ಟಿದ್ದೇನೆ. ಮೈ ಮನಗಳೆರಡೂ ಸ್ಥಗಿತವಾಗಿವೆ. ಕೆಟ್ಟ ಕನಸನ್ನು ಕಾಣುತ್ತ ಚಲಿಸಲಾರದೆ ಕೂಗಿಕೊಳ್ಳಲಾರದೆ ಇರುವಂತೆ ಹೊರಗೆ ಶಿಲೆಯಂತಿದ್ದರೂ ಒಳಗೆ ಧಗೆ ಧಗೆ ಉರಿ ಉರಿ ಒಳಗೆ ತಳಮಳ ಕುದಿಯುವ ಅಗ್ನಿಪರ್ವತ.

"ನೀವು...ಬರೆದದ್ದಾ ಸಾರ್ ಕಥೆ?"

'ಆ?'

ತಟ್ಟನೆ ನನಗೆ ಬಾಯಿ ಬರುತ್ತದೆ, ಯಕ್ಷಿಣಿಯಾದಂತೆ ಒತ್ತಿಟ್ಟ ಸ್ಪ್ರಿಂಗ್ ಒಮ್ಮೆಲೇ ಭಾರ ಕಳೆದು ಬಿಚ್ಚಿಕೊಂಡಂತೆ. ಇಷ್ಟು ಕಾಲದ ಬಿಗಿವು ಪಾರ್ಕಿನಿಂದ ಮೊದಲಾಗಿ ಹಂತಹಂತದಲ್ಲಿ ಹತ್ತಿ ಬಂದಿದ್ದು ಜರ್ರೆಂದು ಇಳಿದು ಬಿಡುತ್ತದೆ. ಪಾರ್ಕಿನ ಜಾರುಗುಪ್ಪೆಯನ್ನು ಮೆಲ್ಲಮೆಲ್ಲಗೆ ಮೇಲೆ ಹತ್ತಿದ್ದ ಮಗು ಒಂದೇ ಕ್ಷಣದಲ್ಲಿ ಕೆಳಕ್ಕೆ ಜಾರುವಂತೆ. ಅಥವಾ ಸನ್ನಿಯ ಜ್ವರ ಬಿಟ್ಟ ಮೇಲೆ ಬರುವ ಶಾಂತಿಯಂತೆ ಎನ್ನಲೋ?

'ಓ...' ಎಂದುಕೊಳ್ಳುತ್ತೇನೆ. ನನಗೆ ನಾನೇ ಪರಿಹಾಸದಿಂದ. ನಾನು ಇಲ್ಲಿ ಅಜ್ಞಾತನಾಗಿದ್ದೇನೆ ನೆಂದುಕೊಂಡಿದ್ದೆನಲ್ಲ!'

ಎಲ್ಲರೂ ಇನ್ನೂ ನಗುತ್ತಲೇ ಇದ್ದಾರೆ. ನನಗೂ ಈಗ ನಸುನಗು ಬರುತ್ತದೆ. ಅವರೊಂದಿಗೆ ಸೇರಿಕೊಳ್ಳುತ್ತೇನೆ.

'ಯಾಕಮ್ಮಾ ತಾಯಿ?' ಆ ಮಗುವನ್ನು ಇತರರನ್ನೂ. ನೇರವಾಗಿ ನೋಡುತ್ತ ಕೇಳುತ್ತೇನೆ.

'ತುಂಬಾ ಚೆನ್ನಾಗಿತ್ತು ಸಾರ್...ಹ್ಹ ಹ್ಹ ಹ್ಹ ಜೋರಾಗಿ ನಗುತ್ತಾಳೆ.

ಹೌದು ಸಾರ್, ಹೌದು ಸಾರ್, ಇತರ ಮಕ್ಕಳೂ ಒಬ್ಬಿಬ್ಬರು ಅಂಗಡಿ ಗಿರಾಕಿಗಳೂ ಅವಳೊಂದಿಗೆ ಸೇರಿಕೊಳ್ಳುತ್ತಾರೆ.

ಆಗಲೇ ಮೇಲೆ ಕವಿದಿದ್ದ ದಟ್ಟ ಕಪ್ಪು ಮೋಡಗಳಿಂದ ದಪ್ಪ ದಪ್ಪ ಹನಿಗಳು ತುಪತುಪನೆ ಬೀಳಲಾರಂಭಿಸುತ್ತವೆ. ಮಕ್ಕಳು ಕೇಕೇನೆ ನಗುತ್ತ ಕೂಗಾಡುತ್ತ ಸೆರಗನ್ನು ತಲೆಗೆ ಹೊದಿಸಿಕೊಳ್ಳುತ್ತ ಕೂಡಲೆ ಚದರಿ ಓಡಿ ಹೋಗಿ ಅಲ್ಲಲ್ಲಿ ಮಾಯವಾಗುತ್ತಾರೆ. ನಾನು ಪೆಟ್ಟಿಗೆಯಿಂದ ಮೇಲೆದ್ದು ರೇಷನ್ನಿಗೂ ಕಾಯದೆ ಮೆಟ್ಟಿಲಿಳಿದು ಆ ತಂಪು ಮಳೆಯೊಳಗೆ ಹಾಯಾಗಿ ತೊಯ್ಯುತ್ತ ನಿಧಾನವಾಗಿ ಮನೆಯ ಕಡೆಗೆ ಹೆಜ್ಜೆ ಹಾಕುತ್ತೇನೆ. 'ಶುದ್ಧ ಅವಿವೇಕ!...ಶುದ್ಧ ಅವಿವೇಕ!' ಎಂದು ಹಲವು ಬಾರಿ ಹೇಳಿಕೊಳ್ಳುತ್ತ. ✡



ದೃಢ ಮತ್ತು ಅಚಲ ನಿರ್ಧಾರವನ್ನು ಹೊಂದಿರುವ ವ್ಯಕ್ತಿ ಪ್ರಪಂಚವನ್ನೇ ತನ್ನ ಉಡಿಯಲ್ಲಿ ಹಾಕಿಕೊಳ್ಳಬಲ್ಲ.

— ಗಯಟೆ

Printed & published by M. N. Mahishi on behalf of the Administrator, Loka Shikshna Trust, at Samykuta Karnatak Press, Koppikar Road, Hubli-580 020. Rept : Bombay; V. Satyamurthy Phone: 522412 Calcutta: H. Majumdar Phone: 46-4233 Madras: K. A. Subramanian Phone: 842201; New Delhi; P. R. Chopra Phone: 714130.

ಸಾವಿರಾರು ಕುಟುಂಬಗಳು, ಚಿರಕಾಲದಿಂದ
ಬಳಕೆಯಲ್ಲಿರುವ ಲವಂಗದೆಣ್ಣೆಯ
ಗುಣಗಳನ್ನು ಪ್ರಾಮಿಸ್‌ನಲ್ಲಿ ಕಾಣುತ್ತವೆ.

# ಲವಂಗದ ಎಣ್ಣೆಯುಳ್ಳ ಅಪೂರ್ವ ಟೂಥ್‌ಪೇಸ್ಟ್ ಪ್ರಾಮಿಸ್

ನೀವೂ ಇದನ್ನು ಉಪಯೋಗಿಸಬಹುದಲ್ಲ!






## ಪ್ರಾಮಿಸ್

ದಂತಕ್ಷಯವನ್ನು ತಡೆಗಟ್ಟಲು ನೆರವಾಗುತ್ತದೆ,
ಶ್ವಾಸದ ದುರ್ಗಂಧವನ್ನು ನಿವಾರಿಸಿ
ಬಾಯಿಯನ್ನು ಸ್ವಚ್ಛಗೊಳಿಸುತ್ತದೆ




3 ಬಲ್ಸಾರಾ ತಯಾರಿಕೆ




Monde Selection
Gold Medal ...

ಅಧಿಕ ಆರೋಗ್ಯವುಳ್ಳ ಹಲ್ಲು ಮತ್ತು ಒಸಡುಗಳು
ಆಹ್ಲಾದಕರ ಶ್ವಾಸ—
ಅದಕ್ಕಾಗಿ ಪ್ರಾಮಿಸ್

CHAITRA-BLS-453 R KAN

ಖಾಲಿ ಟ್ಯೂಬಗಳ ಕೊಡುಗೆಯ ಕೊನೆಯ ದಿನಾಂಕವನ್ನು ಅಂತಿಮವಾಗಿ
೩೧ನೇ ಡಿಸೆಂಬರ ೧೯೮೨ ರ ವರೆಗೆ ವಿಸ್ತರಿಸಿದೆ

Registered with the Registrar of Newspapers for India under No. 3533/57